ಎಡೆಗಳು ಹೇಳುವ

# ಕಂನಾಡ ಕತೆ

**ಬಲ್ಲಿರಾ**

ಕಂನಾಡ ಊರ ಹೆಸರಿನ ಸೊಗಸು? ಕಂನಾಡ ಮೊದಲಿಗರ ಪ್ರಾಚೀನತೆ? ವೇದಕಾಲದಿಂದ ಇವರ ಕತೆ? ಪಂಜಾಬಿನಿಂದ ಬಂಗಾಳದ ವರೆಗಿನ ಕಂನಾಡವರ ಪ್ರಭಾವ? ಕುರುಬರು, ತುರುಕಾರರು, ತುಳುವರು, ಕುಡುಒಕ್ಕಲರು, ನಾಡವರು, ರಟ್ಟಗಳು— ಈ ನಮ್ಮ ಗೌಡ-ಪಾಟಿಲರ ಚರಿತೆ? ಬೇಡರು, ಬಿಲ್ಲವರು, ಅಂಬಿಗರ ಪ್ರಾಚೀನತೆ? ಬ್ರಾಹ್ಮಣರು, ದೇಶಸ್ಥರು, ಗೌಡರು, ಸಾರಸ್ವತರು, ಹವ್ಯಕರು, ಯಜುರ್ವೇದಿಗಳವಿಚಾರ? ಶಿಷ್ಟರು ಜಂಗಮರು, ಯತಿಗಳು? ಸಂಸ್ಕೃತಿ, ಅದರ ವೈಶಿಷ್ಟ್ಯ? ಹಾಗಾದರೆ ಒಮ್ಮೆ ಓದಿ ನೋಡಿ.

ಮಾಧವ ಬಲ್ಲಾಳ ಬಂಧುಗಳು
ಧಾರವಾಡ

ಎಡೆಗಳು ಹೇಳುವ

# ಕಂನಾಡ ಕತೆ

ಶಂ. ಬಾ. ಜೋಶಿ

೧೯೪೭

ಮಾಧವ ಬಲ್ಲಾಳ ಬಂಧುಗಳು
ಧಾರವಾಡ

# ಅರಿಕೆ

**ಪಲವುಂ ನಾಲಗೆಯುಳ್ಳವಂ ಬಗೆವೊಡೆಂದುಂ ಬಣ್ಣಿಸಲ್ಕಾರನಾ–**
**ನೆಲನಂ ಮತ್ತಿನ ಮಾನಿಸರ್ ಪೊಗಳಲೇನಂ ಬಲ್ಲರ್ ?**

— ಆಂಡಯ್ಯ

ಶ್ರೀ ಆಂಡಯ್ಯ ಕವಿಯು ಹೇಳಿರುವಂತೆ ಸಾವಿರನಾಲಗೆಯ ಆದಿಶೇಷನಿಗೂ ಅಸಾಧ್ಯವಾದುದನ್ನು ಒಂದು ನಾಲಗೆಯೂ ಸರಿಯಾಗಿ ಇಲ್ಲದ ನನ್ನಂತಹನು ಸಾಧಿಸಲು ಹಂಬಲಿಸುವುದು ಹುಚ್ಚು ಸಾಹಸವೆ ಸರಿ. 'ಕೊಡದೊಳಗೆಷ್ಟು ನಿಲ್ವುದು ಸಮುದ್ರ ಜಲಂ? ಕನ್ನಡಿಯೊಳಗೆಷ್ಟು ತೋರ್ಪುದ ಸರಕಾಂಚನಾದ್ರಿ?' ಎಂದು ಶ್ರೀ ರತ್ನಾಕರವರ್ಣಿಯ ಇನ್ನೊಂದು ಪ್ರಸಂಗದಲ್ಲಿ ಆಡಿದ ಮಾತುಗಳೂ ಇಲ್ಲಿ ಸರಿಹೋಗುತ್ತವೆ.

ಇಷ್ಟೆಲ್ಲವೂ ನಿಜವಿದ್ದರೂ ಜಲಧಿಯ ನೀರು ಅನಂತವೆಂದು ಕೊಡದೊಳಗೆ ತುಂಬಿಕೊಳ್ಳುವುದನ್ನು ಯಾರೂ ಬಿಟ್ಟಿಲ್ಲ; ಹಿಮವತ್ಪರ್ವತವು ಅಗಮ್ಯ ಮತ್ತು ಅಸಾಧ್ಯವಾದರೂ ಅದನ್ನು ಚಿತ್ರಫಲಕದಲ್ಲಿ ಚಿತ್ರಿಸಬೇಕೆಂಬ ಕುತೂಹಲ ಕಡಿಮೆಯಾಗಿಲ್ಲ; ಅನೇಕ ದೃಷ್ಟಿಯಿಂದ ಅಸಂಪೂರ್ಣವೆನಿಸಿದರೂ ಭೂಪಟಗಳನ್ನು ಬರೆಯುವುದು, ಭೂವರ್ಣನೆಗಳನ್ನು ಪ್ರಕಟಿಸುವುದು ನಿಂತಿಲ್ಲ. 'ಇದು ಸಾವಿರನಾಲಗೆಯ ಅನಂತನಿಗೇ ಅಸಾಧ್ಯ. ಆದಕಾರಣ ನೆಲದ ಬಣ್ಣನೆಗೆ ಸುಮ್ಮನೆ ಯಾರೂ ಬಾಯಿಹಾಕಬಾರದು', ಎಂದು ಶ್ರೀ ಆಂಡಯ್ಯನ ಅಭಿಪ್ರಾಯವಾದರೂ ಇದ್ದಿಲ್ಲ. ಹಾಗೆ ಅವನ ಅಭಿಪ್ರಾಯವೆ ಇದ್ದುದಾಗಿದ್ದರೆ, ಕಬ್ಬಿಗರಕಾವದಲ್ಲಿ ಕಂನಾಡ ಬಣ್ಣನೆಗೆ ಏಕೆ ತೊಡಗುತ್ತಿದ್ದನು? ಪ್ರಯತ್ನ ಮಾಡುವುದು ಪ್ರತಿಯೊಬ್ಬರ ಕರ್ತವ್ಯವೇ ಆಗಿದೆ. ಪ್ರತಿಯೊಬ್ಬರೂ ತಮ್ಮ ಅಳವಿಗನುಸರಿಸಿ ಪ್ರಯತ್ನ ಮಾಡಲೇಬೇಕು. ಮಾಡದೆ ಇದ್ದರೆ ಅದುವೆ ಅಧರ್ಮ. ಆದರೆ ತಾನು ಮಾಡಿದ್ದುದು ಒಂದು 'ಪ್ರಯತ್ನ' ಎಂಬ ಅರಿವು ಮಾತ್ರ ಸದಾ ಜಾಗ್ರತವಾಗಿರಬೇಕು. ಆದ ಕೆಲಸದ ಸಂಭ್ರಮದಲ್ಲಿ 'ಪ್ರಯತ್ನ'ವನ್ನು ಪರಿಪೂರ್ಣವೆಂದು ಬಗೆಯುವುದು ತಪ್ಪು. ಮುಂದಿನ ಎಲ್ಲ ಅನರ್ಥಪರಂಪರೆಗಳ ಉಗಮಸ್ಥಾನವೆ ಇದು.

ನನ್ನದು ಇದೊಂದು ಪ್ರಯತ್ನ. ಈ ಅಲ್ಪ ಪ್ರಯತ್ನವೆ ಕೈಗೂಡಬೇಕಾದರೆ ಅದೆಷ್ಟು ಜನರ ನೆರವು ಪಡೆಯಬೇಕಾಯ್ತು! ಶ್ರೀಯುತರಾದ ಕಪಟರಾಳ ಕೃಷ್ಣರಾಯರು, ಪ್ರಾ. ಭಿ. ದೇಸಾಯರು, ಎಂ. ವಾಸುದೇವರಾಯರು, ಹೆಗ್ಗಡೆ ಬಂಧುಗಳು, ಡಾ. ಉಪಾಧ್ಯೆ, ಪ್ರೊ. ಕುಂಪಣಗಾರ, ಧೋ. ರಾ. ದೇಶಪಾಂಡೆ, ಪ್ರೊ. ಸಿ. ಡಿ. ದೇಶಪಾಂಡೆ, ಜೀಚಿ, ನೆರಂಗರು, ಮುಳಗುಂದ ಕಾಶೀನಾಥ ಶಾಸ್ತ್ರಿಗಳು, ಪಂ. ಕೇಶವಶರ್ಮ, ಎಸ್. ಜಿ. ನಾಯಕ, ಪ್ರಯಾಗ (ರಾವಸಾಹೇಬ) ಪ್ರೊ. ಎಂ. ಮರಿಯಪ್ಪಭಟ್ಟ, ಪ್ರೊ. ಪುರಾಣಿಕ ಪದ್ಮನಾಭರಾವ, ಎ. ಎಂ. ಅಣ್ಣಿಗೇರಿ, ಆರ್. ವ್ಹಿ. ಕುಲಕರ್ಣಿ, ಚುಳಕಿ, ಮೊದಲಾದವರು ಎಡೆಗಳ ಪಟ್ಟಿಯನ್ನು ಪೂರಯಿಸಿ, ವಿಚಾರವಿನಿಮಯಕ್ಕೆ ನೆರವಾಗಿ, ಹೊಸ ಸೂಚನೆಗಳನ್ನು ಕೊಟ್ಟು ಬಗೆ ಬಗೆಯಾಗಿ ಸಹಾಯವನ್ನು ಕೊಟ್ಟಿದ್ದಾರೆ. ಥಿಟೆ, ಕುಲಕರ್ಣಿಯವರು ಆರಂಭದಲ್ಲಿ ಬರೆವ ಕೆಲಸವನ್ನು ಸ್ವಲ್ಪ ಹಗುರು ಮಾಡಿದರು. ಶ್ರೀ ಕುಲಕರ್ಣಿ ಶೇಷಗಿರಿರಾಯರು ಸಕಾಲದಲ್ಲಿ ಮುದ್ರಿಸಿಕೊಟ್ಟರು.

ಆರೋಗ್ಯವು ಪೂರ್ಣ ಕೆಡುವ ಮೊದಲೆ ಕೈಯಲ್ಲಿರುವ ಅರ್ಧಮರ್ಧ ಕೆಲಸಗಳನ್ನು ಮುಗಿಸಿಕೊಳ್ಳಬೇಕೆಂಬ ಎಣಿಕೆಯಿಂದ ಹೈಸ್ಕೂಲಿನ ಕೆಲಸವನ್ನೂ ಬಿಟ್ಟುದಾಯ್ತು. ಅಂತೂ ಈ ಪುಸ್ತಕದ ಕರಡೂ ಸಿದ್ಧವಾಯಿತು. ಆದರೆ ಬೇಗ ಅಚ್ಚಾಗುವ ಲಕ್ಷಣವಿದ್ದಿಲ್ಲ. ಇದನ್ನರಿತ ಕಂನಾಡ ಅಭಿಮಾನಿಗಳಾದ ಶ್ರೀ ಮೆಳ್ಳಿಗಟ್ಟಿ ಮಧ್ವರಾಯರು ೨೫೦ ರೂ.ಗಳ ಧನಸಹಾಯವನ್ನಿತ್ತು ನನ್ನ ಕೆಲಸವನ್ನು ಮುಂದುವರಿಸಹೇಳಿದರು. ಈ ಪುಸ್ತಕದಲ್ಲಿ ಕಂನಾಡು-ಮರ್ಹಾಟಗಳ ಪ್ರಾಚೀನ ಸಾಂಸ್ಕೃತಿಕ ಸಂಬಂಧಗಳ ಸಂಶೋಧನೆಯು ಅಡಕವಾಗಿರುವುದರಿಂದ ಸಾಂಗಲಿ ಸಂಸ್ಥಾನದ ಲೋಕಪ್ರಿಯ ಮಂತ್ರಿಗಳು ೨೦೦ರೂ.ಗಳ ಕೊಡುಗೆಯನ್ನು ಅನುಗ್ರಹಿಸಿ ಪ್ರೋತ್ಸಾಹಿಸಿದರು. ಇಂತಿವರ ನೆರವಿನಿಂದ ಪ್ರಕಟನೆಗಾಗಿ ಮಾಡಬೇಕಾದ ಸಾಲದ ಭಾರವು ಅರ್ಧದಷ್ಟಾದರೂ ಕಡಿಮೆಯಾದುದಕ್ಕಾಗಿ ಅವರಿಗೆ ನನ್ನ ಕೃತಜ್ಞತೆಯ ವಂದನೆಗಳು.

ಊರ ಹೆಸರಿನಂತಹ ಕ್ಷುಲ್ಲಕವಾಗಿ ತೋರುವ ವಿಷಯದಲ್ಲಿ ಇಷ್ಟೊಂದು ಸಾಂಸ್ಕೃತಿಕ ಸಂಗತಿಗಳು ಹುದುಗಿಕೊಂಡಿವೆಯೆಂಬ ಕಲ್ಪನೆಯ ಮೊದಲು

ನನಗೆ ಇಲ್ಲಿ ನಮ್ಮ ನಾಡಿನ ಎಡೆಗಳ ಹೆಸರಿನ ಅಭ್ಯಾಸಕ್ಕೊಂದು ವಿಶೇಷ ಮಹತ್ವವುಂಟೆಂದು ಇದನ್ನು ಬರೆವಾಗ ನನ್ನ ಮನವರಿಕೆಯಾಗಿದೆ. ಭಾರತದ ಸಾಂಸ್ಕೃತಿಕ ಇತಿಹಾಸದೊಳಗಿನ ಕೆಲವೊಂದು ಸಮಸ್ಯೆಗಳು ಈ ವರೆಗೆ ಸಂದಿಗ್ಧವಾಗಿ ಹಾಗೆಯೇ ಉಳಿದುಕೊಂಡಿವೆ. ನಮ್ಮ ನಾಡಿನ ಎಡೆಗಳ ಹೆಸರಿನಲ್ಲಿ ಆ ಸಮಸ್ಯೆಗಳನ್ನು ಬಿಡಿಸಿ ಬಗೆಹರಿಸುವ ಸಾಮರ್ಥ್ಯವಿದೆ. ಮಹಾರಾಷ್ಟ್ರ, ಗುಜರಾತ, ಬಂಗಾಲ, ಪಂಜಾಬಗಳ ವರೆಗೂ ಇದ್ದ ಕನ್ನಾಡ ಮೊದಲಿಗರ ಪ್ರಾಚೀನ ಸಂಬಂಧದ ಮೇಲೂ ಈ ಅಭ್ಯಾಸದಿಂದ ಹೊಸ ಬೆಳಕು ದೊರೆವಂತಿದೆ

ಎಡೆಗಳ ಹೆಸರಿನ ಹಿನ್ನೆಲೆಯಲ್ಲಿ ನಮ್ಮ ನಾಡಿಗರ ರೂಢಿ, ಸಂಪ್ರದಾಯ ಮತ್ತು ಪೂರ್ವಪರಂಪರೆಗಳನ್ನು ಮಾನವಸಮಾಜವಿಕಾಸಶಾಸ್ತ್ರದ ಬೆಂಬಲದಿಂದ ಹೊಂದಿಸಿ ಹೇಳುವುದೆ ಈ ಲೇಖನದ ಗುರಿಯಾಗಿದೆ. ಇದಕ್ಕೆ ಆಧಾರವಾಗಿ ಇನ್ನುಳಿದ ಸಾಧನಗಳನ್ನೂ ಉಪಯೋಗಿಸಿಕೊಂಡಿದೆ ಶಾಸನ, ಭಾಷಾಶಾಸ್ತ್ರ, ಸಾಹಿತ್ಯದ ಆಧಾರಗಳನ್ನು ನನ್ನ ಕೈಗೆ ಸಿಲುಕಿದಷ್ಟು ಬಳಸಿಕೊಂಡಿದ್ದೇನೆ ಇವಕ್ಕೇ ಪ್ರಥಮಸ್ಥಾನವನ್ನು ಕೊಟ್ಟು ಪರಂಪರೆಗಳನ್ನು ಅಲ್ಲಗಳೆವುದಕ್ಕೆ ಮನಸು ಮಾಡಿಲ್ಲ. ಏಕೆಂದರೆ ಸಂಪ್ರದಾಯ, ಪೂರ್ವಪರಂಪರೆಗಳು ಪ್ರತ್ಯಕ್ಷ ಜೀವನದ ಭಾಗವಾಗಿದ್ದು, ಶಾಸನಾದಿಗಳು ಅದರ ನೆಳಲು ಆದುದರಿಂದ ಅವುಗಳಿಗೆ, ನನ್ನ ತಿಳುವಳಿಕೆಯಂತೆ, ಗೌಣಸ್ಥಾನವಲ್ಲದೆ ಪ್ರಥಮಸ್ಥಾನವು ದೊರೆಯಲಾರದು.

ಎಲ್ಲಿ ಪರಂಪರೆಗಳು, ಪೂರ್ವ ಸಂಪ್ರದಾಯಗಳೇ ನಷ್ಟವಾಗಿವೆಯೊ ಅಲ್ಲಿ ಶಾಸನಾದಿ ಲಿಖಿತ ಆಧಾರದಿಂದಲೆ ಸಂಶೋಧನೆಗೆ ಮೊದಲು ಮಾಡಬೇಕಾಗುತ್ತದೆ. ಇಜಿಪ್ತ, ಅಸ್ಸೀರಿಯಾ, ಬಾಬಿಲೋನಿಯಗಳ ಸಂಸ್ಕೃತಿಯ ಪರಂಪರೆಗಳನ್ನು ಕಾಯ್ದುಕೊಂಡು ಬಂದ ಒಂದು ಪೀಳಿಗೆಯೂ ಈಗ ದೊರೆಯುವದಿಲ್ಲವಾದುದರಿಂದ ಅಲ್ಲಿ ಲಿಖಿತ ಆಧಾರಗಳ ಹೊರತು ಬೇರೆ ಗತಿಯೇ ಇಲ್ಲ ಆದರೆ ಕನ್ನಾಡಿನಂತಹ ಜೀವಂತ ಪರಂಪರೆಗಳನ್ನು ಶಕ್ಯವಿದ್ದಷ್ಟೂ ಈ ವರೆಗೆ ಕಾಯ್ದುಕೊಂಡು ಬಂದಿರುವ ನಾಡಿನ ಆಗುಹೋಗುಗಳನ್ನು ಬರೆವಾಗ ಬರಿ ಕಲ್ಬರೆಹಗಳನ್ನೆ ಅವಲಂಬಿಸಿದರೆ ಆ ಇತಿಹಾಸವು ಅಪೂರ್ಣವಾಗುವುದೆಂಬ ಹೆದರಿಕೆ ನನಗೆ.

ನಮ್ಮ ಪೂರ್ವಿಕರು ಹಿಂದಿನ ಪರಂಪರೆಗಳನ್ನು ಆದೆಷ್ಟು ಜತನದಿಂದ ಕಾಯ್ದುಕೊಂಡು ಬಂದಿರುವರೆಂಬುದನ್ನು ಗಮನಿಸಿದರೆ ಅವುಗಳು ನಮ್ಮ ಸಂಸ್ಕೃತಿ ಸಂಶೋಧನೆಯಲ್ಲಿ ವಿಶ್ವಾಸಾರ್ಹವಾದ ಆಧಾರಗಳಾಗಲು ಅರ್ಹವಾಗಿವೆಯೆಂದು ಒಪ್ಪಿಕೊಳ್ಳಲೇ ಬೇಕಾಗುವುದು. ಕುಲ ಗೋತ್ರ, ಸೂತ್ರಗಳ ನೆನಹು ಕೆಲವು ವರ್ಗಗಳಲ್ಲಿ ತಲೆ ತಲಾಂತರಗಳಿಂದ ಅವಿಚ್ಛಿನ್ನವಾಗಿ ಉಳಿದುಕೊಂಡು ಬಂದಿದೆ ಶಾಸನಗಳ ಆಧಾರಗಳು ದೊರೆಯುವುದಿಲ್ಲವೆಂದು ಅವು ತ್ಯಾಜ್ಯವಾಗಲಾರವು ಜೀವನದ ಅಲ್ಪಾಂಶವು ಮಾತ್ರ ಸಾಹಿತ್ಯ, ಶಾಸನಗಳಲ್ಲಿ ಪ್ರತಿಬಿಂಬಿತವಾಗುತ್ತಿರುತ್ತದೆ ಬಳಕೆಯಲ್ಲಿರುವ ಮಾತುಗಳಲ್ಲಿ ಕೆಲವೊಂದು ಪ್ರೌಢ, ಗಂಭೀರ, ಶಿಷ್ಟವೆನಿಸಿದ ವಿಶಿಷ್ಟ ಪದ-ಪ್ರಯೋಗಗಳೇ ಬರೆವಣಿಗೆಯಲ್ಲಿ ಬರುತ್ತಿರುತ್ತವೆ ನೆಲದಿಂದ ಮೇಲಕ್ಕೆ ಇರುವ ಸಂಗತಿಗಳನ್ನು ಮಾತ್ರ ನಮ್ಮ ಕಾವ್ಯ ಸಾಹಿತ್ಯಗಳಲ್ಲಿ ವರ್ಣಿಸಿದ್ದುಂಟು ನೆಲದಮೇಲಿನ ಎಂದರೆ ವಾಸ್ತವ ಸಂಗತಿಗಳನ್ನು ಕಡೆಗಣಿಸಿದ್ದಾಗಿದೆ ಅಲ್ಲದೆ ಲಿಖಿತ ಆಧಾರಗಳಲ್ಲಿ ಪಾಂಡಿತ್ಯದ ಮೆರಗು ಕೂಡಿ ಮೂಲರೂಪವು ಎಷ್ಟೋ ಬಾರಿ ತಿಳಿಯದಾಗುತ್ತದೆ. ಆದ ಕಾರಣ, ಜನಜೀವನದ ಅಭ್ಯಾಸಮಾಡಿದವರು ಕೇವಲ ಲಿಖಿತ ಆಧಾರಗಳನ್ನೇ ಅವಲಂಬಿಸುವುದು ತಪ್ಪು ಎಂಬ ನಿರ್ಣಯಕ್ಕೆ ಬಂದಿದ್ದಾರೆ ತುಲನಾತ್ಮಕ ಭಾಷಾಶಾಸ್ತ್ರದಲ್ಲಿಯೂ ಇದೇ ಮಾತು ಅನುಭವಕ್ಕೆ ಬಂದಿದೆ. ಕೇವಲ ಸುಶಿಕ್ಷಿತರ ಉಚ್ಚಾರಗಳನ್ನು ಲೆಕ್ಕಕ್ಕೆ ಹಿಡಿದು 'ಭಾಷೆಯೊಳಗಿನ ಪದಗಳ ಮೂಲಸ್ವರೂಪದ ನೆಲೆ ತಿಳಿಯುವುದಿಲ್ಲ. ಜಾನಪದರ ಉಚ್ಚಾರಗಳನ್ನು ಎಣಿಕೆಯಲ್ಲಿ ತಕ್ಕೊಳ್ಳಲೇ ಬೇಕು ಎಂಬ ಸಿದ್ಧಾಂತಕ್ಕೆ ಬಂದಿದ್ದಾರೆ

ಸಾಂಸ್ಕೃತಿಕ ಇತಿಹಾಸದಲ್ಲಿ ಪರಂಪರೆಗಳ ಅಭ್ಯಾಸಕ್ಕೆ ಒಂದು ಮಹತ್ವದ ಸ್ಥಾನವಿದೆ. ಈ ಪರಂಪರೆಗಳು ಫಕ್ಕನೆ ತಲೆದೋರುವುದಿಲ್ಲ. ಅಥವಾ ಒಮ್ಮೆಲೆ ಮಾಯವಾಗುವುದಿಲ್ಲ. ಹೊಸ ರೂಢಿ-ಸಂಪ್ರದಾಯಗಳು ಬಂದರೂ ಮೊದಲಿನದರೊಡನೆ ಅವು ಬೆರೆತು ಕೊಳ್ಳುವವು ಎಲ್ಲ ರೂಢಿಗಳನ್ನು ಅಷ್ಟೇ ಪುರಾತನವೆಂದು ಗ್ರಹಿಸುವುದು ತಪ್ಪಾಗಿದೆ ಅವುಗಳಲ್ಲಿ ಯಾವುವು ಪ್ರಾಚೀನ, ಯಾವುವು ಅರ್ವಾಚೀನಗಳೆಂಬುದನ್ನು ನಿರ್ಣಯಿಸಲು ಸಾಹಿತ್ಯ ಶಾಸನಾದಿಗಳ ನೆರವು ಅಗತ್ಯವಾಗಿದೆ ಈ ಸಂಪ್ರದಾಯಗಳು

ಎಂದು ಬಂದುವು, ಹೇಗೆ ಬಂದುವು; ಮತ್ತು ಕಾಲಕ್ರಮದಲ್ಲಿ ಅವು ಎಂದು, ಏಕೆ, ಹೇಗೆ ಬದಲಾದುವು? ಎಂದು ಮುಂತಾದ ಸಂಗತಿಗಳನ್ನು ಸೂಕ್ಷ್ಮವಾಗಿ ವಿಮರ್ಶಿಸಿ ವಿಚಾರಿಸಲೇ ಬೇಕು. ಕೆಲವೆಡೆಗೆ ಈ ಪೂರ್ವ ಪರಂಪರೆಗಳು ತೀರ ಕ್ಷೀಣವಾಗಿವೆ; ಅಸ್ಪಷ್ಟವಾಗಿವೆ; ಹಲವೆಡೆಗೆ ಇವುಗಳಲ್ಲಿ ಅತಿಶಯೋಕ್ತಿ, ಅಸಂಬದ್ಧತೆಗಳು ಸೇರಿಕೊಂಡಿವೆ. ಇಂಥಲ್ಲಿ ನಿರ್ದಾಕ್ಷಿಣ್ಯವಾದ ವಿಮರ್ಶೆಯಿಂದ ಸತ್ಯವನ್ನು ಕಂಡುಕೊಳ್ಳುವ ಪ್ರಯತ್ನಗಳು ನಡೆಯಬೇಕಾಗಿದೆ. ಇದಕ್ಕಾಗಿ ಮಾನವನ ಮನೋಧರ್ಮಗಳ ಅಭ್ಯಾಸವು ಶಾಸನಾದಿಗಳಷ್ಟೇ ಮಹತ್ವದ್ದಾಗಿದೆ

ನಮ್ಮ ನಾಡಿಗರ ನಡೆವಳಿಯಲ್ಲಿ ಸೂಕ್ಷ್ಮವಾಗಿ, ಗಹನವಾಗಿ, ದೃಢವಾಗಿ ಹಾಸುಹೊಕ್ಕಾಗಿರುವ ಎಷ್ಟೋ ಅಂಶಗಳು ವೇದಕಾಲದಷ್ಟು ಪುರಾತನದುವೆಂದು ಕಂಡು ಬರುತ್ತದೆ ಬ್ರಾಹ್ಮಣರ ಯಜ್ಞವಿಧಿ, ಗೋತ್ರ ಪ್ರವರಾದಿಗಳು ಇದಕ್ಕೆ ನಿದರ್ಶನ ವೀರಶೈವರ ೬೩ ಪುರಾತನರ ಪರಂಪರೆಗೆ ಋಗ್ವೇದದೊಳಗಿನ 'ತ್ರಿಷಷ್ಟಿಸ್ತ್ವಾ ಮರುತಃ' ಎಂಬ ರುದ್ರನ ೬೩ ಪರಿವಾರ ಗಣದ ವರ್ಣನೆಯ ಮಂತ್ರವು ಆಧಾರವಾಗಿದೆ ಇದರ ವಿವರಣೆ ಶಿವರಹಸ್ಯದಲ್ಲಿ ಬಂದಿದೆ (ಪು.೩೭) ವೀರಶೈವರಿಗೂ ತಮ್ಮ ಈ ಪರಂಪರೆಯ ಮೂಲವು ಋಙ್ಮಂತ್ರದಲ್ಲಿದೆಯೆಂಬ ನೆನಹು ಉಳಿದಿರಲಿಕ್ಕಿಲ್ಲ ಗೋತ್ರ ಸೂತ್ರಾದಿ ಇಂತಹ ಜೀವಂತ ಪರಂಪರೆಗಳಿಗೆ ಶಿಲಾಶಾಸನಾದಿ ಆಧಾರಗಳು ಇಲ್ಲವೆಂದು ಅವನ್ನು ಸುಳ್ಳೆಂದು ತಿರಸ್ಕರಿಸಲಿಕ್ಕಾದೀತೆ ?

ಒಂದೊಂದು ಪರಂಪರೆಯೂ ನಮಗೆ ಅದೆಷ್ಟೋ ಹಿಂದಿನ ಕಾಲದವರೆಗೆ ಒಯ್ಯುತ್ತದೆ ಹನುಮ ಮತ್ತು ಮಾರುತಿ ಇವೆರಡು ಹೆಸರುಗಳನ್ನು ನೋಡಿ. ಇವೆರಡೂ ಪುರಾತನ ಒಂದೇ ವ್ಯಕ್ತಿಯ ಹೆಸರಾದರೂ ಇವುಗಳ ಹಿಂದಿರುವ ವಾತಾವರಣವು ಎರಡು ಭಿನ್ನ ಸಂಸ್ಕೃತಿಗಳ ಸೂಚಕವಾಗಿದೆ. ಒಂದು ಕಂನಾಡ ವೈಶಿಷ್ಟ್ಯ. ಇನ್ನೊಂದು ಮಹಾರಾಷ್ಟ್ರದ ವಿಶೇಷ. 'ಮಾರುತಿ' ಎಂಬ ಹೆಸರು ಕಂನಾಡವರಲ್ಲಿ ದೊರೆಯುವುದನ್ನು ನಾನರಿಯೆ; ಹನುಮನೆಂಬುದು ಮರ್ಹಾಟದಲ್ಲಿ ಅಪರೂಪ!

ಶ್ರೀರಾಮದಾಸರಿಂದ ಮಾರುತಿಯ ಉಪಾಸನೆಯು ಮಹಾರಾಷ್ಟ್ರದಲ್ಲಿ ಬಹಳ ಪ್ರಚಾರದಲ್ಲಿ ಬಂದಿತು ಅದಕ್ಕೂ ಮೊದಲಿನಿಂದಲೂ ಮರ್ಹಾಟದಲ್ಲಿ

ಊರೂರಿಗೂ ಹನುಮನ ದೇಗುಲಗಳಿದ್ದುವು. ಆದರೂ ಹನುಮನ ಹೆಸರಿನ ಊರುಗಳು ಕರ್ನಾಟಕದಲ್ಲಿ ದೊರೆವಂತೆ ಮಹಾರಾಷ್ಟ್ರದಲ್ಲಿ ಇಲ್ಲ. ಖಾನದೇಶವು (ಎರಂಡೋಲ ಮತ್ತು ಪಾರೋಳಾ ತಾಲೂಕಿನಲ್ಲಿ) ಮಾತ್ರ ಇದಕ್ಕೆ ಸ್ವಲ್ಪ ಅಪವಾದ. ಅಲ್ಲಿ 'ಹನುಮಂತ ಖೇಡೇ' ಎಂಬುವುಂಟು. ಅದರ ಕಾರಣವನ್ನು ಈ ಮುಂದೆ ವಿವರಿಸಿದೆ (ಪು. ೧೫೮).

ವೇದಗಳಲ್ಲಿ ಮರುತರ ಹೆಸರು ಬರುವುದು ಆದಕಾರಣ ಮರುತ್ ಪುತ್ರನ ಮಾರುತಿಯೆಂಬುದು ವೈದಿಕ ಪರಂಪರೆಯ ಹೆಸರು. ಮರುತರಿಗೆ ರುದ್ರಪುತ್ರರೆಂದು ಋಗ್ವೇದದಲ್ಲಿ ಒಂದೆಡೆಗೆ ಹೇಳಿದೆ (ಶಿವರಹಸ್ಯ ಪು೫೮). ರುದ್ರ-ಶಿವನು ಕೆಂಪು ಆದ ಕಾರಣ ರುದ್ರಪುತ್ರ ಮಾರುತಿಯೂ ಕೆಂಪು; ಮಹಾರಾಷ್ಟ್ರದಲ್ಲಿ ಮಾರುತಿಗೆ ಸಿಂಧೂರ ಬಳಿಯುವ ವಾಡಿಕೆಯುಂಟು. ಹೀಗಿದು ತಲೆತಲಾಂತರಗಳಿಂದ ನಡೆದು ಬಂದುದಾಗಿದೆ. ಇದರಲ್ಲಿ ಮೂಲ ಭೂತ ವೈದಿಕ ವಿಚಾರವು (ಕೆಂಪು ಎಂಬುದು) ಅಡಕವಾಗಿರುವುದು.

ರಾಮ-ಕೃಷ್ಣಾದಿ ಮಹಾ ವ್ಯಕ್ತಿಗಳ ಹೆಸರನ್ನು ಇಟ್ಟುಕೊಳ್ಳುತ್ತಿದ್ದರೂ ಆರ್ಯಾಭಿಮಾನಿಗಳಾದ ಮಹಾರಾಷ್ಟ್ರದ ಬ್ರಾಹ್ಮಣರಲ್ಲಿ ಹನುಮ, ಗರುಡಾದಿ ಪರಿವಾರದ 'ದಾಸರ' ನಾಮಾಭಿಧಾನಗಳನ್ನು ಧರಿಸುವ ವಾಡಿಕೆಯಿಲ್ಲ. ಹನುಮಂತನೆಂದು ಬ್ರಾಹ್ಮಣನ ಹೆಸರಿದ್ದರೆ ಆತನು ಕರ್ನಾಟಕನವನು ಕರ್ನಾಟಕ ಪ್ರಭಾವಕ್ಕೆ ಒಳಗಾದವನೆಂದೇ ನಿಶ್ಚಿತವಾಗಿ ಗೊತ್ತಾಗುತ್ತದೆ. ಮಾರುತಿ ಎಂಬುದು ಆರ್ಯಪರಂಪರೆಯ ಹೆಸರಾದರೂ ಈ ಹೆಸರಿನ ಮಹಾರಾಷ್ಟ್ರ ಬ್ರಾಹ್ಮಣನು ದೊರೆಯದೆ ಇರುವುದು ವಿಚಾರಾರ್ಹವಾಗಿದೆ.

ಹೀಗೆ ಈ ರೂಢಿ-ಸಂಪ್ರದಾಯಗಳ ಹಿಂದೆ ತುಂಬ ಸಾಂಸ್ಕೃತಿಕ ಅರ್ಥವು ಇಡಿಗಿದೆ. ಕಲ್ಪರೆಹಗಳ ಆಧಾರಗಳು ಇಲ್ಲವೆಂದು ಇವೆಲ್ಲವನ್ನು ಲೆಕ್ಕಿಸಲಾಗದೆ?

ಹಾರ—ಹಾರನನ್ನು ಕುರಿತು ನನ್ನ ಮಿತ್ರರಾದ ದೊಡ್ಡಬೆಲೆ ನರಸಿಂಹಾಚಾರ್ಯರು ಕರ್ನುಡಿಯಲ್ಲಿ (೨೬-೯-೪೭) ಒಂದು ಬೆಲೆಯುಳ್ಳ ಟಿಪ್ಪಣಿಯನ್ನು ಪ್ರಕಟಿಸಿ ನನಗೆ ನೆರವಾಗಿದ್ದಾರೆ. ಅಗ್ರ+ಹಾರ ಎಂಬುದಕ್ಕೆ ಈಗ ಕೋಶಗಳಲ್ಲಿ ಹೇಳಿದ ಅರ್ಥವು ಅಸಮರ್ಪಕವಾಗಿದೆಯೆಂಬ ನನ್ನ ಅಭಿಪ್ರಾಯಕ್ಕೆ ಅವರ ಬೆಂಬಲವೂ ದೊರೆತಿದೆ. ಅಗ್ರ ಎಂದರೆ ಬ್ರಾಹ್ಮಣ. ಹಾರ

ವೆಂದರೆ ಸ್ಥಳ, ಊರು; ಎಂಬ ನನ್ನ ವಿಚಾರವೇ ಅವರ ಸಂಶೋಧನೆಯಲ್ಲಿಯೂ ದೃಢವಾಗಿ ಸ್ಥಾಪಿತವಾದುದು ಸಂತೋಷದ ಸಂಗತಿ. 'ಹಾರ' ಶಬ್ದದ ನಿರುಕ್ತದ ಬಗೆಗೆ ಮಾತ್ರ ಭಿನ್ನಾಭಿಪ್ರಾಯವು ಉಳಿದಿದೆ. 'ಆಹಾರ' ಎಂಬುದು ಪ್ರಾಚೀನತಮ ರೂಪವೆಂದು ಶಾಸನಗಳಿಂದ ಗೊತ್ತಾಗುತ್ತದೆ. ಹಾರವು ಆಹಾರದ ಸವೆದರೂಪ; ಎಂದು ಶ್ರೀಯುತರ ಅಭಿಪ್ರಾಯವಿದೆ. ಈ ಕಾರಣದಿಂದ ಪಾಡು-ಪಾಡ-ಪಾರ ಇವರಿಂದ ಬೆಳೆದ ಹಾರವಾಯ್ತೆಂಬುದು ಅವರಿಗೆ ಸಮ್ಮತವಿಲ್ಲ.

ಆಹಾರವೆಂಬುದಕ್ಕೆ ಸಂಸ್ಕೃತ ಭಾಷೆಯಿಂದ ಸ್ಥಳವಾಚಕವಾದ ಅರ್ಥವೂ ಹೇಗೆ ನಿಷ್ಪನ್ನವಾಯಿತೆಂಬುದನ್ನು ಅವರು ಹೇಳಿಲ್ಲ. ಪಾರ ಹಾರದ ಗ್ರಾಮ ನಾಮಗಳಿರುವಂತೆ 'ಆಹಾರ'ದ ಹೆಸರಿನ ಪರಂಪರೆಯು ಎಲ್ಲಿಯಾದರೂ ಯಾವುದೇ ಬಗೆಯಿಂದ ಉಳಿದುಕೊಂಡಿದೆಯೋ? ಎಂಬುದನ್ನೂ ವಿವರಿಸಲಿಲ್ಲ. ಆದರೆ ನನ್ನ ವಿಚಾರದಂತೆ ಆಹಾರವೆಂಬುದು ಮೂಲಪದವಲ್ಲ. ಅಲ್ಲಿ ಆ ಎಂಬುದು ಉಪಸರ್ಗವಾಗಿ ಸಂಸ್ಕೃತದಲ್ಲಿ ಸೇರಿರಬೇಕು. ೪ನೆಯ ಶತಮಾನದಷ್ಟು ಹಿಂದೆ ಪಕಾರಕ್ಕೆ ಹಕಾರವಾಗಿದ್ದಿತೆ? ಎಂಬ ಸಂದೇಹವು ಮಹತ್ವದ್ದಾಗಿದೆ. ಅದಕ್ಕೆ ಆಗಿರಲು ಸಾಕೆಂದು ನನ್ನ ಅಭಿಪ್ರಾಯ. ಕಾಳಿದಾಸನು ಮೇಘದೂತದಲ್ಲಿ ಹಾಲಾ ಶಬ್ದ ಬಳಸಿದ್ದಾನೆ. ಪಾಲು—ಹಾಲು; ಹಾಲು ಇದುವೆ ಹಾಲಾ ಎಂಬ ರೂಪದಲ್ಲಿ ಸಂಸ್ಕೃತದಲ್ಲಿ ನುಸುಳಕೊಂಡಿದೆ. ಕಾಳಿದಾಸನ ಕಾಲದಲ್ಲಿ ಹಕಾರವು ಬಳಕೆಯಲ್ಲಿರಬೇಕಾದರೆ ಅದಕ್ಕೂ ಮೊದಲು ೧೫೦–೨೦೦ ವರುಷ ಇದು ರೂಢಿಯಲ್ಲಿ ಬಂದಿರಬೇಕಾಗುತ್ತದೆ. ಉತ್ತರದಲ್ಲಿ ಪಾರ, ಹಾರ, ಎರಡೂ ಬಗೆಯ ರೂಪಗಳು ಊರಗಳು ಈಗಲೂ ಇವೆ. ಪಾಡಗಾವ, ಪಾರಗಾವಗಳು ನಮ್ಮಲ್ಲಿವೆ. ಡಾ. ಚಟರ್ಜಿಯವರೇ ಉತ್ತರದಲ್ಲಿ 'ದ್ರಾವಿಡ' ಭಾಷೆಯ ಊರುಗಳುಂಟೆಂದು ಸಿದ್ಧಪಡಿಸಿರುವಾಗ ನನ್ನ ಮಿತ್ರರಿಗೆ ಮಾತ್ರ ಆ ವಿಚಾರದಲ್ಲಿ ಇನ್ನೂ ಸಂದೇಹ!

ಈ ಬಗೆಯ ಗ್ರಂಥಗಳಲ್ಲಿ ಕೆಲವೊಂದು ಕೊರತೆಗಳು ಉಳಿಯುವುದು ತಪ್ಪಿದ್ದಲ್ಲ. ಊರ ಹೆಸರಿನ ವಿಚಾರದಲ್ಲಿ ಈ ಮಾತು ಇನ್ನೂ ನಿಜ. ಧಾರವಾಡದಲ್ಲಿ ಗ್ರಂಥ ಸಂಗ್ರಹಾಲಯಗಳ ಅನುಕೂಲತೆ ಕಡಿಮೆ.

ಹೋದಾಗ ಪುಸ್ತಕಗಳು ಸಿಕ್ಕುವುದೊಂದು ಮಹಾಪ್ರಯಾಸದ ಕೆಲಸ. ಇಂಥದರಲ್ಲಿ ಒಂದು ಗ್ರಂಥಾಲಯದ ಲಾಭಪಡೆಯಲು ಶಕ್ಯವಾಗಲಿ ಇಲ್ಲ ಒಮ್ಮೆ ಮಾಡಿಕೊಂಡ ಟಿಪ್ಪಣಿ, ಸರಿಯೆ ಎಂದು ಇನ್ನೊಮ್ಮೆ ನೋಡುವುದಕ್ಕೂ ಆಗದೆ ಹೋಯಿತು. ಶಾಸನಾದಿಗಳ ಆಧಾರಗಳನ್ನು ನನಗೆ ತೃಪ್ತಿಯಾಗುವಂತೆ ಸಂಗ್ರಹಿಸಿಕೊಳ್ಳಲು ಸಮರ್ಥನಾಗಲಿಲ್ಲ. ಈ ಕಾರಣಗಳಿಂದುಂಟಾದ ಇದರಲ್ಲಿಯ ಕುಂದುಕೊರತೆಗಳು ಮುಂದಿನ ಆವೃತ್ತಿಗಳಲ್ಲಿ ತಿದ್ದಲ್ಪಡಬೇಕು. ಬಲ್ಲಿದರು ತಿದ್ದುಪಡೆಗಳನ್ನೂ ಸೂಚನೆಗಳನ್ನೂ ಕಾಗದ ಬರೆದು ತಿಳಿಸಿ ನನಗೆ ಪುನರ್ವಿಚಾರಕ್ಕೆ ನೆರವಾಗುವ ಉಪಕಾರಮಾಡಬೇಕಾಗಿ ಬೇಡುತ್ತೇನೆ.

ವೈ. ಶ್ರೀ ಮುದವೀಡು ಕೃಷ್ಣರಾಯರು ಬದುಕಿರುವಾಗಲೆ ಇದು ಪ್ರಕಟವಾಗಬೇಕೆಂದು ಬಹಳ ಹಂಬಲಿಸಿದೆ. ಏಕೆಂದರೆ ಇದರಲ್ಲಿ ಅವರಿಗೆ ತುಂಬ ಆಸ್ಥೆಯಿತ್ತು. ಬೆಳಗಾವಿಯ ಕನ್ನಡ ಸಾಹಿತ್ಯ ಸಮ್ಮೇಲನದ ಅಧ್ಯಕ್ಷಪದದಿಂದ ಮಾಡಿದ ಭಾಷಣದಲ್ಲಿ ಅವರು ನನ್ನ ಸಂಶೋಧನವನ್ನು ಎತ್ತಿ ಹೇಳಿ ನನ್ನನ್ನು ಹರಸಿದ್ದರು. ತಾವು ಹೆಮ್ಮೆಪಟ್ಟುಕೊಳ್ಳುವ ತಾಯ್ನಾಡ ಹೆಸರಿನ ಅರ್ಥವೇನೆಂಬುದೂ ತನಗೆ ಗೊತ್ತಿಲ್ಲವೆಂದು ಲೋಕಕ್ಕೆ ಪ್ರದರ್ಶಿಕೊಳ್ಳುವ 'ಕನ್ನಡ-ನಾಡು' ಎಂಬುವ ಅರ್ಥವಿಹೀನ ದ್ವಿರುಕ್ತಿ ದೋಷವನ್ನು ತಾನು ಇನ್ನು ಮಾಡಲಾರೆನೆಂದು ಹೇಳಿ, ಇತ್ತೀಚೆಗೆ ತಮ್ಮ ಲೇಖನ, ಉಪನ್ಯಾಸಾದಿಗಳಲ್ಲಿ 'ಕಂನಾಡು' ಎಂಬ ಪ್ರಯೋಗವನ್ನೇ ಬಳಸುತ್ತಿದ್ದರು. ನೀವು ಕಂನಾಡು ಎಂದು ಉಪಯೋಗಿಸುವುದು ಏಕೆ, ಎಂದು ಕೇಳುವವರಿಗೆ ಮರಾಠಿಗರು 'ಕಾನಡಿ' ಎಂದೂ ಇಂಗ್ರೇಜಿಯಲ್ಲಿ Canarese ಎಂದೂ ಬರೆಯುತ್ತಿದ್ದುದು ಸರಿಯಲ್ಲವೆಂದು ಆಕ್ಷೇಪಿಸಿದ ನಾವೂ ಅದರ ಅಶುದ್ಧರೂಪವನ್ನೇ ಬಳಸುವುದು ಯಾವ ನ್ಯಾಯವೆಂದು ಅವರು ಉತ್ತರವನ್ನಿತ್ತುದುಂಟು. ಕಂನಾಡಿನ ಜನಗಳ ರೂಢಿ ಸಂಪ್ರದಾಯಗಳನ್ನು ಚೆನ್ನಾಗಿ ಅರಿತ ಅವರಿಂದ ನನ್ನ ಈ ಬರವಣಿಗೆಗೆ ಬಹಳ ಸಹಾಯವಾಗಬಹುದಾಗಿತ್ತು. ಅದಕ್ಕೆ ಎರವಾದುದಕ್ಕಾಗಿ ದುಃಖಿಸಬೇಕಾಗಿದೆ.

ಬೆಳಗಾವಿಯ ರಾಷ್ಟ್ರೀಯ ಮಹಾಸಭೆಯ ಕಾಲದಲ್ಲಿ (೧೯೨೪) ಕ. ಏಕೀಕರಣ ಪರಿಷತ್ತಿನ ಸ್ಥಾಪನೆಮಾಡಿ, ಒಂದು ಮಹಾಸಭೆಯನ್ನೂ

ನೆರೆಯಿಸುವ ಅವಶ್ಯಕತೆಯನ್ನು ಕುರಿತು ಅಂದಿನ ಮುಂದಾಳುಗಳಾದ ಶ್ರೀ ಕಡಪಾ ಪ್ರಭೃತಿಗಳೊಡನೆ ಚರ್ಚಿಸಿ, ಶ್ರೀ ಮಂಗಳವೇಡು ಶ್ರೀನಿವಾಸರೂ ನಾನೂ ಅದರ ಕಾರ್ಯದರ್ಶಿಗಳಾದೆವು. ಆ ಸಮಯದಲ್ಲಿ ನನ್ನೆದುರು ಕೆಲವು ಪ್ರಶ್ನೆಗಳು ಬಂದು ನಿಂತವು. ತುಳುನಾಡು, ಕೊಡಗು, ಬನವಾಸಿ, ಮೈಸೂರು, ನಿಜಾಂಕರ್ಣಾಟ, ಉತ್ತರಕರ್ಣಾಟ ಎಂದು ಮುಂತಾಗಿ ಈಗ ಬೇರೆ ಬೇರೆಯಾಗಿರುವ ಈ ಭಾಗಗಳ ಜನಗಳ ಪೂರ್ವಪರಂಪರೆಗಳೇನು? ಅವು, ಇವರೆಲ್ಲ ಒಂದುಗೂಡಲು ಅನುಕೂಲವಾಗಿವೆಯೆ? ಈ ನಾಡಿನ ಮೊದಲಿಗರು ಯಾರು? ಇವೆಲ್ಲ ಭಾಗಗಳು ಕರ್ಣಾಟದ ಅಂಗಗಳೇ ಎಂಬುದು ನಿಜವೆ? ಇವೆಲ್ಲವುಗಳಲ್ಲಿ ಆಂತರಿಕವಾಗಿರುವ ಹೋಲಿಕೆ, ಹೊಂದಿಕೆ ಗಳೇನು? ಇವರ ಸಂಸ್ಕೃತಿಯು ಪಡೆಪಾತಾವುದು? ಇವೇ ಮೊದಲಾದ ಸಂಗತಿಗಳು ತಿಳಿದರೆ ಏಕೀಕರಣದ ಕಾರ್ಯವು ಹೆಚ್ಚು ಸುಗಮವು ಸುದೃಢವೂ ಆಗಲು ಅನುಕೂಲವಾಗುವುದು: ಎಂಬ ವಿಚಾರವು ಹೊಳೆದು ಹೋಯಿತು ನನ್ನ ಆ ಪ್ರಶ್ನೆಗಳಿಗೆ ದೊರೆತ ಉತ್ತರಗಳೇ ಪ್ರಸ್ತುತ ಪುಸ್ತಕ. ಕಂನಾಡ ಒಕ್ಕೂಟಕ್ಕಾಗಿ ಹುಮ್ಮಸದಿಂದ ಅಣಿಯಾದ ನನ್ನ ಹಿರಿಕಿರಿಯ ಬಂಧು ಗಳೊಡನೆ ಈ ಕೆಲಸಕ್ಕಾಗಿ ಸಲ್ಲಿಸಿದ ನನ್ನ ಅಲ್ಪ ಕಾಣಿಕೆಯಿದು.

ನಮ್ಮ ನಾಡಿನ ಅರಸುಮನೆತನಗಳ ಇತಿಹಾಸವನ್ನು ಬರೆವ ಪ್ರಯತ್ನ ಗಳು ನಡೆದಿವೆ. ಜನಗ ಕತೆಯನ್ನು ಹೇಳುವುದಕ್ಕೆ ತೊಡಗಿದವರು ಇನ್ನೂ ಯಾರೂ ಇಲ್ಲ ವಿಷಯ ವಿಸ್ತಾರವು ಅನಂತವಾಗಿದೆ ಅನಾದಿಕಾಲದ ಕತೆ ಬೇರೆ. ಸಾವಿರಾರು ಪುಟಗಳಲ್ಲಿ ಹೇಳಬೇಕಾದ ವಿಷಯವನ್ನು ತೀರ ಸಂಕ್ಷೇಪದಿಂದ ಇಲ್ಲಿ ಸೂಚಿಸಿದೆ. ಕಾಗದದ ಪರಿಮಿತಿಯ ಕಟ್ಟಳೆಯ ಮೂಲಕ ಎಷ್ಟೋ ವಿಷಯಗಳನ್ನು ಬದಿಗಿರಿಸಬೇಕಾಯಿತು. ಭವ್ಯವಾದ ಒಂದು ಮಹಾ ಚಿತ್ರದ ಇದು ಸ್ಥೂಲ ಬಾಹ್ಯರೇಷೆ: ಹೊಳಹು (Out line) ಮಾತ್ರ ಹಲವು ಬಲ್ಲಿದರ ನೆರವಿನಿಂದಲ್ಲದೆ ಇದರ ಸಂಪೂರ್ಣ ಚಿತ್ರವು ಸಿದ್ಧವಾಗಲಾರದು.

ಹಟ್ಟಿಯ ಹಬ್ಬ
ಶಾತವಾಹನ ಶಕ ೧೮೬೯

**ಶಂ. ಬಾ. ಜೋಶಿ**

# ಪರಿವಿಡಿ

# ಎಡೆಗಳು ಹೇಳುವ

# ಕಂನಾಡ ಕತೆ

## ೧ ಮುನ್ನುಡಿ

‘ಅತಿ ಪರಿಚಯಾತ್ ಅವಜ್ಞಾ’ ಎಂಬುದು ಹೆಸರುಗಳ ವಿಷಯಕ್ಕಂತೂ ತೀರ ಸರಿ. ಅವು ಸಜೀವ ಪ್ರಾಣಿಗಳ ಹೆಸರಿರಲಿ. ಅಥವಾ ನಿರ್ಜೀವ ವಸ್ತುಗಳ ಹೆಸರಿರಲಿ; ಕಣ್ಣಿಗೆ ಕಾಂಬ, ಮಾತು ಮಾತಿಗೆ ಕಿವಿಗೆ ಬೀಳುವ ಸಂಗತಿಗಳೊಳಗಣ ಹೊಸತನವು ಬೇಗನೆ ಮಾಸಿಹೋಗುವುದು. ಅದರೊಳಗಣ ಮೂಲಾರ್ಥ, ಸೂಕ್ಷ್ಮಾರ್ಥಗಳ ಸೊಗಸು ದಿನದ ಬಳಕೆಯಿಂದ ಮುಸುಕಿ ಬಳಿಕ ಮನಸಿಗೆ ಆಗಬೇಕಾದ ಆನಂದ ಮತ್ತು ಬೋಧೆಗೆ ಎರವಾಗಬೇಕಾಗುತ್ತದೆ. ರೂಢಿಯಿಂದ ಬರುವ ಮೂಢತೆ, ಬಳಕೆಯಿಂದ ಬರುವ ಬಧಿರತೆಯು ಇದು. ಇದು ಬಂದು ಮುಸುಕುವುದು ನಿಶ್ಚಿತವಿದ್ದರೂ ಇದು ಬಂದು ಮುಸುಕುತ್ತಿದೆ, ಮುಸುಕಿದೆ ಎಂಬ ಅರಿವೂ ಮಾತ್ರ ಮಾನಸಸಿಗೆ ಉಳಿಯುವುದಿಲ್ಲವೆಂಬುದು ಇದರೊಳಗಣ ಸೋಜಿಗದ ಸಂಗತಿಯಾಗಿದೆ! ರೂಢಿ–ಸಂಪ್ರದಾಯಗಳು ಅರ್ಥವಿಹೀನವಾಗಿ ಅವು ನಿರ್ಜೀವಯಾಂತ್ರಿಕ ಕೃತಿಗಳಾಗುವುದು ಹೀಗೆಯೇ. ಆದುದರಿಂದಲೇ, ಕೇವಲ ರೂಢಿ-ಸಂಪ್ರದಾಯಗಳ ಪ್ರಾಬಲ್ಯವು ಹೆಚ್ಚಿದಂತೆ ಸಮಾಜದಲ್ಲಿ ಅರಿವುಗೇಡಿತನವೂ ಅದರೊಂದಿಗೆ ಬಳಿಕ ತಿಳಿಗೇಡಿತನವೂ ಒಂದರ ಹಿಂದೊಂದು ಬಂದು ಸೇರಿಕೊಳ್ಳುವುವು.

ಈ ಬಗೆಯ ತಿಳಿಗೇಡಿತನವು ಸಮಾಜವನ್ನು ಕವಿಯದಂತೆ, ದಿನದ ರೂಢಿ-ಸಂಪ್ರದಾಯಗಳಿಂದ ಮನಸು ಮರವಟ್ಟು ಬಧಿರವಾಗದಂತೆ, ಅವುಗಳೊಳಗಿನ ಅರ್ಥ ಮತ್ತು ಔಚಿತ್ಯಗಳ ವಿಚಾರ–ವಿಮರ್ಶೆಗಳನ್ನು ಕಾಲಕಾಲಕ್ಕೆ ನಡೆಸುವುದು ತಿಳಿದವರ ಕರ್ತವ್ಯವೇ ಆಗಿದೆ. ಈ ಬಗೆಯ ವಿಚಾರ-ಚರ್ಚೆಗಳಿಗೆ ಅವಕಾಶ ಮತ್ತು ಪ್ರೋತ್ಸಾಹನವನ್ನು ಕೊಡದ ಸಮಾಜವು ತನ್ನ ಚೈತನ್ಯಶಕ್ತಿಯನ್ನು ತಾನೇ ಕುಂದಿಸಿಕೊಳ್ಳುವುದು.

ಆದರೆ ಈ ಬಗೆಯ ವಿಚಾರ-ವಿಮರ್ಶೆಯ ಕೆಲಸವು ಎಣಿಸಿದಷ್ಟು ಸುಲಭವಲ್ಲ. ನಮ್ಮ ಊರುಗಳ ಹೆಸರಿನ ಮಟ್ಟಿಗಂತೂ ಅವುಗಳಲ್ಲಿ ಏನಾದರೂ ಹುರುಳಿದೆಯೆ ಎನ್ನುವಷ್ಟು ಹಲವೆಡೆಗಳಲ್ಲಿ ಅವು ಅರ್ಥಹೀನವಾಗಿವೆ; ವಿಕೃತಿಯನ್ನು ಹೊಂದಿವೆ; ಇಲ್ಲವೆ ಮೂಲಾರ್ಥವು ತಿಳಿಯದಷ್ಟು ಮಾರ್ಪಟ್ಟಿವೆ. ಕೋಲಾರ ಅಥವಾ ಕೊಲ್ಲಾರ, ಹುಬ್ಬಳ್ಳಿ, ಕಂನಡ ಎಂಬುವನ್ನೆ ಇಲ್ಲಿ ನಿದರ್ಶನಕ್ಕಾಗಿ ಎತ್ತಿಕೊಳ್ಳಬಹುದು.

ಈ ಬಗೆಯ ಮಾರ್ಪಾಟಿಗೆ ಇನ್ನೂ ಕೆಲವು ಕಾರಣಗಳಿವೆ. ಸುಮಾರು ನೂರಿನ್ನೂರು ವರುಷಗಳಲ್ಲಿ ಜನಗಳ ಸೊಲ್ಲಿನ ರೀತಿಗಳಲ್ಲಿ ಕೆಲವೊಂದು ಬದಲಾವಣೆಗಳು ಆಗುವುದುಂಟು. ಈ ಬಗೆಯ ಬದಲಾವಣೆಗೆ ಹಲವು ಬಾರಿ ಬೇರೆ ಭಾಷೆಯ ಉಚ್ಚಾರದ ಪ್ರಭಾವವೇ ಮುಖ್ಯವಾದ ಕಾರಣವಾಗಿರುತ್ತದೆ. ಒಂದು ಕಾಲಕ್ಕೆ ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳ ಪರಿಣಾಮದಿಂದ ಕಂನುಡಿಯ ಉಚ್ಚಾರದ ವೈಶಿಷ್ಟ್ಯವು ನಷ್ಟವಾಯಿತು. ಬಳಿಕ ಅರ್ವಾಚೀನ ಕಾಲದಲ್ಲಿ ಮರಾಟಿ, ಮುಸಲ್ಮಾನಿಗಳ ಪರಿಣಾಮವೂ ಆಗದೆ ಇರಲಿಲ್ಲ. ಇತ್ತೀಚೆಗೆ ಇಂಗ್ರೇಜಿಯ ಪರಿಣಾಮದಿಂದ ಇನ್ನೂ ಹೆಚ್ಚಿನ ವಿಕೃತಿಯು ತಲೆದೋರಿದೆ. ಇನ್ನುಮೇಲೆ ಹಿಂದೀ ಭಾಷೆಯ ಆಘಾತಕ್ಕೆ ನಮ್ಮ ನುಡಿಯು ಮೈಯೊಡ್ಡಬೇಕಾಗಿದೆ. ಊರು ಮತ್ತು ಪುರಗಳಲ್ಲಿ ಹೋಲಿಕೆಯು ಹೆಚ್ಚಿರುವುದರಿಂದ ಪುರದಿಂದ ಊರು ಬಂದಿತೆಂದೂ ಇಲ್ಲವೆ ಊರಿನಿಂದ ಪುರವೆಂಬ ಪದವಾಯಿತೆಂದೂ ವಾದಕ್ಕೆ ಇಂಬುದೊರೆತಿದೆ. ಊರು ಎಂಬರ್ಥದ 'ವಾಡಿ'ಯು ಪ್ರಾಕೃತ, ಮರಾಟಿ ಎಂದು ಹಲವರ ಸಾಮಾನ್ಯ ಗ್ರಹಿಕೆಯಾಗಿದೆ. ಮುನ್ನವಳ್ಳಿಯು ಮನೋಳಿಯಾಗುವುದು, ಮುದುವೊಳಲು ಮುಧೋಳವೆಂದು ಮಾರ್ಪಡುವುದು. ಕನ್ನಪುರವು ಖಾನಾಪುರವೆಂದು ರೂಪತಾಳುವುದು. ಬೆಂಗಳೂರು ಬ್ಯಾಂಗಲೋರ್ ಎಂದು ಕೇಳಬರುವುದು. 'ಹಿಂಡೂ' (ಹಿಂದೂ ಪತ್ರಿಕೆಗೆ ಮದರಾಸು, ಮೈಸೂರು ಸೀಮೆಗಳಲ್ಲಿ ಹಿಂಡೂ ಎಂಬುದೇ ಸುಶಿಕ್ಷಿತರೆನಿಸುವವರಲ್ಲಿ ವಾಡಿಕೆ!), ಕ್ಯಾನರಾ, ಕ್ಯಾಲಕಟಾ ಎಂಬೀ ಬಗೆಯಾದ ಸೊಲ್ಲಿನ ರೀತಿಯೇ ಈಗ ಶಿಷ್ಟ ಸಂಪ್ರದಾಯವಾದಂತಾಗಿದೆ. ಇದರಿಂದ ಹಲವು ಊರುಗಳ ನಿಜವಾದ ಹೆಸರೇನು? ಅದರ ಸರಿಯಾದ ಉಚ್ಚಾರವೇನೆಂಬುದೂ ತಿಳಿಯುವುದು ಕಷ್ಟವಾಗಿದೆ.

ಎಡೆಗಳ ಹೆಸರಿನ ಅಭ್ಯಾಸದಲ್ಲಿ ಇರುವ ತೊಂದರೆಗಳು ಇಷ್ಟಕ್ಕೆ ತೀರ ಲಿಲ್ಲ. ಎಷ್ಟೋ ಊರ ಹೆಸರುಗಳು ಈಗ ಹೇಳಹೆಸರಿಲ್ಲದಂತಾಗಿ ಅವುಗಳ ಉಲ್ಲೇಖಗಳು ಕೂಡ ಸಿಕ್ಕುವುದು ದುರ್ಲಭವಾಗಿದೆ. ಅವನ್ನು ಪ್ರಾಚೀನ ಸಾಹಿತ್ಯ, ಶಾಸನಾದಿಗಳ ಅಭ್ಯಾಸಿಗಳು ಕಂಡುಹಿಡಿದು ಎತ್ತಿಹೇಳಬೇಕು. ಕೆಲವೆಡೆಗಳಲ್ಲಿ ಮೊದಲಿನ ಹೆಸರುಗಳು ಹಿಂದೆ ಬಿದ್ದು ಹೊಸ ಹೆಸರುಗಳು ಬಳಕೆಯಲ್ಲಿ ಬಂದಿವೆ. ಇತಿಹಾಸ ಬಲ್ಲವರಿಗಲ್ಲದೆ ಕಿಸೂವೊಳಲ ಹೆಸರು ಬಾದಾಮಿ, ಪಟ್ಟದಕಲ್ಲಿನ ಊರವರಿಗೂ ಸಾಮಾನ್ಯವಾಗಿ ಗೊತ್ತಿರುವುದಿಲ್ಲ. ಪ್ರಾಚೀನ ಪುಲಿಗೆರೆಯು ಇಂದು ಲಕ್ಷ್ಮೇಶ್ವರವಾಗಿದೆ. ನಿಜಾಂ ರಾಜ್ಯದಲ್ಲಿ ಮುಸಲ್ಮಾನೀ ನಾಮಾಂತರಗಳ ಕೋಲಾಹಲವೆ ನಡೆದಿದೆ. ನಿಜಾಮರ ನೆಲೆವೀಡು ಭಾಗ್ಯನಗರ—ಭಾಗಾನಗರವು ಹೈದರಾಬಾದು ಆದುದು ಈ ತೆರನಾಗಿಯೆ.

ದೇಶಿಯ ಹೆಸರುಗಳನ್ನು ಸಂಸ್ಕೃತಕ್ಕೆ ತಿರುಗಿಸಿಕೊಳ್ಳುವ ರೂಢಿಯು ಒಂದು ಕಾಲಕ್ಕೆ ವಿಶೇಷವಾಗಿದ್ದಿತು. ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಹೆಸರುಗಳನ್ನು ತಕ್ಕೊಳ್ಳುವ ಎರಡು ಬಗೆಗಳಿವೆ; ದೇಶೀಯ ಹೆಸರನ್ನು ಸಂಸ್ಕೃತದಂತೆ ಕಾಣುವ ಹಾಗೆ— ಸಂಸ್ಕೃತ ಭಾಷೆಯಿಂದ ಅರ್ಥವಾಗುವ ಹಾಗೆ ಅಸ್ವಲ್ಪಸ್ವಲ್ಪ ಮಾರ್ಪಡಿಸಿಕೊಳ್ಳುವುದು ಒಂದು ರೀತಿ ಮುಂಡರಗಿ ಎಂಬುದರಿಂದ ಅರ್ಥಬೋಧವಾಗುವುದಿಲ್ಲ; ಅಲ್ಲದೆ ಮುಂಡರಗಿ ಎಂಬುದು ಅದು ತೀರ ದೇಸಿಗರ ಮಾತು. ಪ್ರೌಢಿಮೆ, ಗಾಂಭೀರ್ಯವು ಅದರಲ್ಲಿ ಎನಿಸದೆ. ಅದನ್ನು ಶ್ರೇಷ್ಠರ ಭಾಷೆಯಲ್ಲಿ ಹೇಳಬೇಕೆಂಬ ಚಪಲವು ತಲೆಯೆತ್ತುವುದು ಸಹಜ. ಆದಕಾರಣ ಮುಸ್ನವಳ್ಳಿ ಮುನಿಪಲ್ಲಿಯೆನಿಸುವುದು; ಪೊಳಲಿ ಪುಳಿನ ಕ್ಷೇತ್ರವೆಂಬ ಹೆಸರು ತಾಳುವುದು ; ಮುಂಡರಗಿಯು ಮೃಡನಗಿರಿಯಾಗುವುದು. ೪೦–೫೦ ವರುಷಗಳ ಹಿಂದೆ ಮುಂಬೈಯಲ್ಲಿ 'ರಾಕರೆ' ಎಂಬ ಅಡ್ಡಹೆಸರಿನವರು ತಮ್ಮ ದೊಡ್ಡ ವ್ಯಾಪಾರದ ಅಂಗಡಿಗೆ 'ಥ್ಯಾಕರೆ ಎಂಡ್ ಕಂಪನಿ' ಎಂಬ ನಾಮಕರಣ ಮಾಡಿದ್ದರು.

ಊರ ಹೆಸರನ್ನು ಭಾಷಾಂತರಿಸಿಕೊಳ್ಳುವುದು ಇನ್ನೊಂದು ರೀತಿಯಾಗಿದೆ. ಬಿದಿರೆ ತೀರ ದೇಶಿಗರ ಭಾಷೆಯ ಹೆಸರು. ಅದು ಶಾಸನಗಳಲ್ಲಿ ವೇಣುಪುರವೆಂದೂ ವಂಶಪುರವೆಂದೂ ಬಂದುದುಂಟು. ಬೇವೂರು ಕಾಂತಿ

ಪಟ್ಟಣವಾಯಿತು. ಈ ಬಗೆಯ ಭಾಷಾಂತರಗಳು ತಪ್ಪಾಗಿರುವುದೂ ಉಂಟು. ಬೇವೂರು ಇದ, ಹುಣಸಿಕಟ್ಟಿ, ಚಾಲಿಹಾಳ ಮೊದಲಾದುವುಗಳಂತೆ ಗಿಡದಿಂದ ಬಂದ ಹೆಸರೆಂಬುದು ಆ ಭಾಷಾಂತರಕಾರರಿಗೆ ಗೊತ್ತಿದಿಲ್ಲವೆಂದು ತೋರುತ್ತದೆ. ಕಾಯು ಎಂಬರ್ಥದ ಬೇ ಧಾತುವು ಆ ಹೆಸರಿನಲ್ಲಿ ಉಂಟೆಂದು ಗ್ರಹಿಸಿ ಬೇವ+ಊರು=ಬೇವೂರು ಎಂದರೆ ಕಾಂತಿಪುರ ಕಾಂತಿ ಪಟ್ಟಣವೆಂದು ಭಾಷಾಂತರಿಸಿಕೊಂಡಿದ್ದಾರೆ. ಮೂಡಲಬಾಗಿಲು ಮುಳಬಾಗಿಲವಾಗಿದೆ. ಇದನ್ನರಿಯದೆ ಮುಳಬಾಗಿಲನ್ನು ಮುಳ್ಳುಬಾಗಿಲೆಂದು ಶುದ್ಧೀಕರಿಸಿ ಬಳಿಕ ಕಂಟಕಾಸನ ಪಟ್ಟಣವೆಂದು ಭಾಷಾಂತರಿಸಿದ್ದು ಕಂಡು ಬರುವುದು. ಇದರಂತೆ ಧಾರವಾಡವು ಒಂದು ಸಂಸ್ಕೃತ ಕವಿತೆಯಲ್ಲಿ ತಂತ್ರಪುರವಾಗಿ ಇಂಬುಗೊಂಡಿದೆ. ಆನೆಗೊಂದಿಯು ಹಸ್ತಿನಾಪುರವಾದುದೂ ಉಂಟು.

ಇಂತೀ ಬಗೆಯ ಮಾರ್ಪಾಟಗಳಲ್ಲಿ ಗೌರವ, ಪ್ರತಿಷ್ಠೆ, ಪೂಜ್ಯತೆಯ ಭಾವನೆಯೇ ಮುಖ್ಯವಾಗಿ ಹುದುಗಿಕೊಂಡಿರುತ್ತದೆ.

ಎಡೆಗಳ ಹೆಸರು ಎಂದು, ಹೇಗೆ, ಏಕೆ ಬಂದುವು? ಎಂಬೆಲ್ಲದರ ನೆನಪು ಅಂದಿನಿಂದ ಇಂದಿನವರೆಗೂ ಉಳಿದಿರುವುದನ್ನು ಸ್ವಲ್ಪ ಸ್ಥಳಗಳಲ್ಲಿ ಮಾತ್ರ ಕಾಣಲು ಸಿಕ್ಕುತ್ತದ. ಇಲ್ಲವೆಂದರೂ ವಿಶೇಷ ತಪ್ಪಲ್ಲ; ಅಷ್ಟು ಕಡಿಮೆ ಇವೆ. ಕೆಲವೆಡೆಗಳಲ್ಲಿ ಆ ಊರ ಹೆಸರಿನ ಬಗೆಗೆ ಒಂದಕ್ಕಿಂತ ಹೆಚ್ಚು ಕತೆಗಳು, ಕಾರಣಗಳು ಇದ್ದುದು ಕಂಡುಬರುತ್ತದೆ. ಹಲವು ಹಳೆಯ ಹೆಸರುಗಳು ಮಾರ್ಪಟ್ಟು ಇಂದಿನ ರೂಪಗಳಾಗಿವೆ. ಆದಕಾರಣ ಇಂದಿನ ಹೆಸರಿನ ಮೇಲೆಯೇ ಊಹೆಗಳನ್ನು ಕಟ್ಟುವುದು ಸರಿಯಾಗಲಾರದು. ಕುರುತ್ತಕುಂಟೆ—ಕುರ್ತಕೋಟಿ; ಸರಟಪುರ—ಸೊರಟೂರು; ಅಯ್ಯಾಹೊಳೆ—ಐಹೊಳೆ; ಪೊಂಬುಳ್ಚ—ಹೊಂಬಳ; ಧಮ್ಮಪುರ—ಡಂಬಳ; ಮುಗುಂದ—ಮುಗದ ಮುಂತಾದುವು ಇದಕ್ಕೆ ಉದಾಹರಣ.

ಆದುದರಿಂದ ಈ ಅಭ್ಯಾಸದಲ್ಲಿ ಕೆಲವೊಂದು ಎಡೆಗಳ ಹೆಸರಿನ ಇತ್ಯರ್ಥವು ಒಮ್ಮೆಲೆ ನಿಶ್ಚಿತವಾಗಿ ಗೊತ್ತಾಗುವುದು ಕಠಿನ. ಅದಕ್ಕಾಗಿ ಈ ವಿಷಯವನ್ನು ಕುರಿತು ಚರ್ಚೆ, ವಿಮರ್ಶೆಗಳು ನಡೆಯಬೇಕಾದುದು ಅವಶ್ಯ. ಇದಕ್ಕಾಗಿ ಒಂದೊಂದು ಭಾಗದ ಜಿಲ್ಹೆ ಜಿಲ್ಹೆಗಳಲ್ಲಿ, ತಾಲ್ಲೂಕು,

ತಾಲ್ಲೂಕುಗಳಲ್ಲಿ—ಅಥವಾ ಹಿಂದಿನ ಕಾಲದ ಒಂದೊಂದು ನಾಡಿನ ವಿಭಾಗಗಳ ರೀತಿಯಲ್ಲಿ—ಅಲ್ಲಲ್ಲಿ ಸ್ಥಳೀಯ ಸಂಸ್ಥೆಗಳು ಹೊರಟು, ಅವುಗಳು ತಮ್ಮ ಸಮೀಪದ ಎಡೆಗಳೆಲ್ಲವುಗಳ ಹೆಸರಿನ ಸಂಗ್ರಹವಮಾಡಿ, ಅವುಗಳ ವಿಷಯಕ್ಕಿರುವ ಕತೆ, ವೃತ್ತಾಂತಗಳನ್ನೆಲ್ಲ ಕಲೆಹಾಕುವುದಕ್ಕೆ ಅಣಿಯಾದರೆ ಮಾತ್ರ ಈ ಕೆಲಸವು ಇನ್ನೂ ಹೆಚ್ಚು ಸಮರ್ಪಕವಾಗಿ ಜರುಗಬಹುದಾಗಿದೆ. ಅಲ್ಲಿಯವರಿಗೇ ತಮ್ಮ ನೆರೆಹೊರೆಯ ಎಡೆಗಳೆಲ್ಲವುಗಳ ಹಳೆಯ ಹಾಗೂ ಹೊಸ ಹೆಸರುಗಳು ಸರಿಯಾಗಿ ಗೊತ್ತಾಗಬಲ್ಲುವು. ದೂರಿನವರಿಗೆ ಇದು ಅಷ್ಟು ಸಾಧ್ಯವಿಲ್ಲ.

ಆದರೆ ನಮ್ಮ ನಾಡಿನಲ್ಲಿ ಈ ವಿಷಯದಲ್ಲಿ ಒಲವು ಇದ್ದವರೆ ಸ್ವಲ್ಪ. ಕರ್ಣಾಟವು ಹಲವು ತುಂಡಾಗಿ ಹಿಡಿದು ಹೋಗಿರುವುದರಿಂದ ಅಲ್ಲಲ್ಲಿಯ ಎಡೆಗಳ ಹೆಸರಿನ ಪಟ್ಟಿಯು ದೊರೆಯುವುದೂ ಮಹಾ ಪ್ರಯಾಸದ ಕೆಲಸವಾಗಿದೆ. ಆ ಪಟ್ಟಿಗಳು ಇಂಗ್ರೇಜಿಯಲ್ಲಿರುವುದೇ ಹೆಚ್ಚು. ಇದರಿಂದ ಆಪೂರ ನಿಜವಾದ ಹೆಸರು ತಿಳಿಯಲು ಇನ್ನೂ ತೊಂದರೆ! ಕೊಲ್ಹಾಪುರ, ಸೊನ್ನಲಾಪುರದತ್ತ ಮರ್‍ಹಾಟಿ ಗಾಳಿ ತಗುಲಿ ಆದ ಪಲ್ಲಟ! ಆಂಧ್ರ ಮತ್ತು ತಮಿಳರ ಸೀಮೆಗಳತ್ತ ನಮ್ಮ ಊರುಗಳ ಹೆಸರುಗಳು ತೆಲುಗು ತಮಿಳ ರೂಪಗಳನ್ನು ತಾಳಿರುದೂ ಕಂಡುಬರುವುದು. ಹಲವೆಡೆಗಳಲ್ಲಿ ಈ ರೂಪಾಂತರಗಳನ್ನು ಗುರುತಿಸುವುದೂ ಅಸಾಧ್ಯವಾಗುತ್ತದೆ.

ಇಂತಿವೆಲ್ಲ ತೊಂದರೆಗಳನ್ನು ನೆನಸಿದರೆ ಈ ಕೆಲಸವು ತುಂಬಾ ದುಃಸಾಧ್ಯವೆಂದು ಹೇಳಬೇಕಾಗುವುದು. ಅಲ್ಲದೆ ಊರುಗಳ ಪಟ್ಟಿಯನ್ನು ಓದುವಂತಹ ಜುಗುಪ್ಸೆಯನ್ನುಂಟುಮಾಡುವ ನೀರಸವಾದ ಕೆಲಸವು ಬೇರೊಂದಿರಲಿಕ್ಕಿಲ್ಲ. ಒಮ್ಮೆ ಓದಿ ಉಂಟಾದ ಓಕರಿಕೆ, ತಲೆನೋವನ್ನು ಕಳೆದುಕೊಂಡು ಕೆಲಕಾಲದ ನಂತರ ಮತ್ತೊಮ್ಮೆ ಆ ನಾಮಾವಳಿಯನ್ನು ಕೈಯಲ್ಲಿ ಹಿಡಿಯಲಿಕ್ಕೂ ಮನಸ್ಸು ಬಾರದು. ನನ್ನಂತಹ ಆರೋಗ್ಯವಂತರಿಗೆ ಈ ಕೆಲಸ ಇನ್ನೂ ಕಷ್ಟ. ವ್ಯಕ್ತಿಗೆ ನಷ್ಟವಾದರೂ ನಾಡಿಗೆ ಹಿತವಿದ್ದರೆ, ಓಕರಿಕೆ ಬಂದರೂ ಅದನ್ನು ತಡೆದುಕೊಂಡು ಕೆಲಸವನ್ನು ಮುಂದುವರಿಸಲೇಬೇಕಲ್ಲವೇ? ಕೋಡಗಗೆಮ್ಮಿನಂತಹ ಕೆಲವೊಂದು ಬೇಸಗೆ ಉಪಾಯವೆಂದು ಊರ ಹೆಸರುಗಳ ಚೀಟಿಯನ್ನು ಕಟ್ಟುವ ಹಳೆಯ

ಸಂಪ್ರದಾಯವೊಂದಿದೆ. ಆದರಲ್ಲಿ ಯಾವ ಕಾರ್ಯ–ಕಾರಣ ಭಾವವು ಉಂಟೋ ನಾನರಿಯೆ. ಆದರೆ ಸಮ್ಯಗ್ ದೃಷ್ಟಿಯಿಂದ ಮಾಡಿದ ಗ್ರಾಮ ನಾಮಗಳ ಅಭ್ಯಾಸವು ಮಾತ್ರ ನಾಡಿನ ವಿಷಯದಲ್ಲಿರುವ ಅಜ್ಞಾನದ ವ್ಯಾಧಿಗೆ ಒಂದು ಒಳ್ಳೆಯ ಔಷಧಿ ಎಂಬುದನ್ನು ನಾನಿಲ್ಲಿ ಮನಗಂಡು ಹೇಳ ಬಲ್ಲೆ. ಆದರೆ ಆ ಗುಣವು ನಸ್ನ ಈ ಚೇಟೆಯಲ್ಲಿಯೂ ಉಂಟೇ ಎಂಬು ದನ್ನು ಓದುಗರಾದ ಬಲ್ಲವರು ತಮ್ಮ ಅನುಭವದಿಂದ ಹೇಳಬೇಕಲ್ಲದೆ ನಾನಲ್ಲ.

ಸ್ಥಳಗಳ ಹೆಸರಿನಂತಹ ಸಾಮಾನ್ಯ ವಿಷಯ ಆದರೆ ಅದರಲ್ಲಿ ಎಷ್ಟೊಂದು ಮಹತ್ವದ ಅಪೂರ್ವವಾದ ಸಂಗತಿಗಳು ಹುಗಿದುಕೊಂಡಿವೆ! ಅದೆಷ್ಟು ಅಜ್ಞಾತ ವಿಷಯಗಳು ಬೆಳಕಿಗೆ ಬರಲಿವೆ! ಸೂಕ್ಷ್ಮವಾಗಿ ವಿಮರ್ಶಿಸಿದಷ್ಟೂ ಹಿಂದೆ ಆಗಿಹೋದ ಅನೇಕ ಪ್ರಾಚೀನ ಐತಿಹಾಸಿಕ ಘಟನೆಗಳಿಗೆ ಶಾಸನಾದಿಗಳಲ್ಲಿ ದೊರೆಯದ ಆಧಾರಗಳು ಎಡೆಗಳ ಹೆಸರಿನಲ್ಲಿ ಸಿಕ್ಕುತ್ತಿವೆ. ಇತಿಹಾಸವು ಯಾರ ಹೆಸರನ್ನು ಕಡೆಗಣಿಸಿ ತೀರ ಸಾಮಾನ್ಯ ರೆಂದು ಅವರನ್ನು ಉಲ್ಲೇಖಿಸುವದಿಲ್ಲವೋ ಅಂತಹ ಅನೇಕಾನೇಕ ಅರಸರು ನಾಯಕರು ಗೌಡರು ಗೌಡತಿಯರು ಕುರುಬರು ಗೊಲ್ಲರು ಮೊದಲಾದವರು ತಮ್ಮ ಹೆಸರಿನ ಹಟ್ಟಿ— ಊರುಗಳನ್ನು ಕಟ್ಟಿಕೊಂಡು ತಮ್ಮ ಮಟ್ಟಿಗೆ ಅಜ ರಾಮರರಾಗಿದ್ದಾರೆ. ಪುರಾಣಗಳಿಗೆ ಪೂರಕವಾಗಿ ಪೋಷಕವಾಗಿ ಇರುವ ಹಲವು ಕತೆಗಳಿಗೆ ಆಧಾರವಾದ ಅನೇಕ ಯಾತ್ರೆ ತೀರ್ಥ ಗ್ರಾಮಗಳ ಹೆಸರುಗಳಿವೆ. ನಮ್ಮ ನಾಡಿನಲ್ಲಿ ಒಂದು ಹೋದ ಹಲವು ಧರ್ಮ-ಸಂಸ್ಕೃತಿ ಗಳ ಮಹಾಪ್ರವಾಹದ ಕುರುಹುಗಳನ್ನು ತೋರುವ ಎಡೆಗಳಿವೆ.

ಇತಿಹಾಸ–ಪುರಾಣ–ಧರ್ಮ–ಸಂಸ್ಕೃತಿಗಳಷ್ಟೇ ಅಲ್ಲ, ಊರ ಹೆಸರು ಗಳಿಂದ ಜನರ ನೆಚ್ಚಿಗೆ–ಮೆಚ್ಚಿಗೆ ಆಗುಹೋಗುಗಳಂತೆ ನೆಲದ ಪಾಡೂ ತಿಳಿದು ಬರುತ್ತದೆ. ಮಳೆ ಬೆಳೆ ಭೂಮಿಯ ಗುಣ, ಬಣ್ಣ, ಅಲ್ಲಿಯ ಪ್ರಾಣಿ, ವನಸ್ಪತಿ ಗಳು, ಖನಿಜಗಳು, ಕಾಡು, ಮೇಡು, ಹೊಳೆ, ಕೆರೆ, ಕಟ್ಟೆ, ಕುಂಟೆ ಮೊದಲಾ ದವುಗಳ ಇರುವನ್ನು ಊರ ಹೆಸರುಗಳಿಂದ ಅರಿತುಕೊಳ್ಳಬಹುದಾಗಿದೆ.

ವ್ಯಾಕರಣ, ಭಾಷಾ–ಶಾಸ್ತ್ರದಲ್ಲಿ ತಜ್ಞರು ಯಾವ ಸಂಗತಿಗಳನ್ನು ವಿಶೇಷವಾಗಿ ಗಮನಿಸಿಲ್ಲವೋ ಅಂತಹ ಹಲವು ಮಾತುಗಳು ಊರ ಹೆಸರಿನ

ಅಭ್ಯಾಸದಲ್ಲಿ ಚೆನ್ನಾಗಿ ಎದ್ದು ತೋರುತ್ತವೆ. ನಮ್ಮ ನಾಡಿನ ಸೊಲ್ಲಿನ ರೀತಿಯನ್ನೂ ಅದರಲ್ಲಾದ ಮಾರ್ಪಾಟನ್ನೂ ತಿಳಿಯಲು ಎಡೆಗಳ ಹೆಸರಿನ ಹೊರ್ತು ಇಂದು ಬೇರೆ ನಿಶ್ಚಿತವಾದ ಆಧಾರವೇ ದೊರೆಯುವುದಿಲ್ಲ. ಈ ದೃಷ್ಟಿಯಿಂದಂತೂ ಈ ಹೆಸರುಗಳು ಅಭ್ಯಾಸಕ್ಕೆ ಅತ್ಯಂತ ಮಹತ್ವದುವುಗಳಾಗಿವೆ.

ಊರುಗಳು ಶಿಲಾಶಾಸನಾದಿಗಳಿಗಿಂತಲೂ ಸಾವಿರಾರು ವರುಷ ಮೊದಲು ಎಂಬಲ್ಲಿ ಸಂದೇಹವೇ ಇಲ್ಲ. ಆದುದರಿಂದ ಲಿಖಿತ ಆಧಾರಗಳಿಂದ ಗೊತ್ತಾಗದ ಹಲವು ಸಂಗತಿಗಳಿಗಾಗಿ ಊರುಗಳ ಹೆಸರಿನ ನೆರವನ್ನು ಕೋರದೆ ಗತಿಯಿಲ್ಲ. ಕಲ್ಬರೆಹ, ತಾಮ್ರಪಟಗಳಂತೆ ಎಡೆಯ ಹೆಸರುಗಳೂ ನಮ್ಮ ನಾಡಿನ ಇರುವನ್ನು ತೋರುವ ಮಹತ್ವದ ಸಾಧನವಾಗಿವೆ, ಎಂಬದನ್ನು ಇಲ್ಲಿ ಮನಗಾಣಬಹುದಾಗಿದೆ.

---

## ೨. ಎಡೆಗಳ ಹೆಸರುಗಳು

ಹೊಳೆ-ಹಳ್ಳ, ಗುಡ್ಡ-ಬೆಟ್ಟ, ನಾಡು-ಬೀಡು ಮೊದಲಾದ ಯಾವ ಹೆಸರೆ ಇರಲಿ, ಅದು ಸಾಧಾರಣವಾಗಿ ಎರಡು ಶಬ್ದಗಳಿಂದಾದ ಒಂದು ಕೂಡು-ನುಡಿಯಿರುವುದುಂಟು. ಅದರಲ್ಲಿ ಮೊದಲನೆಯದು ಒಂದು ವಿಶಿಷ್ಟಾರ್ಥವನ್ನೂ ಎರಡನೆಯದು ಆ ವರ್ಗದ ಸಾಮಾನ್ಯಾರ್ಥವನ್ನೂ ಸೂಚಿಸುತ್ತದೆ. ಉದಾ: ಪೆರ್ದೊರೆ ಅಥವಾ ಕೃಷ್ಣಾನದಿ; ಶ್ರೀಶೈಲ; ವಿಜಯಾಪುರ ಮುಂ. ಇವುಗಳಲ್ಲಿ ಮೊದಲನೆಯದು ಅಂಕಿತನಾಮ; ಎರಡನೆಯದು ಸಾಮಾನ್ಯನಾಮ ಅಥವಾ ರೂಢನಾಮವಾಗಿರುತ್ತದೆ.

ಆದರೆ ಕೆಲವೆಡೆಗಳಲ್ಲಿ ಈ ಕೂಡುನುಡಿಯೊಳಗಿನ ಎರಡನೆಯ ಪದವು ಸ್ಪಷ್ಟವಿರುವುದಿಲ್ಲ; ಕೊನೆಗೆ ಗೆ ಅಥವಾ ಲು ಇಂತಹ ಯಾವುದೊಂದು ಪೂರಕ ಪ್ರತ್ಯಯವು ಮಾತ್ರ ಅಂಟಿಕೊಂಡಿರುತ್ತದೆ. ಉದಾ: ಕೂಡಲ; ಕೂಡಲಿಗೆ; ನೇಸರಿಗೆ; ಮತ್ತೆ ಇನ್ನು ಕೆಲವೆಡೆಗೆ ಈ ಕೊನೆಯ ಪ್ರತ್ಯಯವೂ ಇರುವುದಿಲ್ಲ ಕೇವಲ ಅಂಕಿತನಾಮವೊಂದೇ ಇದ್ದು ಅದರ ಎರಡನೆಯ ಭಾಗವು ಅವ್ಯಕ್ತವಾಗಿದ್ದರೂ ಅದು ಜನಗಳಿಗೆ ಹೊಳೆಯುತ್ತಿರುತ್ತದೆ. ಉದಾ: ಬಾದಾಮಿ (ಪಟ್ಟಣ); ಹಟ್ಟಿ (ಊರು); ಹಿಮಾಲಯ (ಪರ್ವತ); ತುಂಗಾ (ನದಿ); ಮುಂ

ಊರು, ದೇಶ, ಪರ್ವತ ಎಂಬರ್ಥದ ಕೊನೆಯ ಸಾಮಾನ್ಯನಾಮವು (ಹೆಸರಿನಲ್ಲಿ) ಇರುವಾಗಲೂ, ಹಲವುಸಾರೆ ರೂಢಿ ಮೂಢತೆಯಿಂದ ಬಂದ ನುಚ್ಚಿನಲ್ಲಿ, ಆ ಹೆಸರಿನ ಮುಂದೆ ಇನ್ನೊಂದು ಅದೇ ಅರ್ಥದ ಹೆಚ್ಚಿನ ಶಬ್ದವನ್ನು ಸೇರಿಸುವುದುಂಟು. ಈ ಅರಿವುಗೇಡಿತನವನ್ನು ತಿದ್ದಿಕೊಳ್ಳಬೇಕೆನ್ನುವ ಬದಲು ಅದನ್ನು ಉಳಿಸಿಕೊಂಬುವ ಪ್ರಯತ್ನಗಳಿಂದ ವಿಚಾರಶುದ್ಧಿಗೆ ಅಡ್ಡಿಯುಂಟಾಗುವುದು. ಉದಾ: ಭರಮ**ಪಳ್ಳಿಯಾಬಾದ;** ಕಂ**ನಡ (ನಾಡು) ದೇಶ;** ಸಹ್ಯಾದ್ರಿ**ಪರ್ವತ**; ವ.ಂ. ಇದು ತಪ್ಪು.

ನದಿಗಳನ್ನು ಹೇಳುವಲ್ಲಿ ಬಹುತರ ಅಂಕಿತನಾಮವೊಂದೇ ಸಾಕಾಗುತ್ತದೆ ಉದಾ: ಗಂಗಾ, ತುಂಗಾ, ಕಾವೇರಿ ವ.ಂ. ಇದರಂತೆ ಬೇರೆ ಕೆಲವು ಸಾಮಾನ್ಯ ನಾಮಗಳು ತಮ್ಮ ವೈಶಿಷ್ಟ್ಯದಿಂದ ಅಂಕಿತನಾಮದಂತೆ ಆದುದುಂಟು. ಉದಾ: 'ಗಿರಿ' ಎಂದರೆ ತಿರುಪತಿ; 'ಪರ್ವತ' ಎಂದರೆ ಶ್ರೀಶೈಲ; ನಿವಾಸಸ್ಥಾನಸಂಬಂಧದ ಸಾಮಾನ್ಯ ನಾಮಗಳೂ ಹೀಗೆ. ಅಂಕಿತನಾಮಗಳಂತೆ ರೂಢವಾಗಿವೆ. ಉದಾ: ಊರ (ಊರು); ಹಟ್ಟಿ; ಪಟ್ಟಣ, (ಪಾಟಣ; ಪಾಟಣಾ); ವಾಡಿ, ನಗರ; ಖೇಡ; ವ.ಂ. ಆದರೆ ಇವುಗಳ ಮಹತ್ವವು ಕಡಿಮೆಯಾಗಿಯೊ ಅಥವಾ ಇವು ಅಂಕಿತನಾಮಗಳಾದುದರಿಂದ ಇವುಗಳ ಎದುರು ಸಾಮಾನ್ಯನಾಮದ ಆವಶ್ಯಕತೆಯುಂಟಾಗಿಯೊ ಇವುಗಳೆದುರು ಗ್ರಾಮವಾಚಕ ಇನ್ನೊಂದು ಪದವು ಸೇರಿಕೊಂಡುದು ಹಲವೆಡೆಗೆ ಕಂಡುಬರುತ್ತದೆ ಉದಾ: ಹಳ್ಳಿಪಾಳ (ಹಳ್ಳಾಳ); ಹಳ್ಳೂರು; ಹಳ್ಳಿಕೇರಿ ಪಟ್ಟಿಹಾಳ; ನಗರೂರು; ಪಟ್ಟಣಕುಡಿ ಅಥವಾ ಪಟ್ಟಣಕೋಡಿ; ಹಳ್ಳಿಖೇಡಾ; ಖೇಡಗಾಂವ; ಹೊಳಲುಗುಂದಿ; ಬಾಳಂಬೀಡು; ಪಾಡೆಗಾಂವ; ವಾಟಗಾಂವ; ನಾಡಗಾಂವ: ವ.ಂ.

ಹೆಸರಿನ ಎರಡೂ ಪದಗಳ ಅರ್ಥವು ಹಲವೆಡೆಗಳಲ್ಲಿ ಸುಸ್ಪಷ್ಟವಾಗಿರುವುದಾದರೂ ಎಷ್ಟೋ ಕಡೆಗಳಲ್ಲಿ ಅವುಗಳಿಂದ ಇಡು ಅರ್ಥವು ಸರಿಯಾಗಿ ತಿಳಿಯದಂತಾಗಿರುವುದೂ ಸುಳ್ಳಲ್ಲ. ಪ್ರಾಚೀನಕಾಲದ ಆ ಪದಪ್ರಯೋಗಕ್ಕೆ ಇದ್ದ ಅರ್ಥದಲ್ಲಿ ಆದ ಬದಲಾವಣೆಯು ಇದಕ್ಕೆ ಒಂದು ಕಾರಣ. ಪಾಡಿ, ವಾಡ, ವಾಟಗಳ ವಿಚಾರದಲ್ಲಿ ಮುಂದಿನ ಪ್ರಕರಣದಲ್ಲಿ ಮಾಡಿದ ವಿವರಣೆಯಿಂದ ಈ ಮಾತಿನ ಸ್ಪಷ್ಟೀಕರಣವಾಗುವುದು. ಕಾಲಾಂ

ತದಿಂದ ಶಬ್ದರೂಪದಲ್ಲಾದ ವ್ಯತ್ಯಾಸಗಳು ಇನ್ನೊಂದು ಕಾರಣ. ಕುಡಿಯು ಗುಡಿ, ಕೋಡಿ, ಗೋಡಿಯವರೆಗೆ ಬದಲಾಗಿದೆ. ಇನ್ನು ಕೆಲವೆಡೆಗೆ ಕೋಡವಾಗಿ ಘೋಡ ಎಂದೂ ಕೇಳಬರುವುದು. ಪಳ್ಳಿಯು ವಳ್ಳಿಯಾಗಿ ಮುಂದೆ ಓಳಿ, ಳಿ, ಲಿ, ಳೆ, ಯ ವರೆಗೆ ಪಲ್ಲಟವಾಗಿದೆ. ಕುನ್ ಅಥವಾ ಕುನ್ದವು ಗುಂಡ, ಗುಂಡಿ, ಕೊಂಡ, ಗೊಂಡ, ಗೊಂಡಿ, ಗೊಂದಿ, ಕುಂದ ಗುಂದ, ಕುಂದಿ ಗುಂದಿ ಎಂದು ಮುಂತಾಗಿ ರೂಪ ತಾಳಿದೆ.

ಎಡೆಗಳ ಹೆಸರಿನ ಎರಡೂ ಭಾಗಗಳು ನಮ್ಮ ಜನಗಳ ಸಾಂಸ್ಕೃತಿಕ ಇತಿಹಾಸವನ್ನು ತಿಳಿಸಲು ಅತ್ಯಂತ ಉಪಯುಕ್ತವಾಗಿವೆ. ಆದರೆ ಎಡೆಗಳ ಹೆಸರುಗಳಿಂದ ಯಾವುದೊಂದು ಊಹೆಯನ್ನು ಮಾಡುವ ಮೊದಲು ಅವರ ನಿಜ ಸ್ವರೂಪದ ಬಗೆಗೆ ಎಷ್ಟು ಎಚ್ಚರಪಟ್ಟರೂ ಕಡಿಮೆಯೆ. ಮೂಲದಲ್ಲಿಯೆ ತಪ್ಪಿದರೆ ಮುಂದಿನ ವಿಚಾರಮಂದಿರವೆಲ್ಲ ನೆಲಸಮವಾಗುವುದು. Badami ಎಂದು ಇಂಗ್ರೇಜಿ ಅಕ್ಷರದಿಂದ ಬರೆದ ಹೆಸರನ್ನು 'ಬ್ಯಾಡಮಿ' ಎಂದು ಬಗೆದು ಅದು ಬ್ಯಾಡ (ಬೇಡ)ರ ಊರೆಂದು ಹೇಳುವ ಮೋಹವುಂಟಾಗುವಂತಿದೆ 'ಬಾಡಮಿ' ಎಂದರೆ 'ಬಾಡ' ಎಂಬ ಗ್ರಾಮವಾಚಕ ಪದಕ್ಕೆ ಗೆ,ಲುಗಳಂತೆ ಮಿ ಎಂಬ ಪ್ರತ್ಯಯ ತಗುಲಿದೆಯೆಂದು ಭಾವಿಸುವ ಸಂಭವವಿದೆ 'ಬಾದಾಮಿ' ಎಂದು ಈಗ ವಾಡಿಕೆಯಲ್ಲಿರುವ ಹೆಸರು ಸರಿಯಾಗಿ ತಿಳಿದರೂ ಇಷ್ಟರಿಂದಲೆ ಕೆಲಸವು ತೀರಲಿಲ್ಲ ಇಲ್ಲಿ ಒಂದು ಕಾಲಕ್ಕೆ ಬಾದಾಮಿಯ ಗಿಡಗಳಿದ್ದು ಅದರ ಕಾಯಿಗಳಿಗಾಗಿ ಪ್ರಸಿದ್ಧವಾಗಿದ್ದಿತೆಂದು ಕಲ್ಪಿಸಿ ತಾನೊಂದು ಅದ್ಭುತ ಶೋಧಮಾಡಿದ ಸಮಾಧಾನ ಹಚ್ಚಿಕೊಂಬ ಹೆದರಿಕೆಯಿದೆ. Bijapur ಇದು ನಿಜವಾದ ಹೆಸರೆಂದೇ ಗ್ರಹಿಸಿ ಒಬ್ಬ ಪಂಡಿತರು, ಬೀಜಪೂರ ಗಣಪತಿಯ ಕ್ಷೇತ್ರವೆಂದು ಇದಕ್ಕೆ ಬಿಜಾಪೂರವೆಂಬ ಹೆಸರಾಯಿತೆಂದು ಅದರ ಮೇಲೆ ಒಂದು ಕವಿತೆಯನ್ನೂ ಕಟ್ಟಿದ್ದಾರೆ. ಬೀಜಪೂರವೆಂಬುದು ಇಂಗ್ರೇಜಿ ಉಚ್ಚಾರದ ಪರಿಣಾಮ. ಅದರ ನಿಜವಾದ ಹೆಸರು ವಿಜಯಾಪುರವೆಂದು ಶಾಸನಗಳ ಉಲ್ಲೇಖಗಳಿಂದ ನಿಶ್ಚಿತವಾಗಿ ತಿಳಿಯುತ್ತದೆ. ಅದರಂತೆ ಬಾದಾಮಿಯೆಂಬುದು ಇಂದಿನ ಉಚ್ಚಾರ. 'ವಾತಾಪಿ' ಎಂಬುದು ಅದರ ಮೂಲ ರೂಪ. ಇದು ತಿಳಿದ ಬಳಿಕ ಅದರ ಕತೆಯೆಲ್ಲವೂ ಚೆನ್ನಾಗಿ ಹೊರಬರುವುದು.

ಕೆಲ ಹೆಸರುಗಳು ಹೊರ ತೋರಿಕೆಯಲ್ಲಿ ಬಹಳ ಗಂಭೀರವಾಗಿದ್ದರೂ ಅವುಗಳ ಆರಂಭವು ಒಂದು ಬಗೆಯ ತೀರ ನಗೆಮಾತಿನಲ್ಲಿರುತ್ತದೆ. ಧಾರವಾಡದೊಳಗಿನ 'ಗೋಪಾಳಪುರ' ವೆಂಬ ಹೊಸ ಒಕ್ಕಲು ಇದೇ ಬಗೆಯದಾಗಿದೆ. ಸರಕಾರಿ ನಿಯೋಗದಲ್ಲಿ ಹಲವು ಬಗೆಯ ಕಾಯಕಗಳಿಂದ ದುಡ್ಡು ದೊರಕಿಸಿ ಸಿರಿವಂತರಾದವರು ಕೆಲರು ಆ ಭಾಗದಲ್ಲಿ ಮೊದಲು ಮನೆ ಕಟ್ಟಿದರು. ಸರಕಾರಿ ಕೆಲಸದಲ್ಲಿ ತಮ್ಮ ಸಂಬಳವಲ್ಲದೆ ಇನ್ನೂ ಹೆಚ್ಚಿನ ಸಂಪಾದನೆ ಮಾಡುವುದಕ್ಕೆ 'ಗೋಪಾಳ ಹೊಡೆಯೋದು' ಎಂದು ಹೇಳುವ ಸಂಪ್ರದಾಯುವಿದೆ. ಪುರಂದರದಾಸರ 'ಗೋಪಾಳ ಬುಟ್ಟಿ ಹಿಡಿಸಿದಳಯ್ಯಾ' ಎಂಬ ಹಾಡಿನೊಳಗಿನ ಈ ಮಾತು ಪಡೆನುಡಿಯಾಗಿ ವಿಚಿತ್ರ ವಿಶೇಷಾರ್ಥವನ್ನು ಪಡೆದಿದೆ ಆ ವಿಶೇಷಾರ್ಥದಲ್ಲಿಯೆ ಈ ಎಡೆಗೆ ಗೋಪಾಳಪುರವೆಂಬ ಹೆಸರಾಗಿದೆ.

ಕೆಲವೆಡೆಗಳಲ್ಲಿ ಆ ಹೆಸರು ಬಂದ ಬಗೆಗೆ ಒಂದಕ್ಕಿಂತ ಹೆಚ್ಚು ಕತೆ ಅಥವಾ ಕಾರಣಗಳು ಮುಂದೆ ಬಂದಿರುತ್ತವೆ. ಅವುಗಳಲ್ಲಿ ಯಾವುದು ಸರಿಯೆಂಬುದನ್ನು ಬೇರೆ ಬೇರೆ ಸಂಗತಿಗಳೊಡನೆ ತಾಗಿನೋಡಿ ನಿರ್ಧರಿಸಬೇಕಾಗುತ್ತದೆ. ಉದಾಹರಣಾರ್ಥವಾಗಿ ಮೈಸೂರ ಸಂಸ್ಥಾನದೊಳಗಿನ ಕೋಲಾರ ಎಂಬ ಊರಿನ ವಿಚಾರವನ್ನೆ ತಕ್ಕೊಳ್ಳಬಹುದು. ಕೋಲಾರವೆಂಬ ಹೆಸರು ಏಕೆ ಬಂದಿತೆಂಬುದನ್ನು ಕುರಿತು ಮೈಸೂರ ಗ್ಯಾಝಿಟಿಯರಿನಲ್ಲಿ ಕೆಲವು ಊಹೆಗಳನ್ನು ಕೊಟ್ಟಿದೆ. (೧) ಪರಶುರಾಮನು ತನ್ನ ತಂದೆಯನ್ನು ಕೊಂದ ಕಾರ್ತವೀರ್ಯನ ಸೇಡು ತೀರಿಸಿ, ಆತನಿಂದ ತಮ್ಮ ಸುರಭಿಯನ್ನು (ಆವು) ಮರಳಿ ಪಡೆದ ಕೋಲಾಹಲ—ಗೆಲವು ಇಲ್ಲಿ ಆಯಿತು. ಆ ಕೋಲಾಹಲದ ಸ್ಮಾರಕವೆ ಈ ಊರ ಹೆಸರಿನಲ್ಲಿದೆ. (೨) ಕ್ರಿ. ಶ. ದ ೨ನೆಯ ಶತಮಾನದಿಂದ ಸುಮಾರು ೧೦೦೦ ವರುಷಗಳ ವರೆಗೆ ಆಳಿದ ಗಂಗರಾಜರಿಗೆ 'ಕುವಳಾಲ ಪುರವರಾಧೀಶ'ರೆಂಬ ಬಿರುದು ಇದ್ದಿತು. ಈ ಗಂಗವಂಶದಲ್ಲಿ ಕೋಲಾಹಲನೆಂಬ ಒಬ್ಬ ರಾಜನಾದನು. ಆತನು ಕಟ್ಟಿದ ಪಟ್ಟಣವೆಂದು ಈ ಹೆಸರು. (೩) ಉತ್ತಮ ಚೋಳನ ಕಾಲದಲ್ಲಿ 'ಕೋಲ' ನೆಂಬ ದನಗಾರನಿದ್ದನಂತೆ; ಕೋಲನು ನೇಗಿಲು ಹೊಡೆವಾಗ ಆತನಿಗೆ ಒಂದು ಹೊನ್ನಕೊಪ್ಪರಿಗೆ ದೊರೆತಿತು. ಕೋಲನು, ಹಲಕ್ಕೆ ಎಂದರೆ ನೇಗಿಲಿಗೆ

ಎಲ್ಲಿ ಕೊಪ್ಪರಿಗೆ ಹೊನ್ನು ದೊರೆತಿತೊ ಆ ಎಡೆಯಲ್ಲಿಯೆ ಒಂದು ಊರು ಕಟ್ಟಿದನು ಆ ಕಾರಣದಿಂದ ಇದು ಕೋಲಾಹಲ; (೪) ಚೋಳನ ಕನಸಿನಲ್ಲಿ ರೇಣುಕೆಯು ಕೋಲಾಹಲಮ್ಮನ ರೂಪದಿಂದ ಕಾಣಿಸಿಕೊಂಡಳು........ಆತನು ಇಲ್ಲಿ ಕೋಲಾಹಲಮ್ಮನ ಗುಡಿಕಟ್ಟಿಸಿ ಊರ ನೆಲಸಿದನು. ಈ ದೇವಿಯ ಮೂಲಕ ಈ ಊರಿಗೆ ಕೋಲಾರವೆಂಬ ಹೆಸರಾಯಿತು. ಈ ಗುಡಿಯಲ್ಲಿ ಚೇಳಿಗೆ ಒಂದು ವಿಶೇಷ ಸ್ಥಾನವಿದೆ. ಇಲ್ಲಿ ಚೇಳು ಕಾಣಿಸಿಕೊಳ್ಳುವವಂತೆ.

ಕೋಲಾರವೆಂಬುದು ಮೈಸೂರ ಸಂಸ್ಥಾನದಲ್ಲಿ ಒಂದೇ ಇಲ್ಲ ಈ ಹೆಸರಿಗೆ ಸ್ವಲ್ಪ ಹೆಚ್ಚುಕಡಿಮೆ ಹೋಲಿಕೆಯಿರುವ ಇನ್ನೂ ಕೆಲವು ಊರುಗಳು ಕನ್ನಾಡ ಎಲ್ಲ ಭಾಗಗಳಲ್ಲಿಯೂ ಇವೆ. ವಿಜಯಾಪುರ ಜಿಲ್ಹೆಯಲ್ಲಿ ಒಂದು ಕೊಲ್ಹಾರವೆಂಬ ಊರು ಇದೆ. ಸಂಸ್ಥಾನ ಕೊಲ್ಲಾಪುರ ಅಥವಾ ಕೋಲ್ಹಾಪುರವೆಂಬುದಂತೂ ಸುಪ್ರಸಿದ್ಧ. ದಕ್ಷಿಣ ಕನ್ನಡ ಜಿಲ್ಹೆಯಲ್ಲಿ ಒಂದು ಕೊಲ್ಲೂರು ಗ್ರಾಮವಿದೆ ನಿಜಾಂ ಇಲಾಖೆಯ ಬೀದರ ಜಿಲ್ಹೆಯಲ್ಲೂ ಒಂದು ಕೊಲ್ಲೂರುಂಟು. ಅಲ್ಲದೆ ಇನ್ನೂ ಎಷ್ಟೋ ಇವೆ.

ಕೋಲಾರಿನಲ್ಲಿ ಕೋಲಾಹಲಮ್ಮನು ರೇಣುಕೆಯೆಂಬ ಹೆಸರಿನಲ್ಲೂ ಪ್ರಸಿದ್ಧಳಿದ್ದಾಳೆ. ಕೊಲ್ಲಾಪುರದ ದೇವಿಗೆ ಅಂಬಾಭವಾನಿ ಅಥವಾ ಮಹಾಲಕ್ಷ್ಮಿಯೆಂಬ ಹೆಸರುಗಳು ವಾಡಿಕೆಯಲ್ಲಿವೆ ದ. ಕನ್ನಡಿನ ಕೊಲ್ಲೂರು ದೇವಿಗೆ ಮೂಕಾಂಬಿಯೆನ್ನುವರು. ಕೊಲ್ಲ ಅಥವಾ ಕೋಲವೆಂಬ (ಊರು, ಪುರ. ಹಾರ, ಆರ) ಸ್ಥಳಗಳು ದೇವಿಯ ಕ್ಷೇತ್ರಗಳೆಂದು ಸುವಿಖ್ಯಾತವಾಗಿದ್ದುದು ಮನನೀಯವಾಗಿದೆ. ಆದರೆ ಮೈಸೂರಿನ ಕೋಲಾರದ ಸ್ಥಳಪುರಾಣದ ಕತೆಗಳೆಲ್ಲವೂ ಉಳಿದ ಕೋಲಗ್ರಾಮಗಳಿಗೆ ಸರಿಹೋಗುವುದಿಲ್ಲ.

ಕೋಲಾದೇವಿಯಿಂದ ಈ ಹೆಸರು ಬಂದಿತೆನ್ನಲು ಎಡೆಯಿಲ್ಲ; ಏಕೆಂದರೆ ಒಂದೊಂದು ಸ್ಥಳದ ದೇವಿಯ ಹೆಸರು ಒಂದೊಂದು ತೆರನಾಗಿದೆ. ಪರಶುರಾಮನು ಕಾರ್ತವೀರ್ಯನನ್ನು ಒಂದು ಸ್ಥಳದಲ್ಲಿಯೆ ಕೊಲ್ಲುವುದು ಸಾಧ್ಯವಿದೆ. ನಾಲ್ಕಾರು ಕಡೆಗಳಲ್ಲಿ ಒಬ್ಬನನ್ನು ಕೊಂದನೆಂದು ಹೇಳುವುದು ಅಸಂಬದ್ಧ ಪರಶುರಾಮನು ಇಪ್ಪತ್ತೊಂದು ಬಾರಿ ಕ್ಷತ್ರಿಯರನ್ನೆಲ್ಲ ಹೇಳಹೆಸರಿಲ್ಲದಂತೆ ಮಾಡಿದನೆಂಬಂತೆ! ಇನ್ನು ಚೋಳರಾಜನ ಕನಸಿನಲ್ಲಿ

ದೇವಿಯು ಒಂದ ವಿಚಾರ ಇದು ಮೈಸೂರ ಕೋಲಾರಕ್ಕೆ ಏನೋ ಸರಿಯೆನಿಸಬಹುದು. ಆದರೆ ಉಳಿದ ಕೋಲಗ್ರಾಮಗಳಿಗೆ? ಚೋಳರ ರಾಜ್ಯವು ಕೋಲಾರ (ಮೈಸೂರ) ವರೆಗೆ ಒಮ್ಮೆ ಇದ್ದಿತಾದರೂ ಕೊಲ್ಲಾಪುರ, ಕೊಲ್ಲೂರುಗಳು ಚೋಳರಾಜ್ಯದಲ್ಲಿದ್ದುದಕ್ಕೆ ಐತಿಹಾಸಿಕ ಆಧಾರವಿಲ್ಲ ಇನ್ನುಳಿದುದು ಕೋಲನೆಂಬ ಒಬ್ಬ ದನಗಾರನ ಕತೆ. ದನಗಾರನಂತಹ ಒಂದು ಸಾಮಾನ್ಯ ವ್ಯಕ್ತಿಯು ಕನ್ನಾಡ ಮೂಲೆ ಮೂಲೆಗೂ ಅಲೆದು ಅಲ್ಲಲ್ಲಿ ತನ್ನ ಹೆಸರಿನ ಊರುಗಳನ್ನು ಕಟ್ಟಿದನೆಂದು ಗ್ರಹಿಸುವುದಕ್ಕೆ ಯಾವ ವಿಚಾರವಂತರೂ ಒಪ್ಪಲಾರರು. ಅಲ್ಲದೆ ಇಂತಹ ವ್ಯಕ್ತಿಯು ಇದ್ದುದೇ ನಿಜವಿದ್ದರೆ ಆ ಹೆಸರು ಇತಿಹಾಸ ಅಥವಾ ದಂತಕಥೆಗಳಲ್ಲಿ ಎಲ್ಲಿಯೂ ಅಡಕವಾಗದೆ ಹೋಗಿರುವ ಸಂಭವವು ಕಡಿಮೆ.

ಹಾಗಾದರೆ ಕೋಲಾರ (ಮೈಸೂರ) ವಿಷಯಕ್ಕಿರುವ ಮೇಲಣ ಎಲ್ಲ ಕತೆಗಳು ಸುಳ್ಳೆ? ಸಂಸ್ಕೃತಿಯ ಅಭ್ಯಾಸಿಗೆ, ಇಂತಹ ಯಾವ ಮಾತನ್ನೂ ಸುಳ್ಳೆಂದು ಒಮ್ಮೆಲೆ ತಿರಸ್ಕರಿಸಿ ನಡೆಯದು. ಏಕೆಂದರೆ ಕಾರಣವಿಲ್ಲದೆ ಯಾವ ಮಾತೂ ಬಳಕೆಯಲ್ಲಿ ಬರುವುದಿಲ್ಲ. ಪ್ರತಿಯೊಂದು ಸಂಗತಿಯನ್ನೂ ಕಾರ್ಯಕಾರಣ ಸಂಬಂಧದೊಡನೆ ಇತಿಹಾಸದ ಹಿನ್ನೆಲೆಯಲ್ಲಿ ಅರಿತುಕೊಳ್ಳುವುದು ಜ್ಞಾನಜಿಜ್ಞಾಸುವಿನ ಕರ್ತವ್ಯವಾಗಿದೆ.

ಮೇಲಣ ನಾಲ್ಕು ಕಾರಣಗಳನ್ನು ಕುರಿತು ಇತಿಹಾಸದ ಬೆಳಕಿನಲ್ಲಿ ವಿಚಾರಿಸುತ್ತಿರಲು ಚಂಪ್ರವಳ್ಳಿ ಅಥವಾ ಮೊಹಂಜೋದಾರುವಿನ ಅಗೆತದ ನೆನಪಾಗುತ್ತದೆ. ಅಲ್ಲಿಯ ಅಗೆತದಲ್ಲಿ ಒಂದರ ಕೆಳಗೊಂದು ಮೂರು ನಾಲ್ಕು ಊರುಗಳು ಕಾಣಿಸಿಕೊಳ್ಳುವಂತೆ ಇಲ್ಲಿಯೂ ಸಾಂಸ್ಕೃತಿಕ ಮೂರು ನಾಲ್ಕು ಪದರುಗಳು ಒಂದರೊಳಗೊಂದು ಸೇರಿಕೊಂಡುದು ಕಂಡುಬರುತ್ತಲಿದೆ ಆ ಇತಿಹಾಸದ ಹಿನ್ನೆಲೆಯ ಸ್ಪಷ್ಟತೆಯು ಇಲ್ಲದ್ದರಿಂದ ಅವೆಲ್ಲ ಕತೆಗಳು ಒಂದರೊಳಗೊಂದು ಬೆರೆತುಕೊಂಡು ಇಂದು ವಿಚಾರದ ಗೊಂದಲಕ್ಕೆ ಇಂಬುದೊರೆತಿದೆ.

ಗ್ಯಾಝಿಟಿಯರಿನಂತಹ ಗ್ರಾಮನಾಮಗಳ ಅಭ್ಯಾಸದ ಕೆಲವು ಪ್ರಯತ್ನಗಳು ಅಲ್ಪಸ್ವಲ್ಪ ಈವರೆಗೆ ಆಗಿವೆ. ಆದರೆ ಅವೆಲ್ಲ ಬಿಡಿ ಬಿಡಿಯಾದ ಪ್ರಯತ್ನ. ಒಂದು ಭಾಗದವರು ಇನ್ನೊಂದು ಭಾಗವನ್ನೂ ಗಮನದಲ್ಲಿ ಇಟ್ಟುಕೊಂಡು

ಆಗಬೇಕಾದ ಅಭ್ಯಾಸವು ಅಲ್ಲಿ ಕಾಣಬರುವುದಿಲ್ಲ. ಸಾಮಾನ್ಯವಾಗಿ ಅಲ್ಲಿ ಒಂದೊಂದೇ ಊರನ್ನು ಬಿಡಿಬಿಡಿಯಾಗಿ ವಿಚಾರಿಸಿ ಬರೆದಂತಿದೆ. ನಮ್ಮ ನಾಡನ್ನು ಇಡಿಯಾಗಿ ಕಣ್ಣೆದುರಿಗಿಟ್ಟುಕೊಂಡು ಎಡೆಗಳ ಹೆಸರಿನ ಅಭ್ಯಾಸ ಮಾಡುವುದು ಅವಶ್ಯವಿದೆ. ಈ ದೃಷ್ಟಿಯಿಂದ ನಡೆದ ಪ್ರಯತ್ನವು ಇದೇ ಮೊದಲನೆಯದೆಂದು ಹೇಳಬಹುದು. ಈ ಬಗೆಯ ಇಡಿಯ ನೋಟದಿಂದ ಈ ಮೊದಲು ಗಮನಕ್ಕೆ ಬಾರದೆ ಹೋಗುತ್ತಿದ್ದ ಹಲವು ಅಪೂರ್ವವಾದ ಹೊಸಮಾತುಗಳು ಬೆಳಕಿಗೆ ಬರಲಿವೆ.

ಎಡೆಗಳ ಹೆಸರಿನ ಎರಡು ಪದಗಳಿಂದಲೂ ಸಾಂಸ್ಕೃತಿಕ ಮಹತ್ವದ ಹಲವು ಮಾತುಗಳು ತಿಳಿದು ಬರುತ್ತವೆ. ಅವುಗಳ ಹೆಚ್ಚಿನ ವಿಚಾರ ವಿಮರ್ಶೆಗಳಿಗೆ ಅನುಕೂಲವಾಗುವಂತೆ ಕೆಲವೊಂದು ಗುಂಪುಗಳನ್ನು ಮಾಡಿ ಅವನ್ನಿಲ್ಲಿ ಕೊಟ್ಟಿದೆ. ಶಕ್ಯವಿದ್ದಷ್ಟು ಇಂತಹ ಸಂಪೂರ್ಣ ಪಟ್ಟಿಯೊಂದನ್ನು ಸಿದ್ಧಪಡಿಸುವುದು ಅವಶ್ಯಕವಿದ್ದರೂ ಅದು ಆರ್ಥಿಕ ದೃಷ್ಟಿಯಿಂದ ನನ್ನ ಅಳವು ಮೀರಿದ್ದು. ಈ ಅಲ್ಪ ಭಾರವನ್ನೆ ಇನ್ನೊಬ್ಬರ ನೆರವಿಲ್ಲದೆ ಎತ್ತಲಿಕ್ಕಾಗದೆ ಇದ್ದಾಗ ಆ ಹೆಬ್ಬೊತ್ತಿಗೆಯ ಮಾತೇಕೆ? ಇಲ್ಲಿ ಕೊಟ್ಟ ಪಟ್ಟಿ ಕೇವಲ ಸೂಚನಾಮಾತ್ರವಾಗಿದೆಯಲ್ಲದೆ ಸಂಪೂರ್ಣವಾದುದಲ್ಲ.

ಎಡೆಗಳ ಹೆಸರಿನ ಮೊದಲನೆಯ ಪದದಿಂದ ಮಾಡಿದ ಈ ವರ್ಗೀಕರಣದಲ್ಲಿ ಈ ಮೊದಲೆ ವಿವರಿಸಿದ ಕಾರಣಗಳಿಗಾಗಿ, ನನಗೆ ತಿಳಿಯದೆಯೆ ಕೆಲವು ತಪ್ಪುಗಳು ಅಲ್ಲ ಇಲ್ಲಿ ನುಸುಳಿಕೊಂಡಿರಲಿಕ್ಕೆ ಸಾಕು. (ನನಗೆ ಆ ತಪ್ಪು ತಿಳಿದ ಹಾಗೆ ಅವನ್ನು ತಿದ್ದಿಕೊಳ್ಳುವೆನು.) ಆದರೆ ಅದರಿಂದ ಕೆಳಗಣ ವರ್ಗೀಕರಣಕ್ಕೆ ಯಾವ ಬಾಧಕವೂ ಇಲ್ಲ. ಈ ಗುಂಪುಗಳಲ್ಲಿ ಒಂದೆರಡು ಹೆಸರುಗಳು ತಪ್ಪಿ ಸೇರಿರಬಹುದು; ಆದರೆ ಅದರೊಂದಿಗೆ ಸೇರತಕ್ಕ ಹಲವು ಹೆಸರುಗಳನ್ನು ವಿಸ್ತಾರ ಭಯದಿಂದಲೂ ಇನ್ನೂ ಹೆಚ್ಚಿನ ವಿವರಗಳು ದೊರೆಯದ್ದರಿಂದಲೂ ಬಿಡಬೇಕಾಗಿರುವುದನ್ನೂ ಮರೆಯಲಾಗದು.

ಈ ಹೆಸರುಗಳ ಟಿಪ್ಪಣಿ ಮಾಡುವಾಗ ಮೊದಲು ಇಷ್ಟು ವಿಸ್ತಾರವಾದ ವಿಷಯಗಳುಳ್ಳದಾಗಿ ಇದು ಬೆಳೆದೀತೆಂಬ ಎಣಿಕೆಯಿರಲಿಲ್ಲ. ಬಹುತರವಾಗಿ ಒಂದೊಂದು ಹೆಸರಿನ ಊರು ಸುಮಾರಾಗಿ ನಾಲ್ಕಾರು ಕಡೆಗಳಲ್ಲೂ ಕಂಡುಬಂದುದರಿಂದ, ಇಷ್ಟು ಎಲ್ಲರೂ ಬಲ್ಲ ಊರು ಇರುವ

ಜಿಲ್ಹೆ, ತಾಲ್ಲೂಕು ಏತಕ್ಕೆ ಗುರುತಿಸಿಕೊಳ್ಳಬೇಕೆಂದೆನಿಸಿ ಹಾಗೆಯೆ ಕೆಲಸಕ್ಕೆ ಆರಂಭವಾಯಿತು. ಆದರೆ ಮುಂದೆ ಇದನ್ನು ಬರೆದುಕೊಂಡಿದ್ದರೆ ಚೆನ್ನಾಗಿತ್ತು, ಎಂದು ಕಂಡುಬಂದಿತು. ಆದರೆ ಮತ್ತೊಮ್ಮೆ ಊರ ನಾಮಾವಳಿಯನ್ನು ತಿರುವಿಹಾಕುವಷ್ಟು ತಾಳ್ಮೆ ಈ ದೇಹದಲ್ಲಿ ಇರಲಿಲ್ಲ. ಆದರಿಂದ ಈ ಕೊರತೆ ಅನಿವಾರ್ಯವಾಗಿ ಹಾಗೆಯೆ ಉಳಿದಿತು.

ಪ್ರಾಥಮಿಕ ಮಟ್ಟದಲ್ಲಿ ಬಂದ ಹೆಸರುಗಳಲ್ಲಿರುವ ಸಹಜತೆಯು ಮುಂದಿನ ಪಾಡಿನಲ್ಲಿ ಉಳಿಯುವುದು ಸಾಧ್ಯವಿಲ್ಲ. ಮಾನವನಲ್ಲಿ ಪುನರಾಲೋಚನೆ—ವಿಮರ್ಶನಾಶಕ್ತಿಯು ತಲೆದೋರಿದಂತೆ, ವ್ಯಾಪಾರ, ವ್ಯವಹಾರ, ರಾಜ್ಯತಂತ್ರ, ಧರ್ಮ ಮೊದಲಾದುವುಗಳಿಗೆ ಜೀವನದಲ್ಲಿ ಮಹತ್ವವು ಬಂದಂತೆ ಮಾನವನ ಮೊದಲಿನ ಸಹಜ-ವೃತ್ತಿಯ ಬದುಕಿನಲ್ಲಿ ವಿಚಾರ, ಆಲೋಚನೆಗಳು ಹೆಚ್ಚಿನ ಸ್ಥಾನವನ್ನು ಆಕ್ರಮಿಸಿದುವು. ಎಡೆಗಳಿಗೆ ಬಂದ ಹೆಸರುಗಳಲ್ಲಿಯೂ ಇದರ ಪರಿಣಾಮವು ಕಾಣಿಸಿಕೊಳ್ಳದೆ ಇಲ್ಲ. ನೆಲದ ಗುಣ, ಬಣ್ಣ ಮೊದಲಾದುವುಗಳ ನಿರೀಕ್ಷಣ, ವಿಮರ್ಶೆಯನ್ನು ಸೂಚಿಸುವ ಹೆಸರುಗಳು ಈ ಮುಂದಿನ ಮಟ್ಟದವು ಆಗಿವೆ. ಸಹಜ ವೃತ್ತಿಯಿಂದ ವಿಚಾರಪರತೆಯ ಕಡೆಗೆ ಒಲಿದ ಹಾಗೆಲ್ಲ ಮುಂದಿನ ಕಾಲದಲ್ಲಿ ತಲೆಯೆತ್ತಿದ ಹೆಸರುಗಳಿವು. ಇತಿಹಾಸ, 'ಪುರಾಣಾದಿಗಳ ನೆನಹನ್ನು ಕೊಡುವಂತಹವೂ ಇದೇ ಬಗೆಯುವಾಗಿವೆ ಲೋಕದಲ್ಲಿ ಎಲ್ಲೆಡೆಗಳಲ್ಲಿ ಅವುಗಳಿಗೆ ಹೆಸರು ದೊರೆಕೊಂಡುದು ಇದೇ ತೆರನಾಗಿ.

ಎಲ್ಲ ಭಾಗದವರೂ ಒಂದೆಡೆಗೆ ಕಲ್ತು ಇಟ್ಟ ಹೆಸರುಗಳಲ್ಲವಾದರೂ, ಅವುಗಳಲ್ಲಿರುವ ಹೋಲಿಕೆಯು ಕೌತುಕಾಸ್ಪದವಾಗಿದೆ. ಕೆಲವೊಂದು ಸ್ವಲ್ಪ ವೈಶಿಷ್ಟ್ಯವು ಒಂದೊಂದು ಭಾಗದಲ್ಲಿದ್ದುದು ಬೇರೆ ಮಾತು. ಆದರೆ ಒಟ್ಟಿನ ರೀತಿಯು ಒಂದೇ ಬಗೆಯದಾಗಿದ್ದುದು ಸೋಜಿಗದ ಸಂಗತಿ. ಇಲ್ಲಿಯ ವರ್ಗೀಕರಣದಲ್ಲಿ ಒಳಗೊಳ್ಳದೆ ಉಳಿದಿರುವ ಊರುಗಳ ಸಂಖ್ಯೆ ಅಸಂಖ್ಯವಾಗಿದೆ. ಇನ್ನೂ ಪರಿಶ್ರಮಪಟ್ಟು ಅವುಗಳಲ್ಲಿರುವ ಒಂದು ಕಟ್ಟನ್ನು ಕಂಡುಕೊಳ್ಳಬಹುದಾಗಿದೆ.

ಒಂದೊಂದು ಗುಂಪಿನಲ್ಲಿರುವ ಹೆಸರುಗಳೆಲ್ಲ ಒಂದೇ ಕಾಲಕ್ಕೆ ಮುಂದೆ ಬಂದುವೆಂದು ಭಾವಿಸಲಾಗದು. ಅವುಗಳಲ್ಲಿ ಎಷ್ಟೋ ಶತಮಾನಗಳ

ಅಂತರವು ಇರಲಿಕ್ಕೆ ಸಾಕು. ಆದರೂ ಅವು ಆ ಒಂದು ಪರಂಪರೆಯು ಹೇಗೆ ಅವಿಚ್ಛಿನ್ನವಾಗಿ ನಡೆದು ಬಂದಿತೆಂಬುದನ್ನು ಸೂಚಿಸುತ್ತವೆ.

ನಿಶ್ಚಿತ ಆಧಾರಗಳು ದೊರೆಯುವುದು ಸಾಧ್ಯವಿಲ್ಲದ್ದರಿಂದ ಈ ವರ್ಗೀಕರಣದಲ್ಲಿ ಕೆಲವೊಂದು ತಪ್ಪುಗಳು ಆಗಿದ್ದುದನ್ನು ಒಪ್ಪಲೇಬೇಕು. ಪ್ರಾಣಿಗಳಿಂದ ಬಂದ ಹೆಸರುಗಳಲ್ಲಿ 'ನಾಗ' ರಿಂದ ಬಂದುವುಗಳನ್ನು ಹಾವಿನ ಹೆಸರಿನ ಗುಂಪಿನಲ್ಲಿ ಸೇರಿಸಿಲ್ಲ. ಏಕೆಂದರೆ 'ನಾಗರು' ಎಂಬ ಒಂದು ಜನವು ಈ ನಾಡಿನಲ್ಲಿ ಒಂದು ಕಾಲಕ್ಕೆ ನೆಲಸಿದ್ದಿತು. 'ನಾಗನೂರು' ಮೊದಲಾದುವು ಈ ಬಗೆಯುವು; ಹಾವಿನಿಂದ ಬಂದುವಲ್ಲವೆಂದು ನನ್ನ ಗ್ರಹಿಕೆ. ಆದರೆ ಕೆಲವೆಡೆಗೆ ಪ್ರೌಢ ಗಂಭೀರ ಹೆಸರೆಂದು ಭಾವಿಸಿದ್ದಲ್ಲಿ, ಹಾವಿಗೆ ನಾಗವೆಂದು ಹೇಳಿ ಒಂದು ಹಾವನೂರು ನಾಗನೂರಾಗಿದ್ದರೂ ಇರಬಹುದು. ಅಥವಾ ಹಾವಿನ ವಿಶಿಷ್ಟ ಜಾತಿಯನ್ನು—ನಾಗವನ್ನು ನೆನೆದು ಆ ಹೆಸರು ಕೆಲವೆಡೆಗೆ ಬಂದಿದ್ದರೂ ಬಂದಿರಬಹುದು.

ಹುಲಿಯ ಹೆಸರಿನ ಊರುಗಳೆಲ್ಲ ಹುಲಿಯ ಮೂಲಕವಾಗಿಯೆ ಬಂದಿರಬಹುದಾದರೂ ಪುಲಿಮಾಯಿ, ಪುಲಿಕೇಶಿಗಳಂತಹ ಮಹಾಪುರುಷರ ಸೆನಹೆಂದು ಯಾವುದಾದರೂ (ಪುಲಿ) ಗೆರೆ, ಊರುಗಳು ತಲೆಯೆತ್ತಿರುವುದೂ ಅಸಂಭವವಲ್ಲ.

ದೇವತೆಗಳ ಹೆಸರಿನಲ್ಲಿ ವ್ಯಕ್ತಿಗಳಿಂದ ಬಂದ ಹೆಸರುಗಳು ಸೇರಿಕೊಂಡಿರುವ ಸಂಭವವಂತೂ ಬಹಳ. ಆದರೂ ವ್ಯಕ್ತಿಗಳಿಗೆ ಇಟ್ಟ ಹೆಸರು ಮೊದಲು ಯಾವುದೊಂದು ದೇವತೆಯದೇ ಆಗಿರುತ್ತದೆಂಬುದನ್ನು ಮರೆಯಲಾಗದು. ನಮ್ಮ ನಾಡವರಿಗೆ ಮೆಚ್ಚಿನ ದೇವತೆಗಳು ಯಾವುವು ಎಂಬುದನ್ನು ಆ ಗುಂಪು ಸೂಚಿಸುತ್ತದೆಂಬಲ್ಲಿ ಸಂದೇಹವಿಲ್ಲ

ಒಂದೊಂದು ಊರನ್ನು ಹಿಡಿದು ಅಲ್ಲಿಯ ಓಣಿ ಕೇರಿಗಳ ಹೆಸರು ಗುಡಿ, ಮನೆ, ಮಠಗಳ ವಿಶಿಷ್ಟ ಹೆಸರು, ನೆರೆಯ ಕೆರೆ, ಬೆಟ್ಟ, ಬಯಲುಗಳ ಹೆಸರು ಮೊದಲಾದುವನ್ನೆಲ್ಲ ಕಲೆಹಾಕಿ ಒಂದೊಂದು ತಾಲ್ಲೂಕಿನ ಅಥವಾ ನಾಡವಿಭಾಗದ ಪಟ್ಟಿಗಳು ಅಚ್ಚಾದಲ್ಲಿ ನಮ್ಮ ಜನಗಳ ಸಾಂಸ್ಕೃತಿಕ ಸೂಕ್ಷ್ಮ ಅಭ್ಯಾಸಕ್ಕೆ ಬಹಳ ಸಹಾಯವಾಗತಕ್ಕದ್ದಿದೆ.

ನಮ್ಮ ನಾಡಿನಲ್ಲಿ ನೆಲಸಿದ, ನೆಲಸಿರುವ, ಬಂದು ನೆಲಸುತ್ತಿರುವ

ಬೇರೆ ಬೇರೆ ಜನಗಳ ಎಣಿಕೆಯೆಲ್ಲವೂ ಈ ಬಗೆಯ ಸ್ಥಲ ನಾಮಗಳಿಂದಲೆ ಆಗುವುದು ಸಾಧ್ಯ. ಊರಲ್ಲಿ ಕೆಲವು ಕೇರಿಗಳಿಗೆ ಆಯಾ ಭಾಗದಲ್ಲಿ ನೆಲಸಿದ ಜನಗಳ ಮೇಲಿಂದ ಹೆಸರುಗಳು ಬಂದಿರುತ್ತವೆ. ಆ ಹೆಸರುಗಳಿಂದ ನಮ್ಮ ನಾಡಿನಲ್ಲಿ ಎಷ್ಟು ಬಗೆಯ ಜನಗಳುಂಟೆಂಬ ನಿಶ್ಚಿತ ಕಲ್ಪನೆಯುಂಟಾಗುವುದು. ಊರ ರಚನಾಕ್ರಮವು ತಿಳಿದರೆ ಇನ್ನೂ ಎಷ್ಟೋ ಸಂಗತಿಗಳ ಮೇಲೆ ನಿಶ್ಚಿತ ಬೆಳಕು ದೊರೆಯುವುದಿದೆ

ಈ ಬಗೆಯ ಪಟ್ಟಿಗಳು ಪ್ರಕಟವಾದಲ್ಲಿ ನಮ್ಮ ನಾಡಿನಲ್ಲಿ ದೇವದೇವತೆಗಳು ಎಷ್ಟು ಬಗೆಯ ರೂಪಗಳಲ್ಲಿ ಪೂಜೆಗೊಳ್ಳುತ್ತಲಿವೆಯೆಂಬ ಮಾತೂ ಸ್ಪಷ್ಟವಾಗುವುದು. ಮತ್ತು ಕಾಲಕಾಲಕ್ಕೆ ನಾವು ಹಳೆಯ ದೇವತೆಗಳನ್ನು ಬಿಟ್ಟು ಹೊಸ ದೇವತೆಗಳನ್ನು ಹೇಗೆ ಬರಮಾಡಿಕೊಂಡಿರುವೆವೆಂಬುದೂ ತಿಳಿಯುವುದು.

ಆ ಮಾಸದಿಂದ ನನ್ನ ಈ ಪರಿಮಿತಿಯಲ್ಲಿ ಬಂದಿರುವ ಅಂಶಗಳು ಬಹಳ ಸ್ವಲ್ಪ. ಅವುಗಳ ಆಧಾರದಿಂದಲೆ ನನಗೆ ನಿಲುಕಿದಷ್ಟು ಮಾತುಗಳನ್ನು ಮುಂದೆ ಕಾಣಿಸಿದ್ದೇನೆ.

## ಎಡೆಗಳ ಹೆಸರಿನ ಮೊದಲ ಭಾಗದಿಂದ ಸೂಚಿತವಾಗುವ ಕೆಲವು ಗುಂಪುಗಳು:

### ೧. ಪ್ರಾಣಿಗಳಿಂದ ಬಂದುವು:

ಆವಿನಹಳ್ಳಿ, ಚಿಕ್ಕಆವಳ್ಳಿ; ಹಿರೇಆವಳ್ಳಿ; ಆವಿನಮಡು, ಆಕಳವಾಡಿ; ತುರುವೆಕೆರೆ, ತುರುವನೂರು; ತುರುಕಾರಶಿಗೀಹಳ್ಳಿ; ಗೋಪಾಡಿ (ದ.ಕ), ಗೋವನಕೊಪ್ಪ, ಗೋಹಳ್ಳಿ, ಗೋಗೇರಿ, ಗೋಗಿ, ಗೋಕಾಳ, ಗೋಕಾಗೆ (ಗೋಕಾಕು), ಗೋಗಟೆ (ಗೋಕಟ್ಟೆ? ಕೊಲ್ಲಾಪುರ), ಗೋಕುಲ, ಗೋವರ್ಧನಗಿರಿ (ಮೈ.), ಗೋವಿನದಿನ್ನಿ, ಗೋಕರ್ಣ; ಗೋಪರಾಷ್ಟ್ರ (=ತುಳುನಾಡು), ಗೋವೆ; ಗೌಳದಿನ್ನಿ, ಗೌಳಗೇರಿ; ಗೌಹಟ್ಟಿ (ಆಸಾಮ); ಗೌಳದೇಶ (ಬಂಗಾಳ); ಘೋಸ (ಷ) ಬಾಳ(ವಿ);

ಎತ್ತಿನಕೊಪ್ಪ, ಎತ್ನೂರು, ಎತ್ತಿನಗುಡ್ಡ; ಎತ್ತಟ್ಟಿ; ಸಂದ್ಯಾಲ

(ನಂದಿಹಾಳ); ನಂದಿಗ್ರಾಮ, ನಂದಿಗಲ್ಲು; ನಂದೂರಬಾರ; ಬಸಾಪುರ, ಬಸವಾಪಟ್ಟಣ; ಬೈಲಹೊಂಗಲ, ಬೈಲವಾಡ, ಬೈಲೋಬನಹಾಳ (ನಿಜಾಂ); ದನಗಾರಹಟ್ಟಿ (ಬ.); ದನಗೂರು (ಮೈ.) ಜತ್ತಿ, ಜತ್ತವಾಡಿ, ಮತ್ತು ಜತ್ತಗಾವ (ಎತ್ತು?):

ಎಮ್ಮಿಗನೂರ; ಎಮ್ಮಿಗುಡ್ಡ; ಎಮ್ಮೆಹಟ್ಟಿ; ಎಮ್ಮೆಗೊಂಡ (ಕೊಲ್ಹಾಪೂರ); ಎಮ್ಮೆದೊಡ್ಡಿ, ಎಮ್ಮರಪಳ್ಳಿ. ಮಹಿಷಪುರ; ಮಸವಡ; ಮಹಿಸವಾಡಗಿ; ಮಹಿಸಾಳ; ಮಣಕವಾಡ; ಜಮ್ಮೆಹಾಳ (ಧಾ); ಮೈಸವಳ್ಳಿ (ಮೈ);

ಕೊಣ್ಣೂರು (ಕೋಣನೂರು?), ಕೋಣನತಂಬಿಗೆ; ಕೋಣಸಕೆರೆ; ಕೋಣಸಕುರಿಕೆ;

ಕುರಿಗ್ರಾಮ; ಕುರಿಹಟ್ಟಿ; ಕುರಿಯಾಳ; ಕುರಿಗೋವನಕೊಪ್ಪ; ಕುರುಬರಹಟ್ಟಿ; ಕುರಿಗುಡ್ಡ; ಕುರಿಗುಪ್ಪ; ಕುರಿಘಟ್ಟ;

ಗೋಪನಹಳ್ಳಿ, ಗೋಪನಕೊಪ್ಪ; ಗೊಲ್ಲಹಳ್ಳಿ.

ಯಾದವಾಡ; ಯಾದಗಿರಿ; ಯದುಗಿರಿ; ಯಾದಗಿ; ಯಾದಗೊಪ್ಪ.

ತುರುವನೂರು; ತರುಕೆವಾಡಿ; ತುರುಕನದೋಡಿ; ತುರುಕಬಾಮನಹಳ್ಳಿ.

ಕುರುಬಗಟ್ಟಿ; ಕುರುಬರಹಾಳ; ಧನಗರವಾಡಿ; ದನಗಾರಹಟ್ಟಿ (ಬ.);

(ತುರುಕಾರ ಶಬ್ದವನ್ನು ತುರುಕವೆಂದು ಭ್ರಮಿಸಿದ್ದು ಹಲವೆಡೆಗೆ ಕಂಡುಬಂದಿದೆ. ಬೈಲಹೊಂಗಲ ತಾಲ್ಲೂಕಿನಲ್ಲಿ ತುರುಕಾರರೆಂಬ ಪಂಗಡದ ವೀರಶೈವರಿದ್ದಾರೆ; ಈ ಮನೆತನದ ದೇಸಾಯರೂ ಉಂಟು. ಬೆಳವಡಿ ಮಲ್ಲಮ್ಮನು ಈ ಪಂಗಡದವಳಂತೆ. ಈ ತುರುಕಾರರನ್ನು ತುರುಕರಿಗೆ ಸಂಬಂಧ ಜೋಡಿಸಿ ಅವರನ್ನು ಕಡಿಮೆಯುವರೆಂದು ವಾದಿಸುವ ಭ್ರಾಂತರು ಕೆಲವರಿದ್ದಾರೆ. ಇವರಿಗೆ ಉತ್ತರವೆಂದು ಹೂಲೀಮಠದ ಸ್ವಾಮಿಗಳು ಒಂದು ಪ್ರಕಟನೆ ಹೊರಡಿಸಿದ್ದಾರೆ. ಈ ಜನ ತುರುಕರಲ್ಲ; 'ತುರುಕಾರಿ' ಎಂದರೆ ತುರುಕರ ವೈರಿಗಳೆಂದು ಅರ್ಥ ಹೇಳಿದ್ದಾರೆ! ಇವರು ತುರುಕಾರರು ಎಂದರೆ ಹಟ್ಟಿಕಾರ ಗೋಪಾಲರು ಎಂಬುದು ನಿಜಸ್ಥಿತಿ. ಈಗ ನಮ್ಮ

ನಾಡಿನಲ್ಲಿ ಇರುವ ತುರುಕೇವಾಡಿ ಮೊದಲಾದ 'ತುರುಕ' ಪದವನ್ನೊಳಗೊಂಡ ಊರುಗಳು ತುರುಕಾರರಿಗೆ ಸಂಬಂಧಪಟ್ಟವುಗಳೇ ಇರಬಹುದೆಂಬು ನನ್ನ ಊಹೆ.)

ಆಡೂರು; ಆಡಾಪುರ; ಆಡಟ್ಟಿ (ಕೊಲ್ಲಾಪೂರ); ಶೇಳೋಲಿ; ಆಡೊಳ್ಳಿ; ಟಗರಳ್ಳಿ; ಹೋತನಹಳ್ಳಿ;

ಉಣ್ಣೆಭಾವಿ; ಚಿಕ್ಕಾಡಪುರ; ತಿಗಣೀಬಿದರಿ;

ನಾಯಿಗಾವ; ನಾಯುಂಪಳ್ಳಿ; ಕುನ್ನೂರು;

ಜಂಬುಕಂಡಿ; ಜಂಬಿಗೆ; ನರಿಕೊಂಬು; ನರಿಗುಂದ; ನರಿಯಣ; ನರೇಗಲ್ಲು; ನರೇವಾಡಿ; ಬಳ್ಳೂರು;

ತೋಳವಟ್ಟಿ;

ಕರಡೀಗುಡ್ಡ; ಕರಡಿ; ಕರಡಿಕೊಪ್ಪ;

ಬೆಕ್ಕೋಡ; ಬ್ಯಾಕೋಡ; ಮಾಂಜರಿ;

ಕಿರುಬನಕಲ್ಲು; ಹೊನಗನಹಾಳ; ಹುಲಿಗೆರೆ (ಪುಲಿಗೆರೆ); ಹುಲಿಯದುರ್ಗ; ಹುಲಿಕಲ್ಲ; ಹುಲಿಹಾಳ; (ಹುಲ್ಯಾಳ); ಹುಲಿಗೊಳ: ವಾಘವಡೆ (ಬೆ); ಚಿರಚನಕಲ್ಲು (ವಿ);

ಹಂದೂರು; ಹಂದಿಗನೂರು; ಹಂದಾಡಿ; ಹಂದೇವಾಡಿ (ಕೊಲ್ಲಾಪೂರ); ಹಂದ್ಲಿ; ಹಂದಿಗೋಳ; ಡುಕರವಾಡಿ (ಬೆ);

ಸಿಂಗನಳ್ಳಿ; ಸಿಂಗನಮುಕ್ಕೆ; ಸಿಂಗನಮಲ್ಲ; ಸಿಂಗಿನಕೊಪ್ಪ;

ಆನೆಕಂಡಿ; ಆನೆಗೊಂದಿ: ಹೊಳೆಆನೆವೇರಿ; ಆನವಟ್ಟಿ; ಆನಗೊಳ್ಳ (ಬೆ); ಗಜಪತಿ; ಗಜನೂರು; ಗಜೇಂದ್ರಗಡ; ಮುಸಳಿ; ನೆಗಳೂರು; ಎೊನ್ನೆರೆ (ಬ);

ಕುದರಗಿ; ಕುದುರೆಗುಂಡು; ಕುದುರೆಕಣಿವೆ; ಕುದುರೆ ಮುಖ; ಕರೆಗುದುರೆ; ಘೋಡಗೇರಿ; ಘೋಡನದಿ; ಕತ್ತೇಬೆನ್ನೂರು;

ಹರಿಣಪುರ; ಹುಲ್ಲೂರು (ಹುಲ್ಲೆ + ಊರು ?); ಹರಿಣಗೀನದಿ; (ಕೊಡಗು);

ನವಿಲೂರು; ನವಿಲುಗುಂದ; ನವಲಿ; ಮಯೂರಕಂಡಿ; ಮೋರಖಿಂಡ (ನಿಜಾಂ); ನೌಲಕುರಕೆ; ನವಲಗಟ್ಟಿ; ಮೋರೆ; ಗಿಳಿಯೋರು;

ಗುಬ್ಬಿ; ಗುಬ್ಬಿವಾಡ; ಗುಬ್ಬಿಗೋಡು; ಬೆಳವಡಿ; ಬೆಳವಗಿ; ಇಣಚಿಗಲ್ಲ (ವಿ.); ಗೂಗಿಹಾಳ; ಬಕಪುರ; ಕೊಕ್ರಾಡಿ (ದ. ಕ.); ಕಾಗೆನೆಲ್ಲಿ (ಕಾಗಿನೆಲೆ); ಕಾಗೆವಾಡ; ಕಾಗೀಹಾಳ (ಬೆ.); ಕಾಕನೂರು (ವಿ); ಕೋಳಿಯೂರು (ದ. ಕ.); ಕೋಳೂರು; ಕೋಳಿವಾಡ;

ಹಾವನೂರು; ಹಾವಿನಹಾಳ; ಹಾವೇರಿ; ಹಾವರಗಿ; ಹಾವಿನಹಳ್ಳಿ; ಪಾವುಗಡ; ಪಾವೂರು; ಶೇಷಗಿರಿ; ಉರಗನಹಳ್ಳಿ (ಕಾ); ಮುಂಗಲಿ (ಸೊ.);

ಚೇಳೂರು; ಚೇಳಯ್ಯಾರು; ಚೇಳವಟ್ಟಿ; ಚೋಳೇನಹಳ್ಳಿ; ವಿಂಚೂರಂ (ನಾಶಿಕ);

ಜಿಗಳಿ; ಜಿಗಳೂರು; ತೇಲಣಿ; ತೇರವಾಡ; ನೊಣವಿನಕೆರೆ; ನೊಣಂಬವಾಡಿ; ತೊನಸೆ; ತೊನಸ್ಯಾಳ; ಗೆಲ್ಲುರ್; ಗೆದ್ಲಹಾಳ;

ಹಲ್ಲಿಕೊಪ್ಪ; ಉಡುಮರಡಿ (ಮೈ.); ಓತಿಹಾಳ; ಕ್ಯಾತನಳ್ಳಿ; ಕಾತರಾಳ; ಸರಟಪುರ (ಸೊರಟೂರು);

ಕೊ(ೞ)ಡಗಾನೂರು; ಮಂಗೆ; ಮಂಕಿ; ಮಂಗನಾಳ;

## ೨. ಗಿಡಗಂಟಿಗಳಿಂದ ಬಂದ ಹೆಸರುಗಳು

ತೇಗೂರು. ಮುತ್ತಲಗೇರಿ; ಮುಳುಮುತ್ತಲ; ಮುತ್ತಿಕಟ್ಟಿ; ಆಲೂರು; ಆಲದಕಟ್ಟಿ; ಹುಣಸೇಕಟ್ಟಿ; (ಹಾಳ; ಊರು;) ಚಿಂಚವಾಡ; ಚಿಂಚಲಿ; ಚಿಂಚಣಿ; ಚಿಂಚೋಳಿ; ಪುಣಚ; ಅರಳೀಕಟ್ಟಿ; ಅತ್ತಿ; ಅತ್ತಿಕೊಳ್ಳ; ಉಂಬರವಾಡಿ; ಔದುಂಬರ; ಹಲಸಿಗಿ; ಹಲಸೂರು; ನೀರಲಕೇರಿ; ನೀರಲಕೊಪ್ಪ; ನೇರಲಗಿ; ನೇರ್ಲಿ; ನೇರಳೆ (ಮಹಾರಾ.); ಬೇಲೂರು (ಬಿಲ್ವಪುರ); ಬೆಲವಂತ್ರ; ಬೆಳವಡಿ; ಕವಠಕೊಪ್ಪ (ಖವಟಕೊಪ್ಪ); ಬಸರಕೋಡ; ಬಸರೀಕೊಪ್ಪ; ಬಸರೂರು; ಬೇವೂರು; ಬೇವಿನಕಟ್ಟಿ; ನಿಂಬರಗಿ; ನಿಂಬಗಾವ; ನಿಂಬ; ಜಾಲಿಹಾಳ; ಜಾಲಿಕೊಪ್ಪ; ಬಾಬಲಿಕಲ್ಲ (ನಿಜಾಂ); ಸುರಹೊನ್ನೆ; ಮಾವಿನಕುರವೆ; ಮಾವಿನಕೆರೆ; ಅಮಟಿಬೆಟ್ಟ; ಅಮಟಿ, ಅಂಬೋಲಿ; ಅಮಟೂರು; ಅಂಬಡಗಟ್ಟಿ; ಅಂಬೆಗಾಂವ; ಅಂಬೆವಾಡಿ; ಕೇರಕೊಪ್ಪ (ಕ್ಯಾರಕೊಪ್ಪ);

ಕೇರಾಡಿ; ಕೇರವಾಡ; ಗೇರಸೊಪ್ಪೆ; ಬಿದಿರೆ; ಬಿದರಹಳ್ಳಿ; (ಮೂಡು; ಪಡು,) ಬಿದಿರೆ; ಬಿದರೂರು; ವೇಣೂರು; ಬೇಳಗಾಂವಿ; ಗಲಗಲಿ; ಸೀಗಿಹಳ್ಳಿ; ಹೂವಿನಶಿಗ್ಗಲಿ; ಗುಂಜಿ; ಗುಲಗಂಜೀಕೊಪ್ಪ; ಕವಳೆ; ಬೋರಗಾಂವ; ಬಾರಿಬಂಡಿ(ನಿಜಾಂ); ಬೋರಿ; ಬದ್ರಿ (ಕೊಲ್ಲಾಪೂರ); ಬೋರಿವಲಿ (ಬೋರಿವಳ್ಳಿ); ಬದ್ರಿ (ಭಾದ್ರಿ?) ಆರಿಕಾಡು (ದ. ಕ.); ನೆಲ್ಲೀಕೇರಿ; ನೆಲ್ಯಾಡಿ; ಕವಳಿಕಟ್ಟಿ; ಗೋಣೀಬೀಡು; ಚಳ್ಳಗೇರಿ; ಬನ್ನಿಗೋಳ; ಬನ್ನೂರು; ಬನ್ನಿಕೊಪ್ಪ; ಚಂದನಮಟ್ಟಿ; ಚಂದನ ಹೊಸೂರು; ಕಳ್ಳಿಗೆ; ಕಳ್ಳಿಹಾಳ; ತಡಸಿನಕೊಪ್ಪ; ತಡಸ; ಬಸಳೆ ಗುಂಡಿ; ಲಕ್ಕಿಗುಂಡಿ; ಸೂರಣಗಿ;

ತಾಳೀಕೋಟೆ; ತಾಳೀಪಾಡಿ; ತಾಳಗುಂದ; ತಾಳಗುಪ್ಪೆ; ತಾಳಗುಣಿ; ತಾಳೆಕೆರಿ; ತಾಳಗೋಡ; ತಾಳಗಡ್ಡೆ; ಈಚಲಕರಂಜಿ; ಇಚ್ಲಂಪಾಡಿ (ದ.ಕ.); ತಾಳಮಕ್ಕಿ; ತೆಂಗಿನಘಟ್ಟ, ತೆಂಗಿನಮುಡಿ; ಅಡಿಕೆಕುಳಿ; ಅಡಕೂರು, ಅಡಕೋಳ; ಶುಂಠೀಕೊಪ್ಪ; ಬಾಳೆ; ಬಾಳೆಹಳ್ಳಿ; ಬಾಳೆಹೊನ್ನೂರು; ಬಾಳೆಪುಣಿ; ಕಂಚಿ; ಕಂಚೀಕಾಯಿ;

ಅಕ್ಕಿಆಲೂರು; ಅಕ್ಕಿವಾಟ; ಅಕ್ಕಿಸಾಗರ; ನೆಲ್ಲೂರು; ಭತ್ತಗುಣಿಕೆ; ಕಡೇಶಾಲ್ಯ; ಸುಂಕಸಾಳೆ; ಶಾಲ್ಯ (ಶೇಲಂ);

ಕಬ್ಬೂರು; ಗೋದಿಹಾಳ; ಜೋಳದರಾಶಿ; (ಬ.); ಜೋಳದ ಹಾಳು; ಕರಜೋಳ; ನವಣಿಹಾಳ; (ಕೊ.); ಕಡ್ಲೆ; ಕಡಲಗೆ; ಕಡ್ಲೀ ಮಟ್ಟಿ; ಕಡಲೀಕೊಪ್ಪ; ಕಡಲೆಬಾಳು; ಕಳಲೆ (?); ತೊಗರೆ; ತೊಗ ರಳ್ಳಿ; ಹೆಸರೂರು; ಹುರಳೀಕುಪ್ಪಿ; ಹುರಳಿ; ಅವರಾದಿ; ಅವರಸೆ; ಅವರವಾಡ (ಔರವಾಡ); ಬೆಂಗಳೂರು; ಗವರವಾಡ; ಗವುರವಾಡ (ಗೌರ ವಾಡ); ಬದನವಾಳು; ಬದನೆಗೋಡು; ವಾಂಗಣೆ; ಅರಸಿನಗೇರಿ; ಅರಷಣಗಿ; ಎಳ್ಳೂರು; ಸಾಸಿವೆಹಳ್ಳಿ; ಸಾಸವಡ (ಪುಣೆ); ಜೀರಿಗೆ ಕೊಪ್ಪ; ಬೆಂಡೀಗೇರಿ; ಹತ್ತರಿಕಿ; ಹರಿವೆ; ತೊಂಡಿಕಟ್ಟೆ; ತೊಂಡಿ ಹಾಳ; ಹಾಗಲವಾಡಿ; ಕಾರಲೆ; ಮೆಣಸಿ; ಮೆಣಸಗಿ; ಮೆಣಸೂರು; ಕುಂಬಳೆ; ಕುಂಬಳಹಾಳ (ಕೊಲ್ಹಾಪೂರ); ಭೋಪಳಾಪುರ (ಧಾ. ಜಿ.)

ಹಿರೇಕಾಯಿ; ಗೋಳೀಕೇರಿ; (ಕಾಡಿಗೆ) ಗರಗು; ಒಳ್ಳೊಳ್ಳಿ; ಚಿಕ್ಕ ಮೂಲಂಗಿ; ಹಿರೇಮೂಲಂಗಿ;

ನಾಗಸಂಪಿಗೆ; ಸಂಪಿಗೆ; ಸಂಪಖಂಡ; ಸಂಪಗಾವ; ಸಂಪಾಜೆ; ಅಂಕಲಿ; ಅಂಕಲಗಿ; ಅಂಕೋಲೆ;

ಕಣಗಿನಹಾಳ; ಕಣಗಲಿ; ಹಾತಕಣಗಲಿ; ಕೇದಿಗೆಕೊಪ್ಪ; ಚೆದಚಿ ಕೊಪ್ಪ (ಧಾ); ಸುರಗಿಹಾಳ; ಹೊನ್ನೆಕೊಂಬು; ತುಂಬ (ಬೆ.); ತುಂಬಗಿ; ತುಳಸಿಗೇರಿ; ತುಳಸಾಪುರ (ವಿ.); ತುಳಜಾಪೂರ (ನಿಜಾಂ);

ಮಲ್ಲಿಗೆಹಾಳ; ಮಲ್ಲಿಗೆವಾಡ; ಜಾಜೂರು; ಹೂವಿನೂರು; ಹೂನೂರು (ಹುನ್ನೂರು); ಹೂವಳ್ಳಿ (ಹುಬ್ಬಳ್ಳಿ); ಹೂ (ವಿನ) ಕೆರೆ (ಹುಕ್ಕೇರಿ); ಹೂವಿನಕೆರೆ (ದ.ಕ.); ಮುಗುಳಖೋಡ; ಮುಗಳೂರು; ಇಸಳೂರು; ಅರಳಗುಪ್ಪಿ; ಅರಳಹಟ್ಟಿ; ತಾವರಗೆರೆ; ತಾವರಗಟ್ಟಿ; ಅರಳಗುಂಡಿ (ಕೊಲ್ಲಾಪೂರ); ಪುಷ್ಪಗಿರಿ (ಕೊಡಗು); ತಾವರೆವಾಡಿ (ಕೊಲ್ಲಾಪೂರ); ಕಮಲಶಿಲೆ; ಕಮಲಾಪುರ; ಕಮಲದಿನ್ನಿ; ಕುಮುದ್ವತಿ; ಸೂರೇಬಾನ (ಸೂರೇಪಾನ);

ನಂದನವನ; ವನಳ್ಳಿ ವನಶಿಗ್ಲಿ; ವನಹಟ್ಟಿ;

ಹುಲ್ಲೂರು; ಹುಲಬೆಂಚಿ; ನಾಯನೆಗ್ಲಿ; ಮುಟ್ಟ (ಲ) ಮುರಿ; ತುರಮುರಿ; ನಸುಗುನ್ನಿ; ಮುಳ್ಳೂರು; ಮುಗುಳಿ; ಮದಗುಣಿಕೆ; ಲೋಳಸರ; ನಾವಳ್ಳಿ; ಅಣಜಿ; ಅಣಜಬೈಲು; ಮೊಳೆಹಳ್ಳಿ; ಮುಳಯ (ಪ. ಕ.) ಕರ್ಕಿ; ಹರಳಿ; ಕರಕಿಹಾಳ; ಮೊದೆಹಾಳ; ಮದಿಹಾಳ; ಪಂಜೆ; ಹುಲ್ಲುಂಬಿ; ಅಂತರಗಂಗಿ; ಹಾವಸೆ; ಹಾವಸಭಾವಿ; ಹುಲಸೋಗಿ; ಇಂಗಳಿ, ಇಂಗಳಗಿ; ಇಂಗಳಹಳ್ಳಿ; ಇಂಗಳೇಶ್ವರ;

ಎಲವಿಗಿ; ಎಲಗ; ಎಲಿವಾಳ; ಎಲೆಮುನ್ನವಳ್ಳಿ; ಎಲೆಹಂಕ; ಎಲಗೂರು; ಎಲಬರಗೆ; ಕಣಕಿಕೊಪ್ಪ; ತೊಪ್ಪಲಗುಟ್ಟ; ಸೊಪ್ಪಿನ ಹೊಸಾಳ;

## ೩. ದೇಹದ ಅಂಗಾಂಗಗಳಿಂದ ಬಂದ ಹೆಸರು

ಉಗರೂರು; ಉಗುರುಗೊಳ್ಳ; ಉಗರಖೋಡ; ಬೆಳ್ಳುಬ್ಬಿ;

ಕಣ್ಣೂರು(?); ನೈನಾಪುರ (ನಯನಾಪುರ); ಅಲಕಾಪುರ; ಅಲಕನೂರು; ಕುಂತಲ; ಕುಂಡಲ; ಕುಂತಲಪುರ; ತಲೆಮೊರಬ; ಮಂಡೆಹಾಳ; ಮಂಡೆಕೋಲು; ತಲೆವಾಯಿ (ಧಾ); ಹೆಡತಲೇ (ಮೈ.), ಪೆರುವಾಯಿ, ಬೆಳುವಾಯ್ (ದ. ಕ.), ಮೂಗೂರು, ನಾಸಿಕ, ಹುಲ್ಲೂರು (ವಿ.), ಹಲ್ಯಾಡಿ (ದ. ಕ.) ಕೈಯ್ಯೂರು, ಕೈರಂಗಳ, ಹಾತಕಣಗಲೆ, ಕಂಕಳೆ, ಕಾಲವಾಡ, ಮೊಳಕಾಲ್ಮುರು, ಬೆನ್ನೂರು, ಮೊಟೆಬೆನ್ನೂರು, ಹೊಟ್ಟೆಹೊಳೆ, ಹೊಟ್ಟಲಕೆರೆ; ಸೊಂಟಮುರು, ದಿಂಡವಾಡ, ಧಡೆದಕೊಪ್ಪ, ಮೈರೆ, ಮೈದೂರು.

ಕರುಡಿಕೇರಿ, ಕುಂಟೋಜಿ (?),

## ೪. ಬಳಗದವರಿಂದ ಬಂದ ಹೆಸರುಗಳು

ಅಬ್ಬಲೂರು, ಅಬ್ಬೆಹಾಳ; ಅಬ್ಬಿ(ಬ್ಬೆ)ಗೆರೆ, ಅಬ್ಬೊಳ್ಳಿ, ಅಜ್ಜಬ್ಬಿ, ತಾಯಿಗಡ, ಬಾಪನಪಳ್ಳಿ, ಬಾಪಿನಾಡು, ಬೊಪ್ಪನಹಳ್ಳಿ, ಬಾಪೂರ, ಕಕನೂರು, ತಮ್ಮನಹಟ್ಟಿ; ಅಣ್ಣೂರು, ಅಣ್ಣೀಗೆರೆ, ಅಕ್ಕದೇವನಹಳ್ಳಿ, ಅಕ್ಕೂರು, ಅಕ್ಕಾಜಿಹಳ್ಳಿ, ಅಕ್ಕಲವಾಡಿ, ಅಕ್ಕಲಕೋಟೆ, ಅಕ್ಕೋಳಿ, ಅಕ್ಕತಂಗಿಯರಹಾಳ, ತಂಗೀಹಳ್ಳಿ, (ಚಿಕ್ಕ) ಮಗಳೂರು, ಮಕ್ಕಳಗೇರಿ, ಮಕ್ಕಳ, ಮಗನೂರು, ಮದುಮಕ್ಕನಹಾಳ, ಗಂಡನಹಳ್ಳಿ, ನಲ್ಲೂರು, ಮಾವನೂರು, ಮಲಗಂಡನಕೊಪ್ಪ, ಕಾಂತಾವರ (ದ. ಕ.), ಭಾಮಾಪುರ, ಸತೀಗ್ರಾಮ, ಮಾಸತಿ, ಕೆಳದಿ, ನೀರೆ (ದ. ಕ.);

ಮಾವನಕೊಪ್ಪ, ಅತ್ತಿಬೈಲು, ಕೂಸುಗಲ್ಲು, ಕೂಸನೂರು, ಬಾಲನಹಳ್ಳಿ, ಶಿಶಿವಿನಹಾಳ, ಕಂದಕೂರು, ಮಗನೂರು, ಅಜ್ಜಂಪುರ, ಅಜ್ಜಾವರ,

## ೫. ಮನೆಗಳಿಂದ:

—ಇಲ್, —ಮನೆ, —ಕೋಣೆ, —ಗುಡಿ; ಕಂಬದೂರು, ಕಲಖಂಬ, ಜಂತ್ಲಿ (?), ಅಗಳಿ (ಮಡಗಶಿರಾ), ಚಿಲಕವಾಡ, ಕೊಂಡಿಕೊಪ್ಪ, ಬಾಗಲ, ಬಾಗಲವಾಡ, ಬಾಗಲಿ, ಬಾಗಲಕೋಟೆ, ಮಾಳೆಕೊಪ್ಪ,

ಮಳಗಿ (ನಿಜಾಂ), ಹಂಚಿನಾಳ, ಗುಡಿಸಲಕೊಪ್ಪ, ಹಂದ್ರಾಳ (ಬ.), ಭಾವಣಿ, ಬೀಡು, ಪಾಳ್ಯ, ವಾಡೆ, ಹುಡೆ, ಕೊತ್ತಳ, ಕೋಟೆ, ದುರ್ಗ,

## ೬. ದಿನಸುಗಳ ಹೆಸರುಗಳಿಂದ:

ಅಂಬಲಿಕೊಪ್ಪ, ಗಂಜಿ, ಗಂಜೀಗಟ್ಟಿ, ಉಪ್ಪಿನಬೆಟಗೇರಿ, ಚಟ್ನಿಹಾಳ, ಸಕ್ಕರೆಪಟ್ಟಣ (ಮೈ), ಗುಳವಾಡಿ, ಬೆಲ್ಲಾಳ (ದ. ಕ.), ಬೆಲ್ಲಾ-ಹುಣಸಿ (ಬ.), ರೇವಡಿಹಾಳ, ತಿಳಗೂಳ ( ವಿ. ), ಕಡಬಿನಕಟ್ಟಿ, ಮಂಡಗಿಹಳ್ಳಿ, ಹಿಟ್ಟಿನಹಳ್ಳಿ, ಹಾಲಾಡಿ, ಹಾಲಕೆರೆ, ಹಾಲಬಾವಿ, ಹಾಲೇರಿ (ಕೊಡಗು), ಪಾಲಾರ (ನದಿ), ಹಾಲಳ್ಳಿ, ಹಾಲಭಾವಿ, ದೂದೀಹಳ್ಳಿ, ದೂದಿಹಾಳ, ದೂಧಸಾಗರ, ಧೂಧನಿ, ಹಾಲವರ್ತಿ(ಮೈ), ಮೊಸರುಗುಪ್ಪಿ, ಮಜ್ಜಿಗೆಪುರ, ಬೆಣ್ಣೀಹಳ್ಳ, ಬೆಣ್ಣಿಹಾಳ, ಬೆಣ್ಣೂರು, ತುಪ್ಪಲಕಟ್ಟಿ, ತೆಲಗಿ, ತೈಲಗೆರೆ, ತೇಲಗಾವ, ಕಲ್ಯ, ಮದ್ಯ, ಇಡ್ಯ, ಶರೇವಾಡ (ಧಾ), ಇಸ್ನ, ಈರ, ನಂಜಿನಗೂಡು (ಮೈ ), ಅಮೃತಪುರ (ಮೈ.),

## ೭. ಬಣ್ಣಗಳಿಂದ:

ಕೆಂಪವಾಡ, ಕೆಂದೂರು (ಪುಣೆ ಜಿಲ್ಲಾ). ಕೆಮ್ಮನಗುಂಡಿ, ಕಿಸುಕಾಡು, ಕಿಸುಪೊಳಲು, ಕಿಸುವಾಡ, ಕಿಸುಗುಂಡಿ (ಈಗ ತಾಂವ್ರಗುಂಡಿ), ಚೆಂದೂರ, ಶೇಂದೂರ, ಶಿನ್‌ಧೂ, ಕಾವೇರಿ, ಚಂದ್ರಭಾಗಾ, ನೀಲವಾಡ, ನೀಲಗುಂದ, ನೀಲಾವರ, ನೀಲೇಶ್ವರ, ಹಳದೀಪುರ, ಹಳದಪೂರ, ಅರಸಿನಗೇರಿ ( ? ), ಬೆಳ್ಳೂರು, ಬೆಳ್ಳಂಪಳ್ಳಿ, ಬೆಳ್ಳಟ್ಟಿ, ಬೆಳ್ಳಿ, ಕರಿಯೂರು, ಕರಿಕಟ್ಟಿ, ರಬ್ಬುಕವಿ,

## ೮. ಹರಳುಗಳಿಂದ:

ಮಾಣಿಕನಗರ, ರತ್ನಪುರ, ವಜ್ರಳ್ಳಿ, ಹವಳಗೋಡು, ಹರಳೂರು, ಹವಳಖೋಡ (ವಿ.),

## ೯. ಬಂಗಾರದಿಂದ:

ಚಿನ್ನಮುಳಗುಂದ, ಸೊನ್ನ, ಸೊನ್ನಲಿಗೆ, ಹೊನವಾಡ, ಹೊನ್ನಾಳಿ,

ಹೊನ್ನಹೊಳೆ (ಸುವರ್ಣಾವತಿ), ಕನಕಾಪುರ, ಹೇಮರಗಿ, ಹೇಮವಾಡಿಗಿ, ಬಂಗಾರಗುಂಡ, ಹಾಟಕ (ಹಟ್ಟಿಯಲ್ಲಿ ಹುಟ್ಟಿದ್ದು).

## ೧೦. ಅಂಕೆಗಳಿಂದ:

ಪುಂಜ, ಸೊನ್ನೆಹಳ್ಳಿ, ಒಂದೂರು (ಕೊಲ್ಹಾಪುರ), ಓರಳ್ಳಿ, ಒರಕಲ್‌ಗುಡ್ಡ, ಒರೂರು, ಒರ್ಕಾಡಿ, ಒಕ್ಕುಂದ, ಎಕ್ಕುಂಡಿ, ಏಕಲಾಸಪುರ, ಏಕಲೂರು, ಏಕಸಂಬೆ, ಇಪ್ಪಡಿ, ಇಕ್ಕೇರಿ, ಎರಡ್ಹಳ್ಳಿ, ಜೋಡುಹಟ್ಟಿ, ಮುಕ್ಕಲ್ಲು, ಮೂರುಗದ್ದೆ, ಮೂರುನಾಡು, ನಾಲ್ಕೂರು, ಪಾಡಿನಾಲ್ಕುನಾಡು, ಚಾರವಾಡಿ, ಐತೂರು, ಐದಬಾವಿ, ಆರೂರು, ಏಳೂರು, ಸಾತಗಾವ, ಸಾತಮನೆ, ಸಪ್ತಸಾಗರ, ಸಪ್ತಾಪುರ, ಸತ್ತೂರ (ಸಪ್ತಊರು?), ಅಷ್ಟಾ (ಅಷ್ಟೆ), ಅಷ್ಟಗಿ, ಅಷ್ಟಗ್ರಾಮ, ಎಣ್ಮೂರು, ಎಣ್ಮಕಜ, ಹತ್ತರವಾಟ, ಹತ್ತಳ್ಳಿ, ಹತ್ತಸೂರು, ದಶಪುರ, ಹನ್ನೊಂದುಗದ್ದೆ, ಇರವತ್ತೂರು, ಚಾಳಿಸಗಾಂವ, ನಾಲವತ್ವಾಡ, ಐವತ್ತೊಕ್ಕಲು (ಕೊಡಗು), ಅರುವತ್ತೊಕ್ಕಲು, ಎಂಬತ್ತನಾಳ (ವಿ.), ಮುನ್ನೂರು (ದ. ಕ.), ಸಹಸ್ರಹಳ್ಳಿ, ಏಳುಸಾವಿರಸೀಮೆ, ಲಕೊಳ್ಳಿ, ಲಕ್ಕುಂಡಿ, ಕೋಟೂರು,

## ೧೧. ಗ್ರಹಾದಿಗಳಿಂದ:

ನೇಸರಿಗೆ, ಭಾನಾಪುರ, ಹಿರೇಭಾಸ್ಕರ, ಭಾಸ್ಕರಪುರ, ಇಂದೂರು, ಚಂದ್ರವಳ್ಳಿ, ಸೋಮಾಪುರ, ಸೋಮನಕೊಪ್ಪ, ಮಂಗಳೂರು, ಮಂಗಳವಾಡ, ಮಂಗಳಗಟ್ಟಿ, ಬುಧಗಾಂವ, ಬುದನೂರು, ಗುರುಪುರ, ಶನಿವಾರಸಂತೆ, ಉಡುಪಿ, ತಾರಾಪುರ (ವಿಜಾ.), ಗಗನಚುಕ್ಕಿ, ಬಾರಚುಕ್ಕಿ, (ಜೋಗು, ಮೈ.),

(ಶುಕ್ರವಾರದ ಸ್ವತಂತ್ರ ಊರು ದೊರೆತಿಲ್ಲ. ಊರ ಓಣಿಗಳಲ್ಲಿ ಈ ಹೆಸರು ದೊರೆಯುತ್ತಿದ್ದು ಅದೂ ಅರ್ವಾಚೀನವೆಂದು ನನ್ನ ಮತ.)

## ೧೨. ಮಳೆ ಮಿಂಚು ಮುಂತಾದುವುಗಳಿಂದ:

ಮುಗಿಲಕೊಪ್ಪ, ಕಾರಡಕ, ಕಾರಕಳ, ಕಾರ್‌ನಾಡ, ಆಣೆಕಲ್ (ಮೈ.), ಮಂಜುಗುಣಿ (ಕಾ), ಮಂಜಿರಾಬಾದ (ಮೈ.), ಬಿಸಿಲುಕೊಪ್ಪ,

ಬೇಗೂರು, ಬೇಸಗೆಗುಡ್ಡ, ಬೆಂಕಿಕೊಡ್ಲು, ಬೆಂಕಿಪುರ, ಬೆಂಕಿಕೊಪ್ಪ, ಉರವ ಕೊಂಡ, ಅನಲಗಾಲ, ಅನಲಗೋಡು, ಅಗ್ನಿಕುಂಡಲು, ದೀಪದಹಳ್ಳಿ, ಮಿಂಚಿನಾಳ (ವಿ.), ಮಿಂಚೇರಿ (ಬ.), ಸಿಡ್ಲಫುಟ್ಟ, ಬೂದಿಹಾಳ, ಬೂದೀ ಕೋಟೆ,

ಸಂಜೆಗೋಡು, ಕಾವಳ (ದ, ಕ.), ಅಮಾಶೆಬೈಲು, ತಿಮಿರಿ (ದ.ಕ.), ವಸಂತಪುರ, ಶ್ರಾವಣಹಳ್ಳಿ,

## ೧೩. ದಿಕ್ಕುಗಳಿಂದ:

ಮೂಡುಬಿದಿರೆ, ಮೂಡಲಗಿ, ಉದಯಾವರ, ಉದಯಗಿರಿ, ಪಡುಬಿದಿರೆ, ಪಡುವಲಪಟ್ಟಣ, ಬಡಗಮಿಜಾರ, ತೆಂಕ-ಕಾರಂದೂರು (ದ. ಕ.),

ಮೇಗೂರು, ಮ್ಯಾಕಲಮರಡಿ, ಮ್ಯಾಗೇರಿ, ಮೇಲೂರು, ಕೆಳಗಲ್ಲು, ಕೆಳಗಿನಮನೆ, ಕೆಳಗಿನ ಇಡುಗಂಜಿ, ನಿಟ್ಟೂರು,....ಬಂಕಿಹಾಳ, (?) ಬಂಕಾಪುರ,

ಕಡೆಹಳ್ಳಿ, ಕಡಪಟ್ಟಿ, ಕಡಕೊಳ್ಳ, ಕಡೆಗಾವ (ಸಾತಾರಾ), ನಡುವಿನ ಹಳ್ಳಿ, ಅಂತರವಳ್ಳಿ, ಅಂತರಗಾವ, (ನಿ), ಕೆಲಗೆರೆ, ಎಡೂರು, ಎಡೆಹಳ್ಳಿ, ಬಲಗೋಡು, ಬಲಕುಂದಿ, ತಳಕಲ್ಲು, ತಳಕಾಡು, ತಲ್ಲೂರು,

## ೧೪. ನೆಲದಿಂದ:

ಬೈಲಕೆರೆ, ಬೈಲೂರು, ಬೆಟ್ಟದಹಾಳ, ಬೆಟಸೂರು, ಬೆಟಡೂರು, ಬೆಟ್ಟಗೆರೆ, ಕುಮುಶಿ, ಕುಂಬೆ, ಚಿಕ್ಕುಂಬೆ, ಹಿರೆಕುಂಬೆ, ಆಗುಂಬೆ, ಕುಂದರಗಿ, ಕುಂದರನಾಡು, ಬೆಳುವೊಲ, ಮಲೆನಾಡು, ಕರ್ಲಕೊಪ್ಪ, ಎರೆಗಟ್ಟಿ, ಕಲ್ಲಹಳ್ಳಿ, ಗುಡದೂರು, ಮಣ್ಣೂರು, ಮಳಲವಾಡಿ, ಮರಳ ದಿನ್ನಿ (ನಿ.), ಮಳವಲಿ (ಮಹಾರಾಷ್ಟ್ರ), ಧೂಳಖೇಡ (ವಿ.), ಧೂಳಿ ಕೊಪ್ಪ, (ಧಾ.), ಕೆಸರಕೋಡಿ, ಕೆಸರಕೊಪ್ಪ (ವಿ.), ಹುದಲಿ (ಬೆ.), ಕೊಳಚಿ (ರಾಮದುರ್ಗ), ಗೊಬ್ಬರಗುಂಪಿ, ಜಲದುರ್ಗ (ನಿ.), ಜಲಗಡ್ಡೆ (ವಿ.), ಸವುಳಹಳ್ಳಿ (ನಿ.),

## ೧೫. ಬೇಸಾಯದಿಂದ:

ನೇಗಿಸಹಾಳ, (ಬೆ, ವಿ.), ಉತ್ತನಾಳ (ವಿ.), ಭಂಡಿವಾಡ (ಧಾ.), ಕೂಂಟೆ, ಕೂಂಟಗೆ, ಕೂಂಟೋಜಿ (? ಧಾ. ವಿ ),

## ೧೬. ಕಾಲದಿಂದ:

ಹಳನಾಡ(ದ. ಕ.), ಹಳೆಬೀಡು, ಮುದೇನೂರು (ರಾ.), ಮುತ್ತಗಿ, ಮುದುವೊಳಲು (ಮುಧೋಳ), ಮುದುಗಲ್ಲು (ನಿ.), ಮುತ್ತೂರು (ದ. ಕ.), ಮುಸವಳ್ಳಿ, ಪುತ್ತೂರು, ಹೊಸಹಟ್ಟಿ, ಹೊಸೂರು, ಹೊಸವಾಡ, ಹೊಸದುರ್ಗ, ಹೊಸಕೋಟೆ, ಹೊಸಾಳ (ದ. ಕ.),

## ೧೭. ಚಿಕ್ಕ, ಹಿರೆ, ಸಣ್ಣ, ದೊಡ್ಡ:

ಚಿಕ್ಕಪಡಸಲಗಿ, ಹಿರೇಪಡಸಲಗಿ, ಚಿಕ್ಕೊಪ್ಪ, ಹಿರೇಕೊಪ್ಪ, ಚಿಕ್ಕ ಕೆರೆಯೂರು, ಹಿರೆಕೆರೆಯೂರು, ಪೆರೂರು, ಪೆರಿಯಾ (ದ ಕ.), ಪೆರಿಯಾ ಪಟ್ಟಣ, ಹೇರೆ, ಹೇರವಾಡ,

ದೊಡ್ಡಬಳ್ಳಾಪುರ, ದೊಡ್ಡಬಿದಿರೆ, ದೊಡ್ಡೇರಿ, ದೊಡ್ಡಘಟ್ಟ, ದೊಡ್ಡಬೆಟ್ಟ (ನೀಲಗಿರಿ), ಬಂಬಲಗಿ, ಬಂಬಲವಾಡ (ಬೆ.),

## ೧೮. ಕೂಡಿಕೆಯಿಂದ:

ಕೂಡಲ, ಕೂಡ್ಲ, ಕೂಡಲಿಗೆ, ಸಂಗಮ, ಸಂಗಮೇಶ್ವರ, ಸಂಗವಳ್ಳಿ, ಸಂಗಾಪೂರ, ತಿಸಂಗಿ (ಸಾಂ), ಶ್ರೀಸಂಗಿ (ಶಿರಸಂಗಿ), ಗೊಳಸಂಗಿ, ಅಸಂಗಿ (ಜಂ.), ತಳಸಂಗಿ ( ಸಾಂ ), ಅಹಿರಸಂಗ, ಸಂಗಳ, ಸಂಗಳ (ಸಾಂಗಳ=ಸಾಂಗಲಿ),

## ೧೯. ದೇವತಾದಿಗಳಿಂದ ಬಂದುವು:

**ರಾಮಾಯಣದಿಂದ**

ರಾಮದುರ್ಗ, ರಾಮತೀರ್ಥ, ರಾಮನಾಳ, ರಾಮನಕೊಪ್ಪ, ರಾಮಗಿರಿ, ರಾಮಾಪುರ, ಮುಂ.

ಲಕ್ಮಾಪುರ, ಲಕಮಾಪುರ, ಲಕಮನಹಳ್ಳಿ, ಲಕ್ಷ್ಮಣತೀರ್ಥ ಮುಂ.

ಭರತನಳ್ಳಿ, ಭರತೂರು, ಭರತನೂರ (ನಿಜಾಂ), ಜನಕನಭಾವಿ (ವಿ), ಸೀತಿಮನೆ, ಸೀತಿಭಾವಿ, ಸೀತಿಬೆಟ್ಟ,

ಹನುಮಾಪುರ, ಹನುಮಸಾಗರ, ಹನುಮಂತಗಡ, ಹನುಮನಹಾಳ, ಅಂಜನೇರಿ, ಅಂಜನಿ (ಸಾಂ.)

ಪಂಪಾ (ಹಂಪೆ), ಅವನಿ (ಹಂಪೆಯಂತೆ ಇಲ್ಲಿ ರಾಮಾಯಣದ ಹಲವು ಕುರುಹುಗಳುಂಟು),

**ಮಹಾಭಾರತದಿಂದ**

ಕೃಷ್ಣಾಪುರ, ಯದುಗಿರಿ, ಕಂಸನಪಳ್ಳಿ, ರುಕ್ಮಾಪೂರ (ನಿಜಾಂ), ಕೊಂತಿಹಳ್ಳಿ, ಕುಂತಿದಿಬ್ಬ, ಪಾಂಡವಗಡ,

ಧರ್ಮಾನದಿ, ಧರ್ಮಾವರಂ, ಧರ್ಮಾಪುರ, ಭೀಮನಹಳ್ಳಿ, ಭೀಮಗಡ; ಅರ್ಜುನಗಿ, ಅರ್ಜುನವಾಡ, ಅರ್ಜುನಬೆಟ್ಟಹಳ್ಳಿ, ಪಾರ್ಥನಹಳ್ಳಿ ಸಹದೇವಪುರ (ಸಾದಳಿ, ಮೈ.), ಕರ್ಣಕುಪ್ಪೆ (ನಿಜಾಂ), ಬಭ್ರುವಾಡೆ (ಉ. ಕ.), ವಿದುರೂರು (ಗೋರಿಬಿದನೂರು), ವಿದುರಾಶ್ವತ್ಥ,

ಏಕಛತ್ರ (ಬೋಧನ, ನಿ.), ವಿರಾಟನಗರ (ಹಾನಗಲ್ಲು),

**ಪುರಾಣದಿಂದ**

ಹರೀಂದ್ರಾಳ (ವಿಜಾಪುರ); ವರುಣ (ಮೈ); ಅಮರಗೊಳ, ಅಮರಾಪುರ; ಅಮರಾವತಿ; ಅಲಕಾಪುರ; ದೇವನದೊಡ್ಡಿ, ದೇವಲಾಪುರ, ದೇವರಗುಡ್ಡ; ದೇವಗಿರಿ; ದೇವನೂರು; ದೇವಸ್ಯಮೂಡೂರು; ದೇವಸ್ಯಪಡೂರು (ದ. ಕ.),

ಸುರಪುರ; ಸುರಗಿರಿ (ನಿಜಗಲ್ಲಬೆಟ್ಟ); ಬಜ್ರೆ (ವಜ್ರ, ದ. ಕ.) ವಜ್ರೇಶ್ವರಿ, ವಜ್ರಚೌಂಡೆ (ಸಾಂ.):

ಬೊಮ್ಮ ಅಥವಾ ಬಮ್ಮ—ಹಳ್ಳಿ; ಪುರ; ಕಟ್ಟೆ; ಗಿರಿ ಮುಂ.

ಶಿವಾಪುರ, ಶಿವನೇರಿ (ಮಹಾರಾಷ್ಟ್ರ), ಶಿವಳ್ಳಿ; ಮಹಾದೇವನಕಟ್ಟೆ; ಮಹಾಬಲೇಶ್ವರ; ಮಂಜೇಶ್ವರ; ಮಂಜುನಾಥ; ಧವಳಗಿ (ವಿ.); ಧವಳೇಶ್ವರ (ಧವಲ); ಡೋಳೇಶ್ವರ (ಧಾ.); ಗಿರಿಶನಕೊಪ್ಪ (ಧಾ.);

ರುದ್ರಾಪುರ, ರುದ್ರಪಟ್ಟಣ, ಪಶುಪತಿಹಾಳ, ಶಂಭುನಾಥಪುರ (ಮೈ.),

ಆರೆಶಂಕರ (ವಿ.), ಮುರುಗನಹಳ್ಳಿ, (ನಿಜಾಂ), ಸೋಮನಾಥಪುರ, ತ್ರಿಯಂಬಕಪುರ, (ಮೈ.), ವಿರೂಪಾಕ್ಷಪುರ,(ಸಾಲೆಂ), ಬೈರನಹಟ್ಟಿ, ಬೈರಿಕೊಪ್ಪ, ಬೈರದೇವರಕೊಪ್ಪ, ಲಿಂಗದ್ಹಳ್ಳಿ, ಲಿಂಗಾಪುರ, ಲಿಂಗನಾಳ, ಲಿಂಗಸೂಗೂರು, ಹರಲಾಪುರ;

ಮೈಲಾರ, ಮೂಲಸ್ಥಾನದೇವರು, ಮೂಲಸ್ಥಾನಕಲ್ಲೇಶ್ವರ, ಕಲ್ಲಿನಾಥ, ಕಲ್ಮೇಶ್ವರ, ಕಲಿದೇವ ಎಂದು ಮುಂತಾದ ಹೆಸರಿನ ದೇವಸ್ಥಾನಗಳು ನಮ್ಮ ನಾಡಿನಲ್ಲಿ ಎಲ್ಲೆಲ್ಲೂ ಇವೆ. ಒಂದಿಲ್ಲ ಒಂದು ಹೆಸರಿನಲ್ಲಿ ಶಿವನಿಲ್ಲದ ಊರು ಸಿಕ್ಕುವುದೆ ದುರ್ಲಭ.

ನಂದೇಶ್ವರ, ನಂದಿದುರ್ಗ, ಬಸಾಪೂರ....,

ಕೇಶವಾಪುರ, ನಾರಾಯಣಪೇಟೆ, ನಾರಾಯಣದೇವರ ಕೆರೆ, ಮಾಧವಪುರ, ಗೋವಿಂದಪುರ, ಹೊಳೆನರಸೀಪುರ, ವಾಸುದೇವಪಳ್ಳಿ, (ಮೈ.) ವಾಮನಪಳ್ಳಿ, (ನಿಜಾಂ), ಅಚ್ಯುತಪುರ, ಹರಿಪುರ, ಕೃಷ್ಣಾಪುರ, ಕೃಷ್ಣಗಿರಿ, ಜಗನ್ನಾಥಪುರ, (ನಿಜಾಂ), ದಾಮೋದರಹಳ್ಳಿ, (ಸಾಲೆಂ), ರಂಗಾಪುರ, ಶ್ರೀರಂಗಪಟ್ಟಣ, ತಿಮ್ಮಾಪುರ, ವೆಂಕಟಾಪುರ, ತಿರುಪತಿ, ಅನಂತಪುರ, ಹರಿಹರ, ಹರಹರಪಳ್ಳಿ, (ನಿಜಾಂ), ಶಂಕರನಾರಾಯಣ,

ಗರುಡಾಚಲ, ಗರುಡಗಿರಿ, ಗರುಡನಪಾಳ್ಯ,

ದೇವಿಗಾಂವ (ನಿಜಾಂ), ದೇವಿಹೊಸೂರು, ದೇವೀಪುರ, ಗೌರೀಪುರ, ಭಗವತಿ, ಗಿರಿಜಾಪುರ (ನಿಜಾಂ), ಉಮಾಪುರ, (ನಿಜಾಂ), ಬನಶಂಕರಿ (ವಿ.), ಶಂಕರಿಕೊಪ್ಪ (ಕಾ), ಮಾರಿಹಾಳ, ಮಾರಿಹಳ್ಳಿ, ಮಾರಿಕಣಿವೆ, ಮಸಣಿಹಳ್ಳಿ (ಮೈ.), ಕಳಕಾಪುರ (ಕಾಳಿಕಾಪುರ?); ಕವಠೆಮಹಾಂಕಾಳ (ಸಾಂ), ಶಿರೂರು, ಶಿರಕೊಳ್ಳ, ಶಿರೋಳ, ಶಿರಹಟ್ಟಿ, ಶಿರಟೆ (ಕೊ.), ಶಿರಗುಪ್ಪಿ, ಶಿರಪೂರ, ಶಿರಾಳೆ, ಶಿರೋಳಿ, ಶಿರಾಳಕೊಪ್ಪ, ಸಿರಿಯೂರು, ಶಿರಿವಾಗಿಲು (ದ ಕ.), ಶಿರಿಯಾರ (ದ. ಕ.) ಶಿರಿಯ, ಶಿರ್ವ (ದ. ಕ.), ತಿರುಮಲೆ, ತಿಲ್ಗಾಪುರ (ತಿರುಲಾಪುರ, ಧಾ.), ಲಕ್ಷ್ಮೀಕೊಪ್ಪ, ಲಕ್ಷ್ಮೀಸಾಗರ, ಬೊಮ್ಮರಸೀಕೊಪ್ಪ, ಬೊಮ್ಮರಸಿಪುರ, ಸರಸ್ವತಿಪುರ (ಕಾ.),

ಎಲ್ಲಮ್ಮನಗುಡ್ಡ (ಬೆ.), ಎಲ್ಲಾದೇವಿ (ನಿಜಾಂ), ಎಲ್ಲೂರ (ಎಲೊರಾ), ಯಲ್ಲಾಪುರ, ಗ್ರಾಮದೇವತಿಪುರ(ಮೈ.), ದೇವಿನಕೊಪ್ಪ

(ಬೆ.), ದ್ಯಾಮವ್ವನಹಳ್ಳಿ (ಮೈ.), ಚೌಂಡೇಶ್ವರ, ಚಾಮುಂಡಿಬೆಟ್ಟ, ಲಲಿತಾದ್ರಿಪುರ, ಚೌಡದಾನಪುರ, ಚೌಂಡಾಳ (ಕೊ.), ಅಮ್ಮಣಗಿ (ಬೆ.),

ಗಣೇಶವಾಡಿ, ಗಣಪತಿಹಳ್ಳಿ, ಬೆನಕನಕೊಂಡ, ಬೆನಕನಕಟ್ಟೆ, ಬೆನಕನಹಳ್ಳಿ, ಸ್ಕಂಧಗಿರಿ, ಸೋಂದ, ಸೊಂಡೂರು (?), ಸುಬ್ರಹ್ಮಣ್ಯ,

ಪರಶುಗಡ; ಪರಶುರಾಮತೀರ್ಥ; ಪರಸಾಪುರ;

ಜಕ್ಕಲಿ; ಜಕ್ಕಸಂದ್ರ; ಜಖಣಾಪೂರ; ಜಖಣಿಬಾವಿ; ಜಖಿವಾಡಿ; ಜಕಳಿ: ಜಖಬಾಳ (ಕೊಲ್ಲಾ); ಜಕನಾಳ: ಜಕನಹಳ್ಳಿ (ನಿಜಾಂ); ಜಕ್ಕೇರಾಳ (ವಿ);

ಬೆಂತರ; ಬ್ಯಾತನಾಳ (ಬೇತನಾಳ) ಬ್ಯಾತಹಳ್ಳಿ (ಮೈ.), ಭೂತಪೂರ (ನಿಜಾಂ), ಭೂತನಾಳ (ವಿ.), ರಕ್ಕಸಗಿ, ರಾಕ್ಷಸಕೊಪ್ಪ, ರಾಕ್ಷಸಬಾದಹಳ್ಳಿ (ನಿಜಾಂ),

ಮುಯುಸಮುದ್ರ; ಮುಯುಸಾಂದ್ರ, ಬಳ್ಳಾರಿ, ಬಳಾರಿಹಳ್ಳ (ಬೆ.), ಗುಮ್ಮಗೋಳ, ಗುಮ್ಮನಹಳ್ಳಿ, ಗುಮ್ಮಾಪುರ, ಗುಮ್ಮಗಟ್ಟೆ, ಗುಮ್ಮನಹಾಳು (ಮೈ), ಯಮನೂರು (ಧಾ.), ಯಮುಕ್ಕನಮರಡಿ (ಬೆ.), ಜವನಹಳ್ಳಿ, ಯಮಗೆ, ಯಮಗರ್ಣಿ (ಕೊ.), ಯಮಕೂರ (ನಿಜಾಂ), ಯಮುನಾಪುರ (ಸಾಂ.), ಜಮುನಾಳ (ಬೆ.),

ಸಾವೂರು, ಸಾವೆನಕೊಪ್ಪ, ಸಾವನದುರ್ಗ (ಮೈ), ಕೊಲ್ಲಹಳ್ಳಿ (?), ನಿಧನವಾಡ (ಅನಂತಪೂರ),

ಕಾಮನಕೆರೆ, ಗಾಮನಗಟ್ಟೆ (ಕಾಮ?) ಕಾಮನಹಳ್ಳಿ (ನಿಜಾಂ), ಮಾರನಬಸದಿ, ಮಾರಡಿಗಿ, ಮದನಮಟ್ಟಿ (ಸಾಂ.), ಮದನಪಳ್ಳಿ (ನಿಜಾಂ), ಮದನಭಾವಿ (ಮಾದನ?),........ ಸುರತಕಲ್ಲ (ದ. ಕ.), ಭೋಗನಗರ (ವಿ.), ಭೋಗಾನೂರು (ಧಾ.),

ಜೀವಾಪುರ, ಬಾಳಂಬೀಡು,........... ಜನವಾಡ, ಲೋಕಾಪುರ, ಲೋಕೂರು, ಜಗಾಪುರ, ದೇಶನೂರು, ನಾಡಹಳ್ಳಿ, ನಾಡಸೂರು (ಕೊಂ.), ನಾಡಗಾವ,

## ೨೦. ಜನಗಳಿಂದ ಬಂದ ಹೆಸರುಗಳು:

**ಪುರಾತನ**

ಕೋಲಾರ; ಕೊಲ್ಹಾರ; ಕೊಲ್ಲಾಪುರ; ಕೊಲ್ಲೂರು; ಕೋಳಟ್ಟಿ; (ಸಾಲೆಂ); ಮುಂತಾದುವು ಕೋಲೇರಿಯನ್ ಜನರ ಕುರುಹುಗಳು.

ಬಿಲ್ಲವಾಡಿ(ಭಿಲವಡಿ); ಬಿಲ್ಲಾಡಿ(ದ. ಕ.); ಇವು ಬಿಲ್ಲವರ (ಭಿಲ್ಲರ) ನೆಲೆ ಹೇಳುವುವು;

ಮುಂಡರಗಿ; ಮುಂಡೇವಾಡಿ; ಮುಂಡಕೂರು; ಮುಂಡಗನೂರು ಮುಂತಾದುವು ಮುಂಡ ಜನರವು.

ಕಾತರಾಳ; ಕ್ಯಾತನಳ್ಳಿ; ಕ್ಯಾತಸಾಂದ್ರ; ಕಾತನಡೋಣಿ (ವಿ.); ಮುಂತಾದುವು (ಕಿಳ್ಳಿ) ಕೇತರ ನೆನಹನ್ನು ಕೊಡುವುವು.

ನಾಗರಗಾಳಿ; ನಾಗನೂರು; ನಾಗಪುರ; ನಾಗಲಾವಿ; ನಾಗರಾಳ; ನಾಗರಹಾಳ; ನಾಗರಖಂಡ; ಮುಂತಾದುವು ನಾಗರ ನೆಲೆಯನ್ನು ಹೇಳುವುವು.

ಟಕ್ಕಳಕಿ; ಟಾಕಳಿ; ( ಟಕ್ಕರು ? ); ಬೇಡರಹಟ್ಟಿ; ........ ಪಣಿಯಾಡಿ (ದ. ಕ ); ಹಣಬರಹಟ್ಟಿ(ಬೆ.); ಹಣಬನೂರು(ಬೆ ); ಪಣಿಯಾಲ (ದ.ಕ.); ಪಟ್ಟಿಗಳು=ಪಟ್ಟಿಲರು=ಹಟ್ಟಿಕಾರರು:

ಯಾದವಾಡ; ಯಾದಗಿರಿ; ಯಾದಗಿ; ಯಾಪಗೊಪ್ಪ; ದನಗಾರಹಟ್ಟಿ; ತುರುಕೇವಾಡಿ; ತುರ್ವಿಗಲ್ಲು; (ಇದರೊಡನೆ ಗೊಲ್ಲ; ಗೌಳ; ಕುರುಬರ ಊರುಗಳನ್ನು ನೆನೆದುಕೊಳ್ಳಬೇಕು.)

ಅಲ್ಲದೆ ಕನ್ನ; ಕಣ್ಣರ ಊರು; ಏರಿ; ವಾಡಿ; ಪುರ; ಸಾಂದ್ರ; ವಾಡ; ಪೇಟೆ; ನಾಡು; ದೇಶ ಮುಂತಾದುವುಗಳು ಕಂನಾಡ ಮೊದಲಿಗರ ಎಡೆಗಳು.

ಮಲ್ಲಾಳ; ಮಲ್ಲೂರು; ಮಲ್ಲಾಪುರ; ಮಲಿಕಾಪೂರ; ಮೈಲಾರ; ಮಲ್ಹಾರ; ಮಲ್ಲಾಳ ಮುಂತಾದ ಮಲ್ಲಜನರ ಊರುಗಳು.

ಕಮ್ಮರಪಳ್ಳಿ; ಕಮ್ಮಗಾವ (ಖಾಮಗಾವ); ಕಮ್ಮನಾಡುಗಳು ಕಮ್ಮರವು.

ಅಹಿರಸಂಗ; ಅಹಿರವಾಡ; (ಆಭೀರಪಲ್ಲಿ); ಆಭೀರರ ಸುಳುವು ದೊರೆಯುವುವು.

**ಐತಿಹಾಸಿಕ**

ಸಾತವಾಹನಿಹರ; ಸಾತವಾಹನಿರಥ (ಬಳ್ಳಾರಿ ಜಿಲ್ಹೆ); ಸಾತನೂರು (ಬಳ್ಳಾರಿ ಜಿ.); ಗಂಗವಾಡಿ; ನೊಳಂಬವಾಡಿ; ನೊಣಬೂರು (ಮೈ.); ಬಾಣಾವರ (?); ರಟ್ಟಪಾಡಿ; ರಟ್ಟಾಡಿ (ದ. ಕ.); ರಟ್ಟೆಹಳ್ಳಿ; ರಾಠೋಡಾ (ರಟ್ಟವಾಡಾ? ನಿಜಾಂ); ಲಾಟವಾಡಿ, ಲಾಟವಡೆ, ಲಾಟಗಾವ (ಕೊಲ್ಲಾ.); ಲಾತೂರು (ಲಟ್ಟಲೂರು, ನಿಜಾಂ); ಲಾಟ; ಸೌರಾಷ್ಟ್ರ (ಗುಜರಾತ); ರಾಢ (ಬಂಗಾಳ); ಲಟ್ಟೇರಿ; ಲಾಡವಾಡಿ; ಲಾಡವರಂ (ತಮಿಳನಾಡು); ರಡ್ಡಿಹಳ್ಳಿ (ಶೇಲಂ);

ಚುಳುಕಿ (ಚಲುಕ್ಯ? ಬೆಳಗಾಂವ ಜಿ); ಸಿಂದಗಿ; ಸಿಂದೋಗಿ; ಸಿಂದೆಮುನ್ನವಳ್ಳಿ; ಸಿಂದಿಕುರುಬೆಟ್ಟ; ಸಿಂಧನೂರು; ಸಿಂದಘಟ್ಟ (ಮೈ.); ಸಿಂದವಾಡಿ; ಸಿಂದಯನಹಳ್ಳಿ; (ಸಾಲೆಂ); ಹೊಯಸಳಕಟ್ಟೆ (ಮೈ.); ಚೋಳಪುರ (ಮೈ.);

**ಅರ್ವಾಚೀನ**

ಮೊಗಲಾಯಿ (ನಿಜಾಂ); ಮರಾಠಿವಾಡಿ (ಬೆ.); ಮರ್ಹಾಟವಾಡಾ (ನಿಜಾಂ); ಅರೆಕುರಟ್ಟಿ; ಅರೆಮುಲ್ಲಾಪುರ (ಧಾ.); ಅರೆಹಳ್ಳಿ (ಮೈ.); ಅರೆಶಂಕರ (ವಿ.); ಅರೆಕೊಪ್ಪ (ಕಾ; ಮೈ.);

ತೆಲುಗಬಾಳು; ಆಂಧ್ರಪಳ್ಳಿ (ಬ); ತಿಗಳೂರು; ಕೊಂಗನೂರು (ಬೆ.); ಒಡ್ಡರಹಟ್ಟಿ;

ಇಸ್ಲಾಂಪೂರ; ಫ್ರೆಂಚರಾಕ್; ಫಿರಂಗಿಪೇಟೆ;

### ೨೧. ವ್ಯವಸಾಯ, ಉದ್ಯೋಗ, ಅಧಿಕಾರಗಳಿಂದ:

ಅರಸನಹಾಳು (ಬ); ರಾಜನಾಳ (ವಿ.); ರಾಜೂರ; ರಾಜಮನೆ; ರಾಯಾಪೂರ; ರಾಯರಹೂಪಳ್ಳಿ (ಹುಬ್ಬಳಿ); ರಾಜೋಳಿ (ನಿಜಾಂ);

ಅರಸಿಬೀದಿ(ವಿ); ಅರಸಿಕೆರೆ(ಮೈ.); ಪಟ್ಟದಕಲ್ಲು; ಶಹಾಪೂರ; ಪಾಚ್ಛಾಪೂರ; ಸುಲ್ತಾನಪೇಟ; ಬೇಗಂ ಪೇಟ;

ಸಾವಂತವಾಡಿ (ಸಾಮಂತ); ಗಾಝಿಪೂರ;

ಹೆಗ್ಗಡೆದೇವನಕೋಟೆ (ಮೈ.); ಹೆಗಡೆ; ಹೆಗಡಿಹಾಳ (ವಿ.); ವಝೀರಗಾವ (ನಿಜಾಂ);

ದಣ್ನಾಯಕನಕೆರೆ (ಬ); ನಾಯಕವಾಡಿ; ನಾಯಕನೂರು; ನಾಯಕನಕೊಪ್ಪ; ಝುಂಜುರವಾಡ (ಬೆ.),

ಬಂಟವಾಳ, ವೀರಾಪುರ; ರಾಣಾಪುರ; ರಾಣೆಬೆನ್ನೂರು; ಬಹಾದ್ದೂರಬಂಡಿ; ಬಾದರದಿನ್ನಿ (ವಿ.); ದಳವಾಯ್‌ಹಳ್ಳಿ (ಸಾಲೆಂ); ದಂಡುಕಾರನಹಳ್ಳಿ (ಸಾಲೆಂ); ಮಾನ್ಯದಹಳ್ಳಿ (ಸಾಲೆಂ); ಒಡೇರಹಳ್ಳಿ; ಒಡೇರಕೊಪ್ಪ ಗೌಡನಹಟ್ಟಿ; ಗೌಡವಾಡ (ಸಾ.);

ಶೆಟ್ಟಿಹಳ್ಳಿ (ಸಾಂ.) ಶೆಟ್ಟಿಗಳಕೊಪ್ಪ (ಮೈ.); ಶೆಟ್ಟಿಹಳ್ಳಿ (ಸಾಲೆಂ); ಬಣಜರಹಳ್ಳಿ (ಸಾಲೆಂ);

ಸೂಳಿಭಾವಿ; ಮಂಗಸೂಳಿ (ಬೆ.); ಹಾದರಗೇರೆ; ಸೂಳಿಕೆರೆ; ಸೂಳಿಕುಂಟೆ; ಸುಳ್ಳ ಮತ್ತು ಸುಳ್ಯ (ಸೂಳ್ಯ ?); ಪಾತ್ರಬೂದಿಹಾಳ (ಬ.); ಗಣಿಕೆಹಾಳು (ಬ.); ರಂಭಾಪುರ; ಅಪ್ಸರಗೊಂಡ (ಉ ಕ.); ಗಂಧರ್ವಪುರ (ಬೆ.);

ಕಂಬಾರಗಣಿವೆ; ಕುಂಬಾರಹಳ್ಳಿ (ಶೇಲಂ); ಸೋನಾರಹಳ್ಳಿ (ಶೇಲಂ); ನಾವದಗಿ (ವಿ); ನಾವಲಗಟ್ಟಿ (ಬೆ.); ಅಗಸಬಾಳ (ವಿ.); ಅಗಸನಹಳ್ಳಿ; ಮಡಿವಾಳ (ಮೈ); ಗಾಣಿಗಪುರ (ಸೊ.) ತೊಪ್ಪೂರ್ ಗಾಣಿಗರಹಳ್ಳಿ (ಸಾಲೆಂ); ಜಾಡಹಳ್ಳಿ; ಕಟಕನಹಳ್ಳಿ (ವಿ.); ಮೋದರಹಳ್ಳಿ; ಹೆ(ೕ)ಳವನಕಟ್ಟಿ;

ಡೊಂಬಸಾಂದ್ರ; ಡೋಮುಗಾವ; ಡೊಂಬನಹಾಳ (ಧಾ); ದಾಸನೂರ; ದಾಸರಳ್ಳಿ; ದಾಸನಕೊಪ್ಪ; ದಾಸ್ತಿಕೊಪ್ಪ; ದಾಸನಕೊಡಿಗೆ (ಮೈ.); ಕಾತರಾಳ; ಕೋಡಂಗಿಹಳ್ಳಿ (ಶೇಲಂ); ಕಬ್ಬೇರಹಟ್ಟಿ; ಉಪ್ಪಾರಹಳ್ಳಿ (ಸಾಲೆಂ); ಚಿಕ್ಕಪೂವತ್ತಿ (ಶೇಲಂ); ಬೋನಗಿತ್ತಿಹಳ್ಳಿ;

ಸಿದ್ಧಪುರ (ಸಿದ್ಧಾಪುರಗಳು ಇನ್ನೂರಕ್ಕೆ ಮಿಕ್ಕಿವೆ); ಜೋಗಲದಿನ್ನಿ; ಜೋಗಿಮಡ್ಡಿ; ಯೋಗಿಮಲೆ (ಮೈ.); ಸಂನ್ಯಾಸಿಗುಡ್ಡ; ಜಂಗಮರಾಳ, ಜಂಗಮರಹಳ್ಳಿ; ಜಂಗಮವಾಡಿ; ಬಾಲಜಂಗಮನಹಳ್ಳಿ (ಸಾಲೆಂ);

ಗಣಾಚಾರಿಪುರ (ಮೈ.); **ಆಚಾರತಿಮ್ಮಾಪೂರ; ಆಚಾರನರಸಾಪೂರ;** ಭಟ್ರಾಳ; ಭಟ್ಟರಮನೆ (ಕಾ.); ಭಟ್ಟರಹಳ್ಳಿ (ನಿ.); ಆಚಾರರೂರು (ನಿಜಾಂ); ಆಚಾರರಹಳ್ಳಿ (ಸಾಲೆಂ); **ಹಾರೂಗೆರೆ;** ಐಯಾಹೊಳೆ; ಐನಾಪುರ; ಐಯ್ಯವರಪಳ್ಳಿ (ನಿಜಾಂ); ಅರ್ಹರಪಳ್ಳಿ (ನಿಜಾಂ); ಸವಣೂರು (ಧಾ.; ನಿಜಾಂ); ಸವಣಗೆರೆ (ಧಾ.); ಶ್ರವಣಬೆಳಗೊಳ; ಸವಣಹಳ್ಳಿ (ವಿ.);

ಗುರುಮಠಕಲ್ಲ; ಗುರ್ಲಾಪುರ; ಗುರ್ಲಕಟ್ಟಿ; ಗುರ್ಲಹೊಸೂರ; ಗುರುಪುರ (ದ. ಕ.); ಮಠವಳ್ಳಿ (ನಿಜಾಂ); ಗೊರವನಕೊಳ್ಳ; ಗೊರವನಕೊಪ್ಪ; ಗೊರಾಬಾಳ; ಓಜೇನಹಳ್ಳಿ; ಪೂಜಾರಿಹಳ್ಳಿ (ಖ); ಭಕ್ತರಹಳ್ಳಿ (ನಿ.); ಬೋಳಬಗುತನಹಳ್ಳಿ (ಸಾಲೆಂ);

ಅಗ್ರಹಾರ; ಅರಗ; ಅಗರಖೇಡ; ದಾನವಾಡ; ದತ್ತವಾಡ; ಕೊಟ್ಟೂರು; ಆಹೇರಿ (ವಿ.); ಪಂಡಿತರಹಾಳ(ಶೇಲಂ); ಪಂಡಿತನಹಳ್ಳಿ; ಪಂಡಿಯಾಳ (ನಿ.); ಬೋಧನಿ (ನಿ.); ಬಿಜ್ಜೂರು (ವಿ.); ಒಲ್ಲರವಾಡ (ಧಾ.); ತಿಳವಳ್ಳ (ಧಾ.);

**ಧರ್ಮದಿಂದ**

ಜಿನರಾಳ; ಜೈನಾಪೂರ; ಬಸದಿ; ಬಸ್ತವಾಡ; ಬಸದಿಕೊಪ್ಪ; ಬಸ್ತಿಪೂರ; ಹಿಂದಪೂರ; ಇಸ್ಲಾಂಪೂರ; ಮಸೂತಿ (ವಿ.);

ಧಮ್ಮವೊಳಲ್ (ಡಂಬಳ; ಧಾ.); ಧಮ್ಮಣಗಿ ಅಥವಾ ಥಮ್ಮಣಗಿ; ಮತ್ತು ಧಾಮಣೆ (ಬೆ.);

## ೨೨. ವ್ಯಕ್ತಿಗಳಿಂದ ಬಂದುವು:

**ಪುರಾತನ ಋಷಿ ಮುನಿಗಳಿಂದ**

ಅಗಸ್ತ್ಯತೀರ್ಥ; ಗೌತಮಗಿರಿ (ಮೈ.); ಕಣ್ವನದಿ; ಕಣ್ವತೀರ್ಥ; ಕೌಂಡಿಣ್ಯ ನದಿ; ಮಾರ್ಕಂಡ ನದಿ; ದ್ರೋಣಾಚಲ; ಶೃಂಗಗಿರಿ (ಶ್ರಿಂಗೇರಿ); ದೂರ್ವಾಸಪುರ;

**ರಾಜಕೀಯ ಮತ್ತು ಸಾಮಾಜಿಕ**

ತೆರಕಣಾಂಬಿ (ತ್ರಿನೇತ್ರಕದಂಬ); ಶಿವರ (ಶಿವಮಾರ ಗಂಗ); ವಿಕ್ರಮಪುರ (ಅರಸಿಬೀದಿ); ಹರಪನಹಳ್ಳಿ; ಬುಕ್ಕರಾಯಪಟ್ಟಣ; ಕೃಷ್ಣ

ರಾಜಸಾಗರ; ಚಾಮರಾಜಪೇಟೆ; ಔರಂಗಾಬಾದ; ಅಹಮ್ಮದನಗರ; ಹೈದರಗಡ (ಕಾ.); ವೆಂಕಟಾದ್ರಿಹಳ್ಳಿ (ಶೇಲಂ);

ನಾಗಲಾವಿ (ವಿಜಯನಗರದ ನರಪತಿ ಕೃಷ್ಣರಾಯನ ಅರಸಿ); ಓಬಲಾಪುರ; ನೀಲವ್ವನಹಳ್ಳಿ; ಸಿದ್ಧವ್ವನಹಳ್ಳಿ; ದ್ಯಾಮವ್ವನಹಳ್ಳಿ; ಪಾಲವ್ವನಹಾಳ; ಮಲ್ಲಕ್ಕನಹಳ್ಳಿ;

ನಾಗಶೆಟ್ಟಿಕೊಪ್ಪ; ಹನಶೆಟ್ಟಿಕೊಪ್ಪ; ಗುಮ್ಮನಾಯಕನಪಾಳ್ಯ; ಚಿಕ್ಕದೋರನಬೆಟ್ಟ (ಸಾಲೆಂ); ಹೊನ್ನಪ್ಪಗೌಡನಹಳ್ಳಿ (ಸಾಲೆಂ); ಶಾಮ ಕವುಂಡನ ವಲಸೈ (ಶೇಲಂ); ಕಸುವರೆಡ್ಡೀಹಳ್ಳಿ (ಶೇಲಂ); ಯಲ್ಲೋಜಿ ಗುಡ್ಡ (ನಿ.); ಚಿಂತಾಮಣಿ (ಮೈ.); ಮಾಧವರಾಯಪಾಳ್ಯ (ಮೈ.) ಫ್ರೇಜರಪೇಟೆ; ಬ್ರೌನಿಂಗಪೇಟೆ;

**ಧಾರ್ಮಿಕ**

ವ್ಯಾಸಸಮುದ್ರ; ಶಂಕರಪುರ (ಮೈ.); ಸುರೇಶ್ವರ (? ಧಾ.); ಮಧ್ವರಾಯಪುರ (ಕೊಯಿಮತ್ತೂರು); ಅಲ್ಲಂಪೂರ; ಬಸವಾಪಟ್ಟಣ; ಸಾಣಾಪುರ (ಬ.); ಸಾಯಣವರಂ (ತಮಿಳದೇಶ); ವಿದ್ಯಾನಗರ; (?); ಮಾಣಿಕನಗರ;

ಮಮುದಾಪುರ (ಮುಹಮ್ಮದ?); ರಸೂಲಪೂರ; ಪೈಗಂಬರಪುರ (ನಿಜಾಂ); ಬಾಬಾಬುಡ್ಡನಗಿರಿ;

. . . . .

ಪಾಪಘ್ನೀ (ನದಿ), ಅಘನಾಶನೀ (ನದಿ); ಮಲಾಪಹಾರಿ (ನದಿ); ತೀರ್ಥಹಳ್ಳಿ;

ಭದ್ರಾಪುರ; ಭದ್ರಾವತಿ; ಕಲ್ಯಾಣ; ಮಂಗಳಗಟ್ಟಿ; ಮಂಗಲಗಿ; ಮಂಗಳವಾಡ; ಮಂಗಳೂರು; ಮಂಗಳಾಪುರ (ಸಿ.); ಮಂಗಲ (ನಿ.)

ಆನಂದಪುರ (ಮೈ.); ಆನಂದಗಲ್ಲು (ನಿ.); ಆನಂದವಾಡಿ (ನಿ.);

**ಊರ ಹೆಸರಿನ ಕೊನೆಯ ಭಾಗದಿಂದ ಸೂಚಿತವಾಗುವ ಗುಂಪುಗಳು:**

ಇವುಗಳಲ್ಲಿ ಸಾಮಾನ್ಯವಾಗಿ ಎರಡು ದೊಡ್ಡ ಗುಂಪುಗಳನ್ನು ಮಾಡಬಹುದು : ೧. ಊರ (ವಸತಿಕ್ರಮ, ಸಾಂಸ್ಕೃತಿಕ ಹಿನ್ನೆಲೆಯನ್ನು

ಸೂಚಿಸುವ) ಇತಿಹಾಸದರ್ಶಕ ಪದಗಳು; ೨. ಊರ ಭೌಗೋಲಿಕ ಸ್ಥಿತಿಗತಿಗಳನ್ನು ಹೇಳುವಂತಹ ಪದಗಳು;

## ಮೊದಲನೆಯ ಬಗೆಯವು:

೧. ಪಟ್ಟಿ, ಪಾಡಿ, ಹಟ್ಟಿ, ಹಾಳ; ಹಳ್ಳಿ; ಬಾಡು; ಬಾಳು; ವಾಡ; ವಾಡಿ;....ದೊಡ್ಡಿ;

೨. ಕುಡಿ, ಗುಡಿ, ಗೂಡು,....ಗುಳಿ—ಗೂಳಿ....

೩. ಇಲ್; ನೆಲೆ; ಕೋಣೆ; ಮನೆ; ಮಾಡ; ಮಳಿಗೆ; ಅಂಗಡಿ; ಬೀಡು;........ಖೇಡ;........ಗ್ರಾಮ; ಗಾವ; ಗಾವಿ;....

೪. ಊರು; ನಟ್ಟ; ನಾಡು; ಪುರ; ವರ; ಪೇಟೆ; ಪಟ್ಟಣ; ಈಶ್ವರ....

೫. ಕೋಟೆ; ಹುಡೆ (ಹುಡ್ಯ); ದುರ್ಗ; ಗಡ; ಬಾಯಿ; ಬಾಗಿಲ....

೬. ಪರಿಗೆ; ಹರವಿ; ಬಡ್ಡಿ; ಬಢಾವಣೆ....

## ಎರಡನೆಯ ಬಗೆಯವು:

೧. ತಿಟ್ಟಿ; ಮಿಟ್ಟಿ; ದಿನ್ನೆ; ದಿಬ್ಬ; ಏರಿ; ಮರಡಿ; ಮಾಡ; ಮಾಳ: ಮಟ್ಟಿ;....

೨. ಮಾಳ; ಮಲೆ; ಗುಡ್ಡ; ಬೆಟ್ಟ; ಗಿರಿ; ಪರ್ವತ;..ಪಹಾಡ..

೩. ಕಂಡಿ (ಖಂಡಿ; ಖಿಂಡಿ); ಕಣಿವೆ; ಘಟ್ಟ;

೪. ಬಂಡಿ; ಕಲ್ಲು; ಶಿಲೆ;..ಕೊಂಬು; ಕೋಡು;..

೫. ಬಯಲು [ಬೈಲು]; ಕಾಡು; ಕಳ; ಅಂಗಳ;..ಹಿತ್ತಿಲು;

೬. ಗುತ್ತ; ಕುಪ್ಪ; ಗುಪ್ಪ; ಕೊಪ್ಪ;..ಕುಮರಿ; ಕುಂಬಿ; ಏರಿ; ಕುಂದ, ಗುಂದ, ಕೊಂಡ, ಗೊಂಡ, ಗೊಂಡಿ, ಗೊಂದಿ, ಕುಂದರ;

೭. ಪೊಲ; ಪೊಳಲು; ಹೊಲ, ಶೇತ; ಖೇಟ; ತೋಟ; ಗದ್ದೆ; ಮಕ್ಕಿ;

೮. ಏರಿ; ಒಡ್ಡು; ಕಟ್ಟೆ; ಕೆರೆ; ಕುಂಟೆ; ಗುಂಟೆ; ಕೊಳ; ಕೊಳ್ಳ; ಹೊಂಡ; ಬಾವಿ; ಕುಳಿ—ಗುಳಿ; ಗುಣಿ; ಡೋಣಿ; ಮಡು;

....ಕೋಡಿ; ಹಳ್ಳ; ಹೊಳೆ; ತೊರೆ; ಸರೋವರ; ಸಮುದ್ರ; ಸಾಂದ್ರ; ಸಾಗರ....

ಇವಲ್ಲದೆ ಅಜೆ; ಅಂಜೆ; ಆಜೆ; ಉಂದ; ಉಂತೆ; ತೋಡು; ಓಡು; ಕುರಕಿ; ಮಂಗಲ; ಮೊಗರು ಮುಂತಾದುವುಗಳೂ ಉಂಟು.

ಈ ಹೆಸರುಗಳಲ್ಲಿ ಪೂರ್ವಪದವು ಹಲವೆಡೆಗೆ ಸಂಸ್ಕೃತವಾಗಿದ್ದರೂ ಉತ್ತರಪದವು ಸಾಮಾನ್ಯವಾಗಿ ಕಂನುಡಿಯದೇ ಆಗಿರುತ್ತದೆ. ಪುರ, ಗ್ರಾಮ [ಗಾವ, ಗಾವಿ], ಅಗ್ರಹಾರ, ವರ, ಈಶ್ವರ, ಗಿರಿ, ದುರ್ಗ ಇಂತಹ ಕೆಲವನ್ನುಳಿದರೆ ಎಲ್ಲವೂ ದೇಶೀಯವೆ ಆಗಿವೆ. ನದಿ ಮತ್ತು ಪರ್ವತಗಳ ಹೆಸರುಗಳು ಮಾತ್ರ ಹೆಚ್ಚಾಗಿ ಸಂಸ್ಕೃತ ಭಾಷೆಯವೆ ಆಗಿವೆ.

ಜೇನಹುಟ್ಟಿನ ಕಟ್ಟಣದಲ್ಲಿ ಕಾಣಬರುವ ಅಂದ, ಅಚ್ಚುಕಟ್ಟುತನ, ಸುಸಂಬದ್ಧತೆಗಳನ್ನು ಕಂಡು ಯಾರು ಸೋಜಿಗಗೊಳ್ಳಲಿಕ್ಕಿಲ್ಲ? ಮನುಷ್ಯ ಪ್ರಾಣಿಗೆ ನಾಡೆ ಅದರ ಹುಟ್ಟಿ; ಅದರಲ್ಲಿ ಅದು ಪಾಡಿ, ಬೀಡು, ಮನೆಗಳನ್ನು ಕಟ್ಟಿ ನೆಲಸಿರುತ್ತದೆ. ಇದರ ಹುಟ್ಟಿಯ ಹೆಸರುಗಳಲ್ಲಿರುವ ಸೌಂದರ್ಯ, ಸುಸಂಬದ್ಧತೆ, ಮತ್ತು ಅರ್ಥದಲ್ಲಿರುವ ಮಾಧುರ್ಯವನ್ನು ಅನುಭವಿಸಲು ನಮ್ಮಿಂದ ನಾವು ಬೇರೆಯಾಗಿ—ತಟಸ್ಥವೃತ್ತಿಯನ್ನು ತಾಳಿ ಸಿಡಿದಾಗಿ ನೋಡುವ ಅವಶ್ಯಕತೆಯಿದೆ.

ಆಂಡಯ್ಯ ಕವಿಯು ಹೀಗೆ ಸ್ವಲ್ಪ ನೋಡಿ ಹಿಗ್ಗಿ ಬೆರಗುವಟ್ಟಿದ್ದಾನೆ.

'ಇವು ಪಳ್ಳಿ, ಇವು ಪಟ್ಟಣ, ಇವು ಕೆರೆ, ಇವು ಕಾಡು, ಇವು ಬನಂ..ಎಂದು ಪೇಳ್ವುದು ಅರಿದು;' 'ಕೊಳಂಗಳಿಂ, ಕೆರೆಗಳಿಂ, ಕಾಲೂರ್ಗಗಳಿಂ, ಕೆಯ್ಗಳಿಂ ಈ ನಾಡು ಕಡು ಚೆಲ್ವಾಯ್ತು' ಎಂದು ಸಂತಸಗೊಂಡು ಉಸಿರಿದ್ದಾನೆ. ನಾಡಿನ ನಗರರಚನೆ, ಸೃಷ್ಟಿಸೌಂದರ್ಯಾದಿಗಳನ್ನು ಕಂಡು ಉಂಟಾಗುವ ಹಿಗ್ಗಿನ ಸುಖವೊಂದು ಬಗೆ. ಈ ಹೆಸರುಗಳ ಹಿಂದೆ ಹುದುಗಿರುವ ಸಾಂಸ್ಕೃತಿಕ ಇತಿಹಾಸದ ಆಳವನ್ನು ಅರಿತುಕೊಳ್ಳುವಾಗ ಆಗುವ ಆನಂದದ ಸಂಸ್ಕಾರವು ಇನ್ನೊಂದು ಬಗೆ. ಮೊದಲನೆಯದು ಆಗಲೆ ಅನುಭವಿಸಲು ಸಿಕ್ಕುವುದು; ಎರಡನೆಯದು ಪರಿಶ್ರಮದಿಂದ ಸಾಧ್ಯವಾದರೂ ಮನಸಿನ ಹಲವು ತೊಡಕುಗಳನ್ನು ಬಿಡಿಸಿ ಜೀವನ ಸೌಖ್ಯಕ್ಕೆ ಕಾರಣವಾಗುವುದು.

---

## ೩. ನಮ್ಮ ನಾಡಿಯ ಪೂರ್ವ ಕತೆ

ಹಿಂದಿನ ಪ್ರಕರಣದಲ್ಲಿ ಊರು, ವಸತಿಸ್ಥಾನವೆಂಬರ್ಥವು ಬಂದಿರುವ ಹಲವು ಹೆಸರುಗಳನ್ನು ಬೇರೆ ಬೇರೆ ಗುಂಪುಗಳಲ್ಲಿ ವಿಂಗಡಿಸಿ ಕೊಟ್ಟಿದ್ದಾಗಿದೆ. ಅವೆಲ್ಲವುಗಳಲ್ಲಿ ತೀರ ಆರಂಭಕಾಲದ ವಸತಿಸ್ಥಾನವನ್ನು ಸೂಚಿಸುವ ಪದವು ಆವುದು? ಅದನ್ನು ನಿರ್ಧರಿಸಿ ಹೇಳುವುದಕ್ಕೆ ಆಧಾರಗಳೇನು?

ಇದನ್ನು ಕುರಿತು ಇನ್ನೂ ಗ್ರಂಥಗಳು ಪ್ರಕಟವಾಗಿಲ್ಲ; ಅಲ್ಲಿ ಇಲ್ಲಿ ಗ್ರಾಮನಾಮಗಳ ಕೆಲವೊಂದು ಅಭ್ಯಾಸವು ಆಗಿದ್ದರೂ ಇದನ್ನು ಯಾರೂ ನಿರ್ಧರಿಸಿ ಹೇಳಿದಂತಿಲ್ಲ. ಮದರಾಸ, ಮೈಸೂರು, ಮುಂಬೈ ವಿಶ್ವವಿದ್ಯಾನಿಲಯಗಳಲ್ಲಿ ಈ ಬಗೆಗೆ ಸಂಶೋಧನ ನಡಸಿ ಯಾರೂ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿಲ್ಲ; ಆಂಧ್ರ ಮತ್ತು ಉಸ್ಮಾನಿಯಾ ವಿಶ್ವವಿದ್ಯಾನಿಲಯದ ವಿಚಾರ ತಿಳಿದಿಲ್ಲ.

ಇದನ್ನು ತಿಳಿದುಕೊಳ್ಳಲು ಹಳೆಯ ಕೋಶಾದಿಗಳಿಗೆ ಮೊರೆಯಿಟ್ಟರೆ ಅವುಗಳಿಂದ ಯಾವ ಸಮಾಧಾನಕರವಾದ ಉತ್ತರವು ದೊರೆಯುತ್ತಿಲ್ಲ. ಕವಿಕಂಠಹಾರ, ಚತುರಾಸ್ಯನಿಘಂಟು ಮೊದಲಾದುವುಗಳಲ್ಲಿ ಗ್ರಾಮನಾಮಗಳ ಉಲ್ಲೇಖವು ಕೂಡ ಒಂದೆಡೆಯಲ್ಲಿಲ್ಲ. ನಾಗವರ್ಮನು ಅನುಸರಿಸಿದ್ದು ಮುಖ್ಯವಾಗಿ ಸಂಸ್ಕೃತ ಅಮರಕೋಶವನ್ನೇ. ಗ್ರಾಮ, ಸಂವಸಥ, ಖೇಟ ಎಂಬೀ ಬಗೆಯ ಹೆಸರುಗಳಲ್ಲದೆ ಅಚ್ಚ ಕಂನಾಡ ನೆಲೆವೀಡುಗಳ ಸುಳಿವೆ ಅಲ್ಲಿಲ್ಲ.

ನನಗೆ ಈ ಕಗ್ಗತ್ತಲೆಯಲ್ಲಿ ಮುಂದುವರಿಯಲು ನಮ್ಮ ನಾಡಿನ ಪೂರ್ವ ಪರಂಪರೆಗಳೆ ಒಂದು ದೊಡ್ಡ ಆಧಾರ. ಅಲ್ಲದೆ ಈ ದಿಕ್ಕಿನಲ್ಲಿ ಕೆಲವೊಂದು ನಿಶ್ಚಿತವಾದ ಹಾದಿಯನ್ನು ತೋರಿ ಬೆಳಕು ಕೊಡಲು ಇನ್ನೊಂದು ಮಹತ್ವದ ಸಾಧನವಿದೆ. ಮಾನವನೆಂಬ ಪ್ರಾಣಿಯ ಈ ಲೋಕದೊಳಗಿನ ಸಾಮಾಜಿಕ ವಿಕಾಸದ ಕ್ರಮವನ್ನು ಸಂಶೋಧಕರು ನಿಃಸಂದೇಹವಾದ ರೀತಿಯಲ್ಲಿ ಕಂಡುಹಿಡಿದಿದ್ದಾರೆ. ಜಗತ್ತಿನ ಯಾವ ಮೂಲೆಯಲ್ಲಾದರೂ ಸಾಮಾನ್ಯವಾಗಿ ಮಾನವಸಮಾಜವು ಬೆಳೆದು ಬಂದ ಬಗೆಯು ಒಂದೇ ತೆರನಾಗಿದೆ.

ಆದುದರಿಂದ ಮಾನವ ಸಮಾಜದ ವಿಕಾಸಕ್ರಮದ ಇತಿಹಾಸವೂ ಇಲ್ಲಿ ಒಂದು ಅತ್ಯಂತ ಮಹತ್ವದ ಸಾಧನವಾಗಿದೆ.

ಗ್ರಾಮ, ಊರು, ಪುರ ಎಂಬಿವು ನನ್ನ ತಿಳುವಳಿಕೆಯಂತೆ ಅಷ್ಟು ಪುರಾತನವಲ್ಲ. ಗ್ರಾಮ ಮತ್ತು ಪುರ ಎಂಬವು ನಮ್ಮ ನಾಡಿನಲ್ಲಿ ಅಷ್ಟು ವಿಶೇಷವಾಗಿಲ್ಲ. ಅಲ್ಲದೆ ಹಳ್ಳಿಗರ ಬಾಯಿಗೆ ಸರಿಹೋಗುವ ಮಾತುಗಳೂ ಇವಲ್ಲ. ಆದುದರಿಂದ ಇವು ನಮ್ಮ ಮೂಲ ನಾಡವರೇ ಕಟ್ಟಿಕೊಂಡ ಊರುಗಳೆಂದು ಗ್ರಹಿಸಲಿಕ್ಕಾಗುವುದಿಲ್ಲ. 'ಊರು' ಎಂಬುದು ಈಗ ಜನಸಾಮಾನ್ಯರ ಬಾಯಲ್ಲಿರುವುದು ನಿಜ. ಆದರೆ 'ಊರು' ಎಂಬ ಮಾತು ಮಾನವನ ಪ್ರಾಥಮಿಕ ಬಿಡಾರದ ಸೂಚಕವಾಗಿಲ್ಲ. ಊರು, ನಾಡು, ನೆಲೆ ಇವೆಲ್ಲವೂ ಊರಿಕೊಂಡು, ನಟ್ಟುಕೊಂಡು ಸ್ಥಿರವಾಗಿ ನಿಂತಕಾಲದ ನೆಲೆವೀಡುಗಳೆಂದು ಆ ಶಬ್ದಗಳಿಂದಲೆ ಹೊರವಡುತ್ತದೆ.

ಮಾನವನು ಪ್ರಾಥಮಿಕ ಸ್ಥಿತಿಯಲ್ಲಿ ಆಹಾರ ಸಂಚಯಕ್ಕಾಗಿ ಅಲೆಯಬೇಕಾಗುತ್ತಿದ್ದಿತು. ಈ ಪ್ರಾಥಮಿಕ ಸ್ಥಿತಿಯಲ್ಲಿ ಎರಡು ಮೆಟ್ಟುಗಳಿವೆ. ಮೊದಲನೆಯದು ಬೇಟೆಗಾರಿಕೆ; ಎರಡನೆಯದು ದನಗಾರಿಕೆ. ಬೇಟೆಯಾಡಿ ಬದುಕುವುದು ತೀರ ಆರಂಭಕಾಲದ ಸ್ಥಿತಿ; ಬಳಿಕ ಮಾನವನಿಗೆ ತನ್ನ ಸುತ್ತಲಿನ ಪ್ರಾಣಿಗಳ ಪರಿಚಯವು ಹೆಚ್ಚಾದಂತೆ ಅವುಗಳಲ್ಲಿ ತನಗೆ ಉಪಯುಕ್ತವಾದುವುಗಳನ್ನು ಸಾಕಿಕೊಂಡಿರುವುದನ್ನು ಕಲಿತನು. ದನಗಳನ್ನು ಸಾಕಿಕೊಂಡು ಬದುಕುವಾಗಲೂ ಅವುಗಳ ಆಹಾರಕ್ಕಾಗಿ ಮಾನವನಿಗೆ ಅಲೆದಾಟವು ತಪ್ಪಿದ್ದಿಲ್ಲ. ಗುಡ್ಡ, ನದಿ, ಕೊಳ್ಳಗಳ ಗುಂಟ ಹುಲ್ಲು, ನೀರು ಇದ್ದಕಡೆಗೆ ಹುಡುಕುತ್ತ ಹೋಗಬೇಕಾಗುತ್ತಿತ್ತು.

ಆದಕಾರಣ ಆರಂಭದ ವಸತಿಸೂಚಕವಾದ ಹೆಸರು 'ಊರು' 'ನಾಡು,' 'ನೆಲೆ'ಯಂತಹ ಊರಿಕೊಂಡು, ನಟ್ಟುಕೊಂಡು ನೆಲಸಿದಂತಹದು ಆಗಿರಲಾರದು. 'ಬೀಡು' ಎಂಬಲ್ಲಿ ತಾತ್ಪೂರ್ತಿಕ ವಸತಿಸ್ಥಾನವೆಂಬರ್ಥವುಂಟು. ಆದಕಾರಣ ಬೀಡು, ಬೀಡಿ, ಬೀಡ ಎಂಬೀಬಗೆಯ ಹೆಸರಿನ ಎಡೆಗಳು ಆರಂಭದ ವಸತಿಸ್ಥಾನಗಳಾಗಿರಬಹುದೆ? ಎಂಬ ಒಂದು ವಿಚಾರವು ಹೊಳೆಯುತ್ತದೆ. ಆದರೆ ಬೀಡಿನಲ್ಲಿ ದನಗಾರಿಕೆಯ ಅಥವಾ ಬೇಟೆಗಾರಿಕೆಯ ಅರ್ಥಸೂಚಕವಾದ ಏನೊಂದು ದನಿಯೂ ಕೇಳಬರುವುದಿಲ್ಲ.

'ಹಟ್ಟಿ' ಎಂಬಲ್ಲಿ ಈ ದನಿಯಿದೆ. ಹಟ್ಟಿ ಎಂದರೆ ಗುಡಿಸಲು; ಹಟ್ಟಿ ಎಂದು ದನಗಳ ಕೊಟ್ಟಿಗೆಗೂ ಹೆಸರು. ಜೀವಧನಂಗಳ 'ಹಟ್ಟಿ,' ಗೋಸ್ಥಾನಕವೆಂದು ಕೋಶವು ಹೇಳುತ್ತದೆ. ಗೋಕುಲ, ವ್ರಜ, ಘೋಷ ಎಂಬ ಸಂಸ್ಕೃತ ಪದಗಳಿಗೆ ಇದು ಸಮಾನಾರ್ಥಕವಾಗಿದೆ. ಹಟ್ಟಿಯ ಮೇಲಣ ಕೆಲವು ಗಾದೆಗಳಿವೆ: ಹಟ್ಟಿಗೆ ಗತಿಯಿಲ್ಲದವನು ಮಠ ಕಟ್ಟುವನೆ? ಹಟ್ಟೀಲಿ ಹುಟ್ಟಿದ್ದಲ್ಲ; ಕ್ರಯಕ್ಕೆ ಕೊಂಡುದಲ್ಲ; ಪರಮಗತಿಯೆಂಬುದು ನೆರೆಮನೆಯ ಹಟ್ಟಿಯೆ ? ಬಿಟ್ಟೀ ಆಳು ಆದರೆ ಹಟ್ಟಿ ಕಟ್ಟಬಾರದೆ? ಮಟ್ಟು ತಿಳಿದ ನಾಯಿ ಹಟ್ಟಿಯಲಿ ಇದ್ದೀತೆ? ಇಲ್ಲಿ ಮನೆಯೆಂಬಂತೆ ದನಗಳ ಹಕ್ಕಿ ಎಂಬ ಅರ್ಥವೂ ಧ್ವನಿತವಾಗುತ್ತದೆ.

ಈ ಕಾರಣಗಳಿಂದ 'ಹಟ್ಟಿ' ಎಂದರೆ ಜನ ಮತ್ತು ದನಗಳ ವಾಸಸ್ಥಾನ, ಬಡಾರ, ತುರುಕಾರ-ದನಗಾರರ ನಿವಾಸವೆಂಬುದು ಸ್ಪಷ್ಟ. ತುರುಕಾರ ದನಗಾರರಿಗೇ ಹಟ್ಟಿಕಾರರೆಂದು ಇರುವ ಹೆಸರು ಇಲ್ಲಿ ಮನನೀಯವಾಗಿದೆ. ಆರಿಯ ಮಾತಿನಲ್ಲಿ ಹಟ್ಟಿಕಾರ ದನಗಾರರಿಗೇ 'ಹಟಗಾರ–ಧನಗರ' ರೆಂದು ಕರೆವ ವಾಡಿಕೆಯುಂಟು. 'ಧನಗರ' ಮತ್ತು 'ಹಟಗಾರ' ಇವೆರಡೂ ಪದಗಳ ವ್ಯುತ್ಪತ್ತಿಯು ಆರಿಯ ಮಾತಿನಿಂದ ಆಗುತ್ತಿಲ್ಲವೆಂದು ಶ್ರೀ ಶಂಕರರಾವ ಲಾಂಡೆ ಇಂದೂರ (ಹೋಳಕರ), ಇದೇ ಜಾತಿಯ ಗೃಹಸ್ಥರು ಪ್ರಕಟಿಸಿದ ತಮ್ಮ ಪ್ರಬಂಧದಲ್ಲಿ ಸ್ಪಷ್ಟವಾಗಿ ಒಪ್ಪಿಕೊಂಡಿದ್ದಾರೆ. ಇವೆರಡೂ ಶಬ್ದಗಳ ಮೂಲಾರ್ಥವನ್ನು ತಿಳಿಯಲು ಆರಿಯರಿಗೆ ಕಂನುಡಿಯ ನೆರವನ್ನು ಕೋರಲೇ ಬೇಕು. ಧನ ತದ್ಭವ ದನ; ಧನಗರರೆಂದರೆ ದನಗಾರರೆಂಬ ಅರ್ಥ. ಕುರುಬರಿಗೆ ಆರಿಯರಲ್ಲಿ ದನಗಾರ ಅರ್ಥಾತ್ ಧನಗರರೆಂದು ಹೇಳುವರು. ಹಟಗಾರವೆಂಬುದು ಹಟ್ಟಿಕಾರ ಶಬ್ದದ ಮರ್‍ಹಾಟಿ ಉಚ್ಚಾರ. ವರ್‍ಹಾಟ, ಇಂದೂರಿನ ಕಡೆಯ ಹಲವು ಪಾಟಿಲರೂ, ದೇಶಮುಖರೂ 'ಹಟಗಾರ' ರಾಗಿದ್ದಾರೆ. ಹಟಗಾರ–ಧನಗರ ಶಬ್ದವು ಪರಸ್ಪರ ಸ್ಪಷ್ಟೀಕರಣ ಮಾಡುವ ಜೋಡು ನುಡಿ.

ಆದಕಾರಣ 'ಹಟ್ಟಿ' ಎಂಬ ನಿವಾಸಸ್ಥಾನವಾಚಕ ಶಬ್ದವು ದನಗಾರಿಕೆಯ ಬಾಳಿನ ದ್ಯೋತಕವಾಗಿದೆಯೆಂಬಲ್ಲಿ ಸಂದೇಹವಿಲ್ಲ. ಆದುದರಿಂದ ಹಟ್ಟಿಗಳೇ ನಮ್ಮ ನಾಡಿನ ಆರಂಭಕಾಲದ ವಸತಿಗಳೆಂದು ಊಹಿಸಬಹು

ದಾಗಿದೆ. 'ಪಕ್ಕಣ' ಎಂದರೆ ಬೇಡಪಳ್ಳಿ, ಎಂದು ಕೋಶಗಳಿಂದುತಿಳಿದು ಬಂದರೂ, ಈಗ ಪಕ್ಕಣ ಅಥವಾ ಹಕ್ಕಣಗಳು ಇದ್ದುದು ಎಲ್ಲಿಯೂ ಕಂಡು ಬರುವುದಿಲ್ಲ. ಸಾಹಿತ್ಯ ಶಾಸನಾದಿಗಳಲ್ಲಿಯೂ ಅವುಗಳ ಉಲ್ಲೇಖವು ಸಿಕ್ಕುವುದಿಲ್ಲ. ಆದರೆ ಹಟ್ಟಿಗಳು ಮಾತ್ರ ಕಂನಾಡಿನ ತುಂಬ ಎಲ್ಲೆಲ್ಲಿಯೂ ಇವೆ.

ದನಗಾರಿಕೆಯ ಕಾಲದ ನಿವಾಸಗಳು ಉಳಿದಿರುವಂತೆ ಬೇಟೆಗಾರಿಕೆಯ ಮಟ್ಟವನ್ನು ಸೂಚಿಸುವ ಹೆಸರುಗಳು ನಮ್ಮ ನಾಡಿನಲ್ಲಿ ಸ್ಪಷ್ಟವಾಗಿ ದೊರೆಯುತ್ತಿಲ್ಲವೆಂದು ಹೇಳಬೇಕಾಗುತ್ತದೆ. ಅತಿಪುರಾತನ ಶಿಲಾಯುಗದ ಅವಶೇಷಗಳು ಸಿಕ್ಕುವುವಾದರೂ ಆ ವಸತಿಗಳ ಅಂದಿನ ಹೆಸರುಗಳೇನೆಂಬುದು ತಿಳಿಯುವುದು ಕಷ್ಟವಾಗಿದೆ.

ಕಂನುಡಿಯಲ್ಲಿ ಹಕಾರವೆ ಇಲ್ಲ. ಹಕಾರದ ಉಚ್ಚಾರವು ಅರ್ವಾಚೀನ. ಆದಕಾರಣ 'ಹಟ್ಟಿ' ಎಂಬ ಹೆಸರಾದರೂ ಅರ್ವಾಚೀನ; ಇದು ಪುರಾತನದ್ದೆಂಬುದು ಭ್ರಾಂತಿ, ಎಂದು ಕೆಲರು ಹೇಳಬಹುದಾಗಿದೆ; ನಿಜ. ಹಟ್ಟಿಗಳು 'ಹಟ್ಟಿ' ಎಂಬ ಇದೇ ಹೆಸರಿನಿಂದಲೇ ಎಂದಿನಿಂದಲೂ ಇದ್ದುವೆಂಬ ಅಭಿಪ್ರಾಯವಿಲ್ಲ. ಅಂದು ಅವು 'ಪಟ್ಟಿ' ಎಂದು ಕರೆಯಲ್ಪಡುತ್ತಿದ್ದುವು. 'ತುಪ್ಪವಂ ಕೊಳಲೆಂದು ಪಲಂಬರ್ ಭೃತ್ಯರ್ ವೆರಸು ತುರುಪಟ್ಟಿಗೆ ಬಂದು' ಎಂಬ ವಚನವು ನಯಸೇನನ (ಕ್ರಿ. ಶ. ೧೧೧೨) ಧರ್ಮಾಮೃತದಲ್ಲಿ ದೊರೆಯುತ್ತದೆ. ಹಟ್ಟಿ ಶಬ್ದದ ಮೊದಲ ರೂಪವು ಪಟ್ಟಿ ಎಂದಿದೆ. ಸೇಲಂ ಮೊದಲಾದ ಕಡೆಗೆ 'ಕುರಂಬರ ಪಟ್ಟಿ' ಎಂಬ ಹೆಸರಿನ ಹಳ್ಳಿಗಳು ಉಂಟು. ಈ 'ಪಟ್ಟಿ' ಯೆ ನಮ್ಮಲ್ಲಿ ಹಟ್ಟಿಯಾಗಿ ಬಳಕೆಯಲ್ಲಿದೆ.

'ಪಟ್ಟಿ' ಎಂಬುದರಿಂದ ಅದರ ಮೂಲ ಧಾತ್ವರ್ಥವೂ ಚೆನ್ನಾಗಿ ತಿಳಿದು ಬರುತ್ತದೆ. 'ಪಡು' ಧಾತುವಿನಿಂದ ಬಂದ ಮಾತಿದು. ಪಟ್ಟುಕೊಂಡಿರುವ ಎಡೆಯೆ ಪಟ್ಟಿ. ಪಟ್ಟಿ ಶಬ್ದಕ್ಕೆ ಕಿಟ್ಟೆಲ್ಲ ಕೋಶದಲ್ಲಿ ಹೀಗೆ ಅರ್ಥ ಹೇಳಿದೆ: A place of lying down; a pen or fold; an abode; a hamlet; ತುರುಕಾರರ ಪಟ್ಟಿ (ಗೋಷ್ಠ; ಆಭೀರಪಲ್ಲಿ); ತಮಿಳ ಕೋಶದಲ್ಲಿ ಹೇಳಿದ ಅರ್ಥಗಳಿವು: 1. cow stall; sheep fold; 2. a measure of land as sufficient for a sheep fold; 3. hamlet, village; ಇದರಂತೆ

'ಪಟ್ಟು' ಎಂದರೂ ಪಟ್ಟು, ಹಟ್ಟಿ (ಮನೆ, ಹಳ್ಳಿ) ಎಂಬ ಅರ್ಥವಿದೆ, ತಮಿಳಿನಲ್ಲಿ.

ಪಟ್ಟಿ ಅಥವಾ ಹಟ್ಟಿ ಎಂಬಲ್ಲಿ ಊರು, ನಾಡು, ನೆಲೆಗಳಂತೆ ಸ್ಥಿರವಾದ ವಾಸಸ್ಥಾನವೆಂಬರ್ಥವು ಅಡಕವಾಗಿಲ್ಲ. ಪಟ್ಟುಕೊಂಡಿರುವ ಎಂದರೆ ಈಗ ಇದ್ದ ಅಥವಾ ಇರುವ ಎಡೆ, ಎಂದು ಮಾತ್ರ ಭಾವ. ಸ್ಥಿರವಾದ 'ಊರು' ಎಂಬರ್ಥವು ಇದಕ್ಕೆ ಕಾಲಾಂತರದಿಂದ ದೊರೆಕೊಂಡಿತು. ಮೂಲದಲ್ಲಿ ಈ ಅರ್ಥವಿಲ್ಲ. ಆದಕಾರಣ ಪಟ್ಟಿಯು ನಮ್ಮ ನಾಡವರ ದನಗಾರಿಕೆಯ ಕಾಲದ ಬಿಡಾರವೆಂದು ನಿಶ್ಚಿತವಾಗುತ್ತದೆ.

ಆದರೆ, ಇಂದು ಎಲ್ಲೆಲ್ಲೂ ಕಾಣಿಸಿಕೊಳ್ಳುವ ಪಟ್ಟಿ, ಹಟ್ಟಿಗಳೆಲ್ಲವೂ ಅಂದಿನ, ಸಾವಿರಾರು ವರುಷಗಳ ಹಿಂದಣ ದನಗಾರಿಕೆಯ ಮಟ್ಟದಲ್ಲಿಯೆ ತಲೆದೋರಿದುವೆಂದು ಹೇಳಿದರೆ ಅದು ಅಸಂಬದ್ಧವೇ ಸರಿ. ಆದರೂ 'ಪಟ್ಟಿ' ಎಂಬುದು ಈ ನಾಡವರ ತೀರ ಆರಂಭಕಾಲದ ದನಗಾರಿಕೆಯ ಮಟ್ಟದ ಬಿಡಾರವೆಂಬುದು ನಿಶ್ಚಿತ. ಪುರಾತನ ಇತಿಹಾಸ ಸಂಶೋಧನೆಗೆ ನುಡಿವಳಿಯು ಕೊಡುವ ನೆರವು ಇದಿಷ್ಟು. ಇದಕ್ಕೂ ಮುಂದಿನ ಕೆಲಸ ಪುರಾಣವಸ್ತು ಸಂಶೋಧನ ತಜ್ಞರದು. ಈಗಿರುವ ಪಟ್ಟಿ, ಹಟ್ಟಿಗಳಲ್ಲಿ ಪುರಾತನದುವು ಯಾವುವು? ಈಗ ಎಲ್ಲೆಲ್ಲಿವೆ? ಎಂಬುದನ್ನು ಅಗೆತದಿಂದ ಹಾಗೂ ಬೇರೆ ಪ್ರಮಾಣಗಳಿಂದ ಕಂಡುಹಿಡಿಯುವ ಕೆಲಸವು ಅವರದು.

ಇತ್ತೀಚೆಗೆ ಊರು ಎಂಬುದು ಹೆಚ್ಚು ಬಳಕೆಯಲ್ಲಿದ್ದರೂ ಹಿಂದಕ್ಕೆ ಅದು ಅಷ್ಟು ಪ್ರಚಾರದಲ್ಲಿ ಇದ್ದಿಲ್ಲ. ಪಾಂಡವರು ಅಜ್ಞಾತವಾಸದಿಂದ ಮರಳಿ ಬಂದ ಬಳಿಕ 'ಅಯ್ದು ಬಾಡಮಂ ಅವರ್ಗೀವುದು' ಎಂದು ಶ್ರೀಕೃಷ್ಣನು ಕೌರವನಿಗೆ ಹೇಳಿದ ಹಾಗೆ ಪಂಪನು ವರ್ಣಿಸಿದ್ದಾನೆ. ೧೦ನೆಯ ಶತಮಾನದಲ್ಲಿ ಊರು ಎಂಬರ್ಥದಲ್ಲಿ 'ಬಾಡ' ಶಬ್ದವು ಬಳಕೆಯಲ್ಲಿರಬೇಕು. 'ಬಾಡ' ವೆಂಬುದು ಪಟ್ಟಿಯ ಬಳಗಕ್ಕೆ ಸೇರಿದ ಪದವಾಗಿದೆ. ಪಟ್ಟಿಯು ಎಷ್ಟು ವಿವಿಧ ರೂಪತಾಳಿ ನಮ್ಮ ನಾಡಿನಲ್ಲಿ ನೆಲಸಿದೆಯೆಂಬುದನ್ನು ನಿರೀಕ್ಷಿಸಿದರೆ 'ಪಟ್ಟಿ' ಯ ವಿಸ್ತಾರದ ಬಗೆಗೆ ಸಂದೇಹವೆ ಉಳಿಯುವುದಿಲ್ಲ.

**ಪಟ್ಟಿ<————————————————>ಹಟ್ಟಿ**

ಪಾಡು, ಪಾಡಿ; ಪಟ್ಟಿ, ಪಟ್ಟು; ಪಟ್ಟಣ, ಪಾಟಣ, ಪಾಟಣಾ;
ಪಟ್ಟ, ಪಾಟಕ, ಪಟ್ಟಾರ ( ಪೇಠಾ );
ಪಾಡು— ಪಾಡಾ, ಪಾರಾ........
ಪಾರಾ— ಹಾರಾ, ಹಾರ, ಹರ,...........ಆರ
ಪಾಡು— ಆಡು; ಪಾಡಿ—ಆಡಿ;
ಪಾಡು— ಬಾಡು, ಬಾಡ; ಬಾಳು, ಬಾಳ;
ಪಾಡು— ವಾಡು, ವಾಡ, ವಾಡಾ, ವಾಡೆ; ವಡ, ವಡಿಗೆ
ವಾಡ— ವಾಳ, ವಳ, ವಲ
ಪಟ್ಟಿ— ಪಾಟ, ಪಾಟಿ, ವಾಟ, ವಾಟಕ; ವಾಟಿ,
ವಾಟಿಕಾ,.... ಪಠಾರ, ವಾಠಾರ;
ಪಟ್ಟಿ— ಪಾಟಿ, ಪ್ಯಾಟಿ,....ಪಾಟ, ಪಾಟಕ....ಪೇಟ,
ಪೇಟೆ; ಪೇಠ, ಪೇಠಾ, ಪಾಠಾರ (ಆರೇ),
ಪಟ್ಟಿ— ಹಟ್ಟಿ, ಪಟ್ಟ–ಹಟ್ಟ, ಪಾಟ–ಹಾಟ, ಪಾಟಕ–
ಹಾಟಕ, ಪಾಡಿ–ಹಾಡಿ, ಪಾಡು–ಹಾಡು, ಹಾಡ;
ಪಾಡು— ಪಾಳು, ಹಾಳು, ಹಾಳ....ಆಳ,....ಆಲ....
ಪಟ್ಟಿ— ಪಾಡಿ—ಪಳ್ಳಿ—ಪಾಳಿ (ಮರ್ಹಾಟಿ),..ಪಾಳ್ಯ
ಪಟ್ಟಿ— ಪಾಡಿ—ಪಳ್ಳಿ..ಹಳ್ಳಿ, ಪಲ್ಲಿ, ಪಲ್ಯ
ಪಳ್ಳಿ—ಪಳ್ಳಿ..ಓಳಿ, ಳಿ, ಲಿ....

ಪಟ್ಟಿ, ಪಾಡಿ ಎಂಬುದರಲ್ಲಿ ಅಡಕವಾಗಿರುವ ಮಾನವನ ಪ್ರಾಥಮಿಕ ಸ್ಥಿತಿದರ್ಶಕವಾದ ಅರ್ಥವು ಗ್ರಾಮವಾಚಕಗಳಾದ ಬೇರೆ ಇನ್ನಾವ ಪದಗಳಲ್ಲಿಯೂ ಇಲ್ಲ. ಪಟ್ಟಿ, ಪಾಡಿ ಎಂದರೆ ಪಟ್ಟಿರುವ ಎಡೆ. ಪಡು ಎಂದರೆ ಅನುಭವಿಸು, ಇರು; ಜೀವನದ ಸಿಹಿ, ಕಹಿಗಳನ್ನು ಅನುಭವಿಸುವ, ಇರುವ ಇಕ್ಕೆ, ನಿವಾಸವೇ ಪಟ್ಟಿ, ಪಾಡಿ; ಪಾಡು ಎಂದರೆ ಜೀವನ, ಬದುಕು, ಇರುವು; ಪಾಡು ಇದುವೆ ನಮ್ಮ ಬಾಡು ಎಂದರೆ ಊರು, ಬದುಕು. ಪಾಡು=ಬಾಡು=ಬಾಳು ಎಲ್ಲವೂ ಮೂಲದಲ್ಲಿ ಒಂದೇ.

ಪಟಿ , ಪಾಡಿ ಎಂಬುದು ನಮ್ಮ ನಾಡವರು ಹಟ್ಟಿಕಾರರಾಗಿದ್ದ

ಕಾಲದ ಬಾಳನ್ನು ಸೂಚಿಸುವುದು. 'ದಕ್ಷಿಣಾಪಥ' ಎಂಬುದು ಈ ನಾಡಿಗೆ ವೈದಿಕರ ಹೆಸರು. ಆದರೆ ಪಟ್ಟಿ ಅಥವಾ 'ಪಾಡಿ' ಎಂಬುದೇ ಈ ಭಾಗದ ನಿಜವಾದ ಪುರಾತನ ಹೆಸರೆಂದು ನನ್ನ ತಿಳುವಳಿಕೆ. 'ಕರ್ಣಾಟ' ವೆಂಬುದು ತೀರ ಅರ್ವಾಚೀನ ಕಾಲದಲ್ಲಿ ತಲೆದೋರಿದ ಪದ. ಕ್ರಿಸ್ತಾಬ್ದದ ೨-೩ನೆಯ ಶತಮಾನಕ್ಕೆ ಹಿಂದೆ ಈ ಹೆಸರು ಇನ್ನೂ ಖ್ಯಾತಿಯನ್ನು ಪಡೆದಿರಲಿಲ್ಲ. ಪಾಡಿಯು ದಕ್ಷಿಣಾಪಥದಲ್ಲಿ ಎಲ್ಲೆಡೆಗೂ ವ್ಯಾಪಿಸಿರುವುದು. ಪಾಡಿಯ ಹೆಸರು ಒಂದಿಲ್ಲೊಂದು ಬಗೆಯಲ್ಲಿ ದೊರೆಯದೆ ಇರುವ ದೇಶ-ವಿಭಾಗವೆ ದಕ್ಷಿಣಾಪಥದಲ್ಲಿ ದೊರೆಯದು. ಪಟ್ಟಿ, ಪಾಡಿ, ವಾಡಿ, ಮುಂತಾದ ಈ ಮೊದಲು ವಿವರಿಸಿದ ಒಂದಿಲ್ಲೊಂದು ಎಡೆಯು ಎಲ್ಲೆಲ್ಲೂ ಇದ್ದೇ ಇದೆ. ವರಹಟ್ಟ (ವರಾಡ), ಮರಹಟ್ಟ (ಮರಾಡ), ಕರಹಟ್ಟ (ಕರಾಡ) ಗಳು, ದಕ್ಷಿಣಾಪಥವು ಹಟ್ಟಿಯಾಗಿದ್ದಿತೆಂಬುದನ್ನೆ ಸಿದ್ಧಪಡಿಸುತ್ತವೆ. ಸಪ್ತಾರ್ಧ ಲಕ್ಷ ರಟ್ಟಪಾಡಿಯ ಪ್ರಾಚೀನ ಉಲ್ಲೇಖವುಂಟು. ನರ್ಮದೆಯಿಂದ ಕಾವೇರಿಯ ವರೆಗಣ ನಾಡೆಲ್ಲವೂ ಇದರಲ್ಲಿ ಸುಮಾರಾಗಿ ಒಳಗೊಳ್ಳುತ್ತದೆ. ಮೈಸೂರಿನ ಭಾಗವು 'ಗಂಗವಾಡಿ' ಎಂಬ ಹೆಸರಿನಿಂದ ಪ್ರಸಿದ್ಧವಾಗಿದ್ದಿತು. ಪಾಡಿ ನಾಲ್ಕು ನಾಡೆಂದು ಕೊಡಗಿನಲ್ಲುಂಟು.

ಕಥಾಸರಿತ್ ಸಾಗರದಲ್ಲಿ ನಾಸಿಕದ ತ್ರ್ಯಂಬಕೇಶ್ವರನಿಗೆ ಹಾಟಕೇಶ್ವರನೆಂಬ ಹೆಸರುಂಟು. ಇದರಂತೆ ದಕ್ಷಿಣದಲ್ಲಿ ಶ್ರೀಶೈಲದ ಮಲ್ಲೇಶ್ವರನಿಗೂ ಹಾಟಕೇಶ್ವರನೆಂಬ ಅಭಿಧಾನವಿದ್ದುದು ಬಸವ ಪುರಾಣದಿಂದ ತಿಳಿದುಬರುತ್ತದೆ. ಶ್ರೀಶೈಲದ ಮಲ್ಲಯ್ಯನು ಹಟ್ಟಿಕಾರ-ದನಗಾರರ ಆರಾಧ್ಯದೈವತವು. ಈಗಲೂ ಶಿವರಾತ್ರಿಗೆ ಅಲ್ಲಿ ನೆರೆಯುವ ಜಾತ್ರೆಯೆ ಇದಕ್ಕೆ ಸಾಕ್ಷಿ. ೧೧ನೆಯ ಶತಮಾನದ ವಿಜಾಪೂರ ಜಿಲ್ಹೆಯ ಒಂದು ಶಾಸನದಲ್ಲಿ ಆ ಭಾಗದಲ್ಲಿಯೂ ಒಂದು ಹಾಟಕೇಶ್ವರ ಕ್ಷೇತ್ರವಿದ್ದುದು ಹೇಳಿದೆ. ಹಾಟಕೇಶ್ವರನೆಂಬುದರ ಅರ್ಥವೇನು? ಹಾಟಕರ ಎಂದರೆ ಹಟ್ಟಿಕಾರರ ಈಶ್ವರನು, ಎಂದೇ ಅಲ್ಲವೆ? ಬಳ್ಳಾರಿ ಜಿಲ್ಹೆಯ ಹೊಸಪೇಟ ಮತ್ತು ರಾಯದುರ್ಗ ಭಾಗದಲ್ಲಿ ಪಟ್ಟನಾಡ ಎಲ್ಲಮ್ಮನ ಎರಡು ಹೆಸರಾದ ದೇವಸ್ಥಾನಗಳಿವೆ. ಹಾಟಕೇಶ್ವರ ಮತ್ತು ಪಟ್ಟನಾಡ ಎಲ್ಲಮ್ಮ ಈ ಕ್ಷೇತ್ರಗಳ ನಡುವಣ ನಾಡಿಗೆ ಪಟ್ಟನಾಡು, ಹಾಟಕ ಅಥವಾ ಹಟ್ಟಿ ಎಂಬ ಹೆಸರಿದ್ದಿತೆಂದೇ ಇನ್ನೊಂದು ರೀತಿಯಿಂದಲೂ ಸಿದ್ಧವಾಗುತ್ತದೆ.

ಪಾಡಿ ಅಥವಾ ಪಟ್ಟಿ ನಾಡವರಿಗೆ ಪಟ್ಟಿಗಳು, ಪಟ್ಟಿಕಾರರು ಅಥವಾ ಹಟ್ಟಿಕಾರರೆಂದು ಹೆಸರಿರುವುದು ಸ್ವಾಭಾವಿಕವಾಗಿದೆ. ಹಟ್ಟಿಕಾರರು, ತುರುಕಾರ—ದನಗಾರರೆಂದು ಹೇಳಿದರೆ ಹಟ್ಟಿ, ಪಟ್ಟಿ, ಪಾಡಿ ಶಬ್ದದ ಅರ್ಥವನ್ನೆ ಮತ್ತೆ ವಿಶದೀಕರಿಸಿದಂತಿದೆ. ಪಟ್ಟಿ (ವಾಡಿ) ಗಳೆಂದು ಜನಾಂಗವಿದ್ದುದಾಗಿ ವರಾಹಮಿಹಿರನು ಹೇಳುತ್ತಾನೆ. ಪಟ್ಟಿ ಅಥವಾ ಪತ್ತಿ ಶಬ್ದಕ್ಕೆ ಒಂದು ಜನವೆಂಬರ್ಥವನ್ನು ವೋನಿಯರ ವಿಲಿಯಂಸನು ಹೇಳಿದ್ದಾನೆ. ಉತ್ತರ ಕಂನಡದ ಗ್ಯಾಝಿಟಿಯರಿನಲ್ಲಿ. ಆ ಭಾಗದಲ್ಲಿ ಪಟ್ಟಿ (Padti) ಎಂಬ ಜನಗಳಿದ್ದು ಅವರು ಒಕ್ಕಲತನ ಮತ್ತು ದನಗಾರಿಕೆ ಮಾಡುತ್ತಿರುವುದಾಗಿ ವರ್ಣನೆಯಿದೆ. ಈ ಜನಗಳು ಹಟ್ಟಿಕಾರರೇ ಆಗಿರಬೇಕೆಂದು ನನ್ನ ಊಹೆ. ಪಾಟೀಲವೆಂದು ಈಗಲೂ ನಮ್ಮಲ್ಲಿ ಬಳಕೆಯಲ್ಲಿರುವ ಪದವು ಇದನ್ನೇ ಪುಷ್ಟೀಕರಿಸುತ್ತದೆ. ಪಾಟಿಲವೆಂಬುದರ ಮೂಲ ರೂಪವು ಪಟ್ಟಿಲವೆಂದು ಇರಬೇಕು. ಪಟ್ಟಿ ಇದುವೆ ಪಾಟಿ, ಪಾಟ ಎಂದೂ ರೂಪತಾಳುವುದನ್ನು ಈ ಮೊದಲಿನ ಪಟ್ಟಿ ಶಬ್ದದ ಬಳಗದ ವಿವರಣೆಯಲ್ಲಿ ಕಂಡುಕೊಳ್ಳಬಹುದು. ಪಟ್ಟಿ ಅಥವಾ ಪಾಟಿ ಇಲ್ಲವೆ ಪಾಟ ಶಬ್ದಕ್ಕೆ ಇಲ ಎಂಬ ಪ್ರತ್ಯಯವು ಸೇರಿ ಪಟ್ಟಿಲ—ಪಾಟಿಲವೆಂಬ ರೂಪವು ಸಿದ್ಧವಾಗುತ್ತದೆ. "ಆದರೊಳ್ ಈತಂ ವರ್ತಿಪನೆಂಬಲ್ಲಿ ಇಲ ಪ್ರತ್ಯಯಂ ಅಕ್ಕುಂ" (ಶಮದ, ೨೦೫) ಎಂದು ಇಲ ಪ್ರತ್ಯಯದ ಅರ್ಥವನ್ನು ವ್ಯಾಕರಣದಲ್ಲಿ ಹೇಳಿದೆ. ಆದಕಾರಣ ಪಟ್ಟಿಲನು ಎಂದರೆ, ಪಟ್ಟಿ (ಹಟ್ಟಿ) ಯಲ್ಲಿ ಇರತಕ್ಕವನು. ಆದಕಾರಣ ಹಟ್ಟಿಕಾರನೆಂಬುದು ಪಾಟಿಲ ಶಬ್ದದ ಪರ್ಯಾಯಪದವಾಯಿತು. ವರ್‍ಹಾಟದಲ್ಲಿ ಪಾಟೀಲರಲ್ಲಿ 'ಹಟಗಾರ' ರೆಂದು ಕೆಲವು ವರ್ಗದವರಿದ್ದುದಾಗಿ ಅಲ್ಲಿಯ ಗ್ಯಾಝಿಟಿಯರುಗಳಿಂದ ತಿಳಿದು ಬರುತ್ತದೆ. ಹಟ್ಟಿಕಾರ ಅಥವಾ ಹಟಗಾರರೆಂದರೆ ತುರುಕಾರರು, ಗೋವಳರೆಂದು ಅರ್ಥವು. ಗೋವಳ ಶಬ್ದವೇ ಗೌಳ—ಗೌಡವೆಂಬ ರೂಪತಾಳಿದುದನ್ನು ಸಿದ್ಧಪಡಿಸಬೇಕಾದ ಅವಶ್ಯವಿಲ್ಲ. ಈ ತೆರನಾಗಿ ಪಾಟಿಲ ಮತ್ತು ಗೌಡ ಎಂಬ ಶಬ್ದಗಳು ಮೂಲ ಒಂದೇ ಅರ್ಥದ ಮಾತುಗಳೆಂದು ಸಿದ್ಧವಾಗುತ್ತದೆ. ನಮ್ಮ ನಾಡಿನಲ್ಲೆಲ್ಲ ಗೌಡರಿಗೆ ಪಾಟಿಲರೆಂದೂ, ಪಾಟಿಲರಿಗೆ ಗೌಡರೆಂದೂ ಹೇಳುವ ನಡೆವಳಿಯೂ ನುಡಿವಳಿಯೂ ಎಂದಿನಿಂದಲೂ ನಡೆದುಬಂದಿದೆ.

ಕೇಶಿರಾಜನು, ಇಲ ಪ್ರತ್ಯಯಕ್ಕೆ 'ಅಲ್ಲಿ ಪಿರಿದುಂ ವರ್ತಿಪ' ನೆಂಬಲ್ಲಿ ಗಾವಿಲ ಎಂಬ ಒಂದೇ ಉದಾಹರಣವನ್ನು ಶಬ್ದ-ಮಣಿ-ದರ್ಪಣದಲ್ಲಿ ಕೊಟ್ಟಿದ್ದಾನೆ. ಪಟ್ಟೀಲ ಅಥವಾ ಪಾಟಿಲವೆಂಬುದನ್ನು ಅಲ್ಲಿ ಹೇಳಿಲ್ಲ. ಆದಕಾರಣ ಪಾಟಿಲ (ಪಟ್ಟೀಲ) ಶಬ್ದದ ವ್ಯುತ್ಪತ್ತಿಯನ್ನು ಒಪ್ಪಿಕೊಳ್ಳಲು ಬಲ್ಲಿದರಿಗೆ ಕೆಲರಿಗೆ ತುಂಬ ಇತಿಮಿತಿ! ಹಿಂದಿನ ಪುಸ್ತಕಗಳಲ್ಲಿ ಹೇಳದೆ ಇದ್ದುದನ್ನು ಇಂದಿನವರ ಮಾತಿನ ಮೇಲೆಯೆ ನಂಬಿ ಅಹುದೆಂದು ಸ್ವೀಕರಿಸುವುದು ಹೇಗೆ? ಹಟ್ಟಿಕಾರರು ಅಥವಾ ಕರ್ಣಾಟದ ವೀರ ಕ್ಷತ್ರಿಯರು ಎಂಬ ಪುಸ್ತಕದಲ್ಲಿ ೧೨ ವರುಷಗಳ ಹಿಂದೆಯೆ ಈ ವ್ಯುತ್ಪತ್ತಿಯನ್ನು ವಿವರಿಸಿದಾಗ 'ಇದಕ್ಕೆ ಬೇರೆ ಪ್ರಮಾಣಗಳು ಏನಾದರೂ ಉಂಟೆ?' ಎಂದು ಕೆಲವು ಮಿತ್ರರು ಕೇಳಿದ್ದರು. ಗಾವ (ಗ್ರಾಮ) ದಲ್ಲಿ ಇರುವವನು ಎಂಬರ್ಥದಲ್ಲಿ 'ಗಾವಿಲ' ಹೇಗೆ ಆಗುವುದೊ ಹಾಗೆಯೆ ಪಟ್ಟಿಯಲ್ಲಿ ಇರುವವನು ಎಂಬರ್ಥದಲ್ಲಿ 'ಪಟ್ಟೀಲ (ಪಾಟಿಲ)' ಎಂದಾಗುವುದು ಎಂದು ಈ ವರೆಗೆ ನನ್ನ ಉತ್ತರವಿದ್ದಿತು. ಕಲಕತ್ತಾ ವಿಶ್ವವಿದ್ಯಾನಿಲಯದಲ್ಲಿ ಪ್ರಾಕೃತದ ಪ್ರಾಧ್ಯಾಪಕರಾದ ಪಂಡಿತ ಶೇಠರ 'ಪಾಇಅ-ಸದ್ದ-ಮಹಣ್ಣವೋ' ಎಂಬ ಪ್ರಾಕೃತ ಕೋಶವು ದೊರೆತ ಬಳಿಕ ಅದರಲ್ಲಿಯೂ ಇದೇ ಬಗೆಯಾಗಿ ಇದರ ನಿರುಕ್ತವನ್ನು ಹೇಳಿದ್ದಾಗಿದೆಯೆಂದು ಕಂಡುಬಂದಿತು. ಅದರಿಂದ ನನ್ನ ಮತವನ್ನು ಇನ್ನೂ ಹೆಚ್ಚು ದೃಢವಾಗಿ ಈಗ ಹೇಳಲು ಶಕ್ಯವಾಗಿದೆ. 'ಪಟ್ಟಇಲ್ಲ' (ಪುಲ್ಲಿಂಗ, ದೇಶೀನಾಮ,) ಪಟೀಲ, ಗ್ರಾಮ ಮುಖ್ಯ, ಎಂದು ಅದರಲ್ಲಿ ಅರ್ಥ ಹೇಳಿದೆ. ಮತ್ತು 'ಜಂಬೂದ್ವೀಪ ಪ್ರಜ್ಞಪ್ತಿ' ಹಾಗೂ 'ಸುಪಾಸನಾಹ ಚರಿಅ' ಎಂಬ ಎರಡು ಗ್ರಂಥಗಳಲ್ಲಿ ಅದು ಬಂದಿರುವುದಾಗಿ ಆಧಾರವನ್ನೂ ಅಲ್ಲಿ ಕೊಟ್ಟಿದೆ.

ಕೆಲರಿಗೆ ಇನ್ನೊಂದು ಸಂದೇಹವುಂಟಾಗಬಹುದು. 'ಪಟ್ಟ ಇಲ್ಲ' ಅಥವಾ ಪಟ್ಟೀಲ—ಪಾಟಿಲ ವೆಂಬುದು ಗ್ರಾಮಾಧಿಕಾರಿಯೆಂಬರ್ಥದಲ್ಲಿದೆಯೆ ಹೊರತು ಗ್ರಾಮದಲ್ಲಿ ಇರುವವ ಎಂಬರ್ಥವನ್ನು ಅಲ್ಲಿ ಹೇಳಿಲ್ಲ. ಗೌಡ ಅಥವಾ ಪಟ್ಟೀಲವೆಂಬುದು ಈಗ ಹೆಚ್ಚಾಗಿ ಗ್ರಾಮಾಧಿಕಾರಿಯೆಂಬರ್ಥದಲ್ಲಿರುವುದೂ ನಿಜ. ಆದರೆ ನಮ್ಮ ಹಳ್ಳಿಗರ ಪರಿಚಯವಿದ್ದವರಿಗೆ ಈ ಸಂದೇಹವು ಹೆಚ್ಚು ಹೊತ್ತು ಉಳಿಯಲಾರದು. ಏಕೆಂದರೆ ಅಲ್ಲಿ ಗೌಡ

ಅಥವಾ ಪಾಟಿಲ ಎಂಬ ಒಂದು ವ್ಯಕ್ತಿಯಿಲ್ಲ, ಜನ ಇದ್ದುದೂ ಕಂಡು ಬರುತ್ತದೆ. ಗೌಡ ಅಥವಾ ಪಾಟಿಲವೆಂಬುದು ಕೇವಲ ಅಧಿಕಾರವಾಚಕ ಪದವು ಮಾತ್ರವಲ್ಲ. ಗೋವೆಯ ಪ್ರಾಂತದಲ್ಲಿ 'ಗಾವಡಾ' ಎಂಬ ಒಕ್ಕಲರ ಜಾತಿಯೆ ಇದೆ. ಕನ್ನಡ ಜಿಲ್ಹೆ, ಮೈಸೂರ ಸಂಸ್ಥಾನದಲ್ಲೂ ಗೌಡ ಜನ ಉಂಟು. ಮೂಲದಲ್ಲಿ ಇದು ಒಂದು ಜನವಾಚಕ ಪದವಿದ್ದು ಬಳಿಕ ಆ ಜನಗಳಲ್ಲಿಯೆ ಒಬ್ಬರು ಗ್ರಾಮಾಧಿಕಾರಿಗಳಾಗಿ ಇರುವ ರೂಢಿಯಿದ್ದುದರಿಂದ ಅದಕ್ಕೆ ಅಧಿಕಾರಿಯೆಂಬ ಅರ್ಥವು ಪ್ರಾಪ್ತವಾಗಿದೆ. ನಮ್ಮಲ್ಲಿ 'ಸಾಬರು' ಎಂದು ಮುಸಲ್ಮಾನರಿಗೆ ಹೇಳುವ ವಾಡಿಕೆ. ಒಂದು ಕಾಲಕ್ಕೆ ಇವರೇ ಮುಖ್ಯಾಧಿಕಾರಿಗಳಾಗಿರುತ್ತಿದ್ದುದರಿಂದ ಸಾಹೇಬವೆಂಬ ಪದವು ಹೆಚ್ಚಿನ ಅಧಿಕಾರಿ ಎಂಬ ವಿಶೇಷಾರ್ಥವನ್ನು ಹೊಂದಿತು. ಇಂದು ಸಾಬರಲ್ಲದವರು—ಎಂದರೆ ಭಿನ್ನ ಜಾತಿಯವರಾಗಿದ್ದರೂ ಅವರು ಸಾಹೇಬರಾಗಬಲ್ಲರು! ಪಾಟಿಲ ಅಥವಾ ಗೌಡ ಎಂಬುದೂ ಹೀಗೆಯೆ ಇದೆ.

ಈ ನಾಡ ಮೊದಲಿಗರಾದ 'ಪಟ್ಟಿ' ಗಳು ಯಾರು? ಎಂಬುದನ್ನು ನಿರ್ಧರಿಸಿಕೊಳ್ಳಲು ಬಹಳ ದೂರ ಹೋಗಬೇಕಾಗಿಲ್ಲ. ಬಹಳ ಶ್ರಮಪಡುವ ಅವಶ್ಯಕತೆಯಿಲ್ಲ. ಪಟ್ಟಿಯಲ್ಲಿ ಇರುವವರು ಪಟ್ಟಿಗಳು, ಇವರೆ ಪಟ್ಟಿಲರು, ಇವರೆ ಹಟ್ಟಿಕಾರ ಗೌಳರು. ನಮ್ಮ ನಾಡಿನ ಪೂರ್ವ ಪರಂಪರಾಗತ ಪಾಟಿಲ ಅಥವಾ ಗೌಡರ ಮನೆತನಗಳನ್ನು ವಿಚಾರಿಸಿದರೆ ಆ ಪುರಾತನ ಪೀಳಿಗೆಯು ಎಂದಿನಿಂದಲೂ ಅಖಂಡವಾಗಿ ಈ ವರೆಗೆ ನಡೆದು ಬಂದುದನ್ನು ಮನಗಾಣಬಹುದು. ಇವರೊಳಗಿಂದಲೆ ನಮ್ಮ ಪುರಾತನ ಅರಸುಮನೆತನಗಳು ತಲೆಯೆತ್ತಿದುವು. ಗೌಳ— ಗೋಪನೆಂದು ರಾಜನಿಗೆ ಹೆಸರು. ಗೌಡರು, ನಾಡಗೌಡರೆ ರಾಷ್ಟ್ರಿಕರು, ರಾಷ್ಟ್ರಪತಿಗಳಾಗಿದ್ದುದನ್ನು ಇತಿಹಾಸವು ಹೇಳುತ್ತದೆ. ಗೌಡ ಅಥವಾ ಪಾಟಿಲರು ಇಂದು ಕೆಲರು ಬ್ರಾಹ್ಮಣರಿರಬಹುದು. ಆದರೆ ನಿಜವಾದ ಗೌಡ ಅಥವಾ ಪಟ್ಟಿಲರ ಮೂಲ ಮನೆತನಗಳು ಬ್ರಾಹ್ಮಣರವಲ್ಲವೆಂಬುದನ್ನು ನಮ್ಮ ನಾಡಿನ ಪೂರ್ವಪರಂಪರೆಯನ್ನರಿತವರಿಗೆ ಬೇರೆ ಹೇಳಬೇಕಾಗಿಲ್ಲ. ಇವರು, ಈಗ ಜೈನ ವೀರಶೈವಾದಿ ಧರ್ಮಗಳ ಹೆಸರಿನಲ್ಲಿ ಅಥವಾ ದೇಶ ವಿಭಾಗಗಳಿಂದ ಸಂಬಂಧ ಸಂಪರ್ಕವು ತಪ್ಪಿ, ಒಬ್ಬರಿಂದೊಬ್ಬರು ಬೇರೆಯೆನಿಸುತ್ತಿರಬಹುದು. ಆದರೆ ವಂಶಪರಂ

ಪರಾಗತವಾದ ಪಟ್ಟೆಲ ಅಥವಾ ಗೌಡರ ಮನೆತನಗಳೆಲ್ಲ ಮೂಲಹಳ್ಳಿ ಒಂದೆ ಬುಡಕಟ್ಟಿನವು; ಅಂದಿನ ಅವರೆ ನಮ್ಮ ಪಾಡಿಯ ಮೊದಲಿಗರು; ನಮ್ಮ ನಾಡಿನ ಮೂಲ ಜನ.

ಗೌಡ ಮತ್ತು ಪಟ್ಟೇಲ ಶಬ್ದಗಳು ನಮ್ಮ ನಾಡವರ ಪೂರ್ವ ಚರಿತೆಯನ್ನು ಹೇಳಲು ಸಿದ್ಧವಿದ್ದೂ ನಮ್ಮ ಸಂಶೋಧಕರು ಈ ವರೆಗೆ ಅತ್ತ ಕಿವಿಗೊಡದೆ ಇದ್ದುದು ಸೋಜಿಗ! ಕಲ್ಬರೆಹಗಳಲ್ಲಿ ಬರೆದುದಷ್ಟೆ ಇತಿಹಾಸವೆಂದು ನೆರೆ ನಂಬಿದ ವಿದ್ವಾಂಸರೂ ಪುಸ್ತಕಗಳಲ್ಲಿ ಬರೆದುದರ ಹೊರತಾಗಿ ಉಳಿದುದೆಲ್ಲ ಸುಳ್ಳು ಎಂಬ ಗ್ರಹಿಕೆಯ ಪಂಡಿತರೂ ಇನ್ನುಳಿದ ದಿಕ್ಕಿನಿಂದ ಬರುವ ಬೆಳಕಿಗೆ ಎರವಾಗುತ್ತಾರೆ. ಬೆಳಕು ಯಾವ ಬದಿಯಿಂದ ಬಂದರೂ ಅದು ಸ್ವಾಗತಾರ್ಹವೇ. ಬರೆದ ಸಂಗತಿಗಳ ಮೇಲೆ ಕೈಯೂರಿಕೊಂಡು ಕುಳಿತು ಜೀವನದಲ್ಲಿ ಕಾಣುವ, ಕೇಳಬರುವ ಪ್ರತ್ಯಕ್ಷ ವಿಷಯಗಳನ್ನು ಕಡೆಗಣಿಸುವುದು ವಿಚಾರಿಗಳಿಗೆ ಒಪ್ಪದ ಮಾತು. ಸತ್ಯವನ್ನು ಅರಿಯಲು ಪುಸ್ತಕ ಮತ್ತು ಪ್ರತ್ಯಕ್ಷ ಎರಡರ ಸಹಾಯವನ್ನು ಪಡೆಯಬೇಕು. ಇವುಗಳಲ್ಲಿ ಯಾವುದೊಂದನ್ನೇ ಆಧಾರವಾಗಿಟ್ಟುಕೊಳ್ಳುವುದರಿಂದ ಸತ್ಯಸಂಶೋಧನದಲ್ಲಿ ಪ್ರಗತಿಯಾಗದು. 'ಗೇರಸೊಪ್ಪೆಯ ಜೋಗದ ಜಲಪಾತವು ಪಂಪನ ಕಾಲದಲ್ಲಿಯೂ ಇದ್ದುದಾಗಿದ್ದರೆ, ಬನವಾಸಿ ದೇಶವನ್ನು ಬಣ್ಣಿಸಿದ ಆ ಮಹಾಕವಿಯು ಇಂತಹ ಅದ್ಭುತ ಸೌಂದರ್ಯವನ್ನು ಹೇಗೆ ತಾನೆ ಕಡೆಗಣಿಸಿ ತೀರ ಮರೆತು ಬಿಟ್ಟಾನು? ಪಂಪನಷ್ಟೆ ಅಲ್ಲ, ಕನ್ನಾಡ ಬೇರೆ ಯಾವ ಮಹಾಕವಿಯಾಗಲಿ ಇದನ್ನು ಉಲ್ಲೇಖಿಸಿಲ್ಲ. ಆದಕಾರಣ ಆ ಕಾಲದಲ್ಲಿ ಈ ಜಲಪಾತವೇ ಇರಲಿಲ್ಲ. ಇದು ಇತ್ತೀಚೆಗೆ ಆಗಿದೆ' ಎಂದು ಪುಸ್ತಕಗಳ ಕೈಯಲ್ಲಿಯೆ ತನ್ನ ವಿಚಾರ, ವ್ಯವಹಾರ-ಬುದ್ಧಿಗಳನ್ನೆಲ್ಲ ಒಪ್ಪಿಸಿದ ವಿದ್ವಾಂಸನು ಪ್ರತಿಪಾದಿಸಿದರೆ ನಾವು ಸೋಜಿಗಗೊಳ್ಳಬೇಕಾದುದಿಲ್ಲ. ಪಟ್ಟೇಲ ಶಬ್ದವು ನಮ್ಮ ಸಾಹಿತ್ಯ ಶಾಸನಾದಿಗಳಲ್ಲಿ ಎಲ್ಲಿಯೂ ಬಂದಿಲ್ಲ. ಆದಕಾರಣ ಇದು ನಮ್ಮ ಭಾಷೆಯ ಶಬ್ದವೇ ಅಲ್ಲ; ಮರ್ಹಾಟಿಯ ಮಾತು ಎಂದು ಭ್ರಾಂತಿ ಪಟ್ಟುಕೊಂಡವರು ಬೇಕಾದಷ್ಟು ಜನಗಳಿದ್ದಾರೆ. ಅತ್ತ ಮರ್ಹಾಟಿಗರಿಗೂ ಈ ಮಾತಿನ ಅರ್ಥವು ತಿಳಿಯದೆ ಒದ್ದಾಡುತ್ತಿದ್ದಾರೆ! ಮಹಾರಾಷ್ಟ್ರ ಶಬ್ದಕೋಶವು ಪಾಟೀಲ ಶಬ್ದಕ್ಕೆ 'ಪಟ್ಟಕೀಲ' ಎಂದು

ಏನೋ ಒಂದು ವ್ಯುತ್ಪತ್ತಿಯನ್ನು ಹೇಳಿದ್ದೇ ಇದಕ್ಕೆ ಸಾಕ್ಷಿ 'ಪಟ್ಟಕೀಲ' ವೆಂಬ ಸಂಸ್ಕೃತ ಪದದಿಂದ ಇದು ಬಂದಿತೆಂದು ಹೇಳುವುದಾದರೆ, ಮೊದಲು ಸಂಸ್ಕೃತ ಭಾಷೆಯಲ್ಲಾದರೂ ಇಂತಹ ಪದಪ್ರಯೋಗವಿದ್ದ ಉದಾಹರಣ ಗಳು ದೊರೆಯಬೇಕಲ್ಲವೆ ?

ಗೌಡಶಬ್ದದ ವಿಚಾರದಲ್ಲೂ ಹೀಗೆಯೆ ದಿಗ್ಭ್ರಾಂತಿಯುಂಟಾಗಿದೆ. ನಮ್ಮ ಶಾಸನಗಳಲ್ಲಿ ಇದು ಕಾಣಿಸಿಕೊಂಬ ರೀತಿಯೇ ಬೇರೆ. ಗಾಮುಂಡ. ಗಾವುಂಡ ಎಂಬ ತೆರನಾದ ರೂಪಗಳು ಪ್ರಾಚೀನ ಶಾಸನಗಳಲ್ಲಿವೆ; ಗಾಮುಂಡ–ಗಾವುಂಡ–ಗವುಡ ಬಳಿಕ ಗೌಡ ಎಂದು ಈಗಿನ ರೂಪವೆಂಬು ದಾಗಿ ಹಲವರ ಗ್ರಹಿಕೆಯಿದೆ. ಆದರೆ ಇದೆಲ್ಲವೂ ಸರಿಯಾಗಿ ತಿರುವು ಮುರುವಾಗಿದೆಯೆಂದು ನನ್ನ ತಿಳುವಳಿಕೆ. ಮೂಲ ಉಚ್ಚಾರವೆ ಗೌಡ ವೆಂದಿದ್ದು ಶಾಸನಗಳನ್ನು ಬರೆದ ಕಾಲದ ಸುಮಾರಿಗೆ ಗೌಡ(ಳ)ರ ಆ ಆ ಪುರಾತನ ಪರಂಪರೆಯ ಅರ್ಥವು ಜನಗಳಲ್ಲಿ ಮರೆತು ಹೋಗಿದ್ದಿತು. ಗೌಡರು ಗ್ರಾಮಾಧಿಕಾರಿಗಳಾಗಿಯೂ ಇರುತ್ತಿದ್ದುದರಿಂದ ಗೌಡ ಶಬ್ದಕ್ಕೂ ಗ್ರಾಮಾಧಿಕಾರಕ್ಕೂ ತಳಕುಹಾಕಿದರು. ಗ್ರಾಮಾಧಿಕಾರಿಯೆಂಬ ಅರ್ಥವನ್ನೆ ಮುಖ್ಯವಾಗಿ ಕಣ್ಣೆದುರಿಗೆ ಇಟ್ಟುಕೊಂಡು 'ಗೌಡ' ಎಂಬ ರೂಢ ಶಬ್ದಕ್ಕೆ ನಿರುಕ್ತವನ್ನು ಹೇಳಹೋಗಿ, ಅದುಗ್ರಾಮ ಶಬ್ದಕ್ಕೆ ಸಂಬಂದ ಪಟ್ಟರಲಿಕ್ಕೆ ಬೇಕೆಂಬ ತರ್ಕಸರಣಿಯ ಸುಳಿಯಲ್ಲಿ ಸಿಕ್ಕುಬಿದ್ದಿರಲಿಕ್ಕೆ ಬೇಕು. ಈ ದೃಷ್ಟಿಯಿಂದ ಗೌಡ ಶಬ್ದವನ್ನು ಗ್ರಾಮಪದಕ್ಕೆ ಹತ್ತಿರ ಬರುವಂತೆ ತಿದ್ದಿ ಕೊಂಡರೆಂದು ಊಹಿಸಬೇಕಾಗುತ್ತದೆ. ಹೀಗಾಗಿ ಮೂಲ ಗೌಡ ಶಬ್ದವು ಪ್ರೌಢರ ಶಾಸನಾದಿ ಲೇಖನಗಳಲ್ಲಿ ಕೆಲಕಾಲ ಗಾಮುಂಡ, ಗಾವುಂಡ, ಗವುಡ ಎಂಬ ರೂಪತಾಳಿದರೂ ಮತ್ತೆ ಜನರು ಬಳಕೆಯಲ್ಲಿ 'ಗೌಡ' ಎಂಬ ತನ್ನ ಮೊದಲಿನ ರೂಪದಲ್ಲಿಯೆ ಈಗಲೂ ಉಳಿದುಕೊಂಡಿದ್ದುದು ಕಂಡು ಬರುತ್ತದೆ.

ಗೌಡವು ಗಾಮುಂಡವಾಗುವುದಕ್ಕೆ ಇನ್ನೂ ಒಂದು ಕಾರಣವಿರ ಬಹುದಾಗಿದೆ. ಗೌಳರ ಹಲವು ಪಂಗಡಗಳು ದನಗಾರಿಕೆಯಿಂದ ಕ್ರಮ ವಾಗಿ ಸಾಮಾಜಿಕ ಪ್ರಗತಿಪಥದಲ್ಲಿ ಮುಂದುವರಿದುವು. ಗ್ರಾಮಾಧಿಕಾರಿ ಗಳೂ, ಪ್ರಾಂತಾಧಿಕಾರಿಗಳೂ, ರಾಜ್ಯಾಧಿಕಾರಿಗಳೂ ಹಲವರಾದರು.

ಆದರಿಂದ ಗೋವಳರಾದ ಗೌಡರಿಗೂ ಗ್ರಾಮಾಧಿಕಾರಿಗಳಾಗಿ ಸಾಮಾಜಿಕ ಮೇಲ್ಮಟ್ಟದಲ್ಲಿ ಹೋದ ಮನೆತನಗಳ ಗೌಡರಿಗೂ ಭೇದವನ್ನು ಸ್ಪಷ್ಟಪಡಿಸುವ ಅವಶ್ಯಕತೆಯುಂಟಾಗಿರುವುದು ಸಹಜ. ಇಲ್ಲವಾದರೆ ಮಾತಿನಲ್ಲಿ ಗೌಡಪದವು ಸಂದಿಗ್ಧಾರ್ಥಕ್ಕೆ ಕಾರಣವಾಗುತ್ತದೆ. ಅರ್ಥವ್ಯತ್ಯಾಸಕ್ಕಾಗಿ ಒಂದೇ ಶಬ್ದವು ಎರಡೂ ರೂಪದಲ್ಲಿ ವ್ಯವಹರಿಸುವುದು ಎಲ್ಲ ಭಾಷೆಗಳಲ್ಲಿಯೂ ವಾಡಿಕೆಯಾಗಿದೆ. ಪಡೆ–ಹಡೆ; ಪುಡಿ–ಹುಡಿ; ಹಾಲು ಮತ್ತು ಹಾಲಾ ಮುಂತಾದುವು ಇದಕ್ಕೆ ನಿದರ್ಶನ.

ತಮ್ಮ ಪಾಂಡಿತ್ಯದ ಜೋರಿನಲ್ಲಿ ಸಹಜ ಶಬ್ದಗಳನ್ನು ತಿದ್ದಿ ಗ್ರಂಥಗಳಲ್ಲಿ ಬರೆದರೂ ಅವು ತಮ್ಮ ಮೂಲದಿಂದ ಕದಲದೆ ಇದ್ದುದನ್ನು ಇನ್ನೂ ಹಲವು ಉದಾಹರಣಗಳಲ್ಲಿ ಕಂಡುಕೊಳ್ಳಬಹುದಾಗಿದೆ. ಸಂಸ್ಕೃತದಂತೆ ಕಂನುಡಿಯಲ್ಲಿಯೂ ಪಂಚಮೀ ವಿಭಕ್ತಿಯನ್ನು ನಿರ್ಮಿಸಿಕೊಳ್ಳಬೇಕೆಂದು 'ಅತ್ತಣ್' ಎಂದು ಹೊಸದಾಗಿ ಸೇರಿಸಿಕೊಂಡುದು ಕೆಲಕಾಲ ಪ್ರೌಢ ಗ್ರಂಥಗಳಲ್ಲಿ ಮಾತ್ರ ಉಳಿದಿತು. ಜನರ ಬಳಕೆಯಲ್ಲಿ ಮತ್ತೆ ಮೊದಲಿನ 'ಇಂದ' ಎಂಬುದಷ್ಟೆ! ಪಾಂಡಿತ್ಯವು ಹಲವು ಬಾರಿ ಕೃತ್ರಿಮತೆಗೆ, ಅಸ್ವಾಭಾವಿಕತೆಗೆ ಕಾರಣವಾಗುತ್ತದೆ. ಹಲವು ಬಾರಿ ಪಾಂಡಿತ್ಯದ ತಿದ್ದುಪಾಡಿನಿಂದ ಮೂಲಾರ್ಥವೂ ಸಹಜತೆಯೂ ಮಾಸಿಹೋಗುತ್ತವೆ. ಆದಕಾರಣ ಭಾಷೆಯೊಳಗಿನ ಅನೇಕ ಶಬ್ದಗಳ ವ್ಯುತ್ಪತ್ತಿಯನ್ನು ಕಂಡುಹಿಡಿಯಲು, ಸಾಹಿತ್ಯದೊಳಗಿನ ಗ್ರಂಥಸ್ಥರೂಪಗಳಿಗಿಂತಲೂ ಲೋಕವ್ಯವಹಾರದೊಳಗಣ ವಾಡಿಕೆಯ ಮಾತುಗಳೇ ಇಂತಹ ಸಂದರ್ಭದಲ್ಲಿ ಹೆಚ್ಚು ಸಹಾಯಕವಾಗಿರುತ್ತವೆ. ಏಕೆಂದರೆ ಅವೇ ಮೂಲರೂಪಕ್ಕೆ ಹೆಚ್ಚು ಹತ್ತಿರ ಹತ್ತಿರದಲ್ಲಿರುತ್ತವೆ. 'ಪೇಟೆ' ಎಂಬ ಶಬ್ದದ ರೂಪಸಿದ್ಧಿಯನ್ನು ಪೇಠ, ಅಥವಾ ಪೇ(ಂ)ಠ, ಪೇಂಟೆ, ಪೇಟ, ಪೇಟಾ ಇವಾವ ಉಚ್ಚಾರಗಳಿಂದಲೂ ಕಂಡುಹಿಡಿಯುವುದು ಸಾಧ್ಯವಿಲ್ಲ. ಕಿಟ್ಟೆಲ್ಲರು ಇದು ಪರಭಾಷೆಯ ಪದವೆಂದು ಗ್ರಹಿಸಿದ್ದಾರೆ. ತಮಿಳಿನಲ್ಲಿ ಪೇಟ್ಟೈ ಎಂಬ ರೂಪವಿದೆ. ತಮಿಳ ಕೋಶಕಾರರು ಅದು ಆರಿಯ ಮಾತಿನಿಂದ ಬಂದಿತೆಂದು ಭ್ರಮಿಸಿದ್ದಾರೆ, ಪೇಟಕ ಪೇಠದಿಂದ ಪೇಟ್ಟೈ, ಪೇಟೆ ಎಂದು ಅವರ ಗ್ರಹಿಕೆ. ತೆಲುಗಿನಲ್ಲಿ ಪೇಂಟ ಎಂದು ರೂಪವಿದೆ. ಇದು ಮರ್‍ಹಾಟಿಯಂತೆ ಅನುಚ್ಚಾರಿತ ಅನುಸ್ವಾರ

ವಿರಬೇಕು. ಮರಾಠಿ ಪೇಠ; ಸಿಂಧೀ ಪೇಠೋ; ಪೇಠಿ; ಗುಜರಾತಿ ಪೇಠೂ; ಬಂಗಾಲಿ, ಪೈಠಾ; ನೇಪಾಳ ಪೈಠಾರಿ ಇತ್ಯಾದಿಯಾಗಿ ಉತ್ತರದ ಭಾಷೆಗಳಲ್ಲಿ ಇದು ರೂಪತಾಳಿದೆ. ಮರ್ಹಾಟಿ ಶಬ್ದಕೋಶಕಾರರು ಇದನ್ನು 'ಪೀಠ' ಎಂಬ ಸಂಸ್ಕೃತದಿಂದ ಬಂದುದಾಗಿ ಗ್ರಹಿಸಿದ್ದಾರೆ. ಸಬಕೀ ಬೋಲಿ ಎಂಬ ಹಿಂದೀ ಕೋಶಕಾರರು 'ಪ್ರವಿಷ್ಟ' ಎಂಬ ಸಂಸ್ಕೃತಪದದಿಂದ ನಿಷ್ಪನ್ನ ಶಬ್ದವೆಂದು ಸೂಚಿಸಿದ್ದಾರೆ.

ಹಳೆ ಮರ್ಹಾಟಿಯಲ್ಲಿ ಪೇಠ ಎಂಬ ಪ್ರಯೋಗವಿಲ್ಲ. ಜ್ಞಾನೇಶ್ವರಿ (೧೨೯೬ ಕ್ರಿ. ಶ.) ಗ್ರಂಥದಲ್ಲಿ 'ಪೇಟಾ' ಎಂಬ ಪ್ರಯೋಗವು ಸಿಕ್ಕುವುದು. ಅಲ್ಲಿ ಪೇಟಾ, ಪೇಟೆಗೆ ಇರುವ ಅರ್ಥವು ಸಂತೆ ಎಂದೇ ಇದೆ. ಸಂತೆ-ಪೇಟೆ ಎಂಬ ಜೋಡು-ನುಡಿ ನಮ್ಮಲ್ಲುಂಟು. ಮರ್ಹಾಟಿಯಲ್ಲಿ ಹಾಟ ಎಂಬ ಒಂದು ಪದವು ಪೇಟೆ ಎಂಬರ್ಥದಲ್ಲುಂಟು; 'ಬಾಜಾರ-ಹಾಟ' 'ಹಾಟ-ವಟಿ' ಎಂಬುವು ಸಂತೆ-ಪೇಟೆ ಎಂಬರ್ಥದ ಜೋಡುನುಡಿಗಳು ಮರ್ಹಾಟಿಯಲ್ಲಿ. ಹಾಟ, ಹಟ್ಟ, ಹಟ್ಟಿ ಎಂಬುದನ್ನು ಪಾಟ, ಪಟ್ಟ, ಪಟ್ಟಿ ಎಂಬೀ ರೀತಿಯಾಗಿ ಮೂಲಕ್ಕೆ ತಿರುಗಿಸಿಕೊಂಡರೆ ಇದರ ನಿಜ ಸ್ವರೂಪದ ಮೇಲೆ ಚೆನ್ನಾಗಿಯೆ ಬೆಳಕು ಬೀಳುವುದು. ಪಾಟ ಎಂಬುದೇ ಪೇಟ, ಪೇಟೆ ಎಂದು ಮುಂದೆ ಬಳಕೆಯಲ್ಲಿ ಬಂದಿತೆಂದು ನಿಶ್ಚಿತವಾಗುತ್ತದೆ. 'ಸಾಂತಿ-ಪಾಟಕ' ಎಂಬ ಒಂದು ಊರು ಬಂಗಾಳದಲ್ಲಿ ಉಂಟು. ಹಾಟೆ-ಪೇಟಾವೆಂಬ ಊರು ವಿಶಾಖಾಪಟ್ಟಂ ಜಿಲ್ಲೆಯಲ್ಲಿದೆ 'ಹಾಟ-ವಟಿ' ಎಂಬ ಪ್ರಯೋಗವು ಮರ್ಹಾಟಿ ಆದಿಗ್ರಂಥಕಾರರಾದ ಮಹಾನುಭಾವರ ಲೇಖನದಲ್ಲಿ (೧೩ನೆಯ ಶತಮಾನ) ದೊರೆಯುತ್ತದೆ. ಇದರೊಳಗಣ 'ವಟಿ'ಯು ಪಟ್ಟಿಯ ಇನ್ನೊಂದು ರೂಪವಾಗಿದೆ, ಹಳೆಯ ಪ್ರಯೋಗಗಳ ಆಧಾರದಿಂದ ಇಷ್ಟೆಲ್ಲ ಸುತ್ತಾಡಿ ಮಾಡುವ ನಿರ್ಣಯವನ್ನೇ ಕಂನಾಡಿನ ಹಳ್ಳಿಗರ ಬಾಯಲ್ಲಿರುವ 'ಪ್ಯಾಟಿ' ಎಂಬ ಪ್ರಯೋಗವೂ ಸ್ಪಷ್ಟೀಕರಿಸುತ್ತದೆ. ಸುಸಂಸ್ಕೃತ ವಿದ್ವಾಂಸರ ತಿದ್ದಿದ ಪೇಟೆ ಎಂಬ ಮಾತಿಗಿಂತಲೂ ಹಳ್ಳಿಗರ ಪ್ಯಾಟಿಯೇ ಪಾಟಿಗೆ ಹತ್ತಿರದ್ದಾಗಿದೆ!

ವೇದದಲ್ಲಿ 'ವಂಕು' ಎಂಬ ಒಂದು ಪದವು ಬರುತ್ತದೆ. ಮುಂದಿನ ಕಾಲದ ಸಂಸ್ಕೃತದಲ್ಲಿ 'ವಕ್ರ' ಎಂಬ ಆದರ ಸುಸಂಸ್ಕೃತ ರೂಪವು

ಎಲ್ಲೆಲ್ಲೂ ಪ್ರತಿಷ್ಠೆಯನ್ನು ಹೊಂದುವುದು ಆದರೆ ಇಂದಿನ ಆರ್ಯಭಾಷಾ ವರ್ಗದಲ್ಲಿ ಅದು ಮತ್ತೆ 'ಬಾಂಕ' 'ವಾಂಕ' ಎಂದು 'ಒಂಕು' ಎಂಬುದಕ್ಕೆ ಹತ್ತಿರವೆ ಬಂದು ನಿಂತುದನ್ನು ಕಾಣಬಹುದು.

ಇದು ಎಲ್ಲ ಶಬ್ದಗಳಿಗೂ ಸರಿಹೋಗುವ ನಿತ್ಯಸಿಯಮವಾಗಿರದಿದ್ದರೂ ಎಷ್ಟೋ ಕಡೆಗಳಲ್ಲಿ ಮೂಲರೂಪವನ್ನು ಅರಿತುಕೊಳ್ಳಲು ಒಳ್ಳೆ ಸಹಾಯಕ ವಾಗಿದೆ. ಗೌಡ ಶಬ್ದದ ರೂಪಸಿದ್ಧಿಯು ಇದರಿಂದ ಸುಸ್ಪಷ್ಟವಾಗುವುದು. ಗಾವುಂಡ, ಗಾವುಂಡಗಳಿಂದ ಅದರ ರೂಪಸಿದ್ಧಿಯು ಏನೊ ತಿಳಿಯದು.

ಗಾವುಂಡವು ಯಾವ ಭಾಷೆಯ ಪದ? ಸಂಸ್ಕೃತವೆನ್ನಬೇಕೆ? ಸಂಸ್ಕೃತ ಕೋಶಗಳಲ್ಲಿಯೆ ಗಾವುಂಡಕ್ಕೆ ಸಮೀಪದ ರೂಪಗಳೂ ಅವು ಗಳಿಗೆ ಪ್ರಯೋಗಗಳೂ ಸಿಕ್ಕುವುದಿಲ್ಲ. ಗಾವುಂಡ ಎಂಬುದನ್ನು ಯಾವು ದೋಂದು ಶಬ್ದದ ತದ್ಭವವೆಂದು ಸಾಧಿಸುವ ಸಾಹಸವನ್ನು ಕೇಶಿರಾಜನೂ ಮಾಡಿದಂತಿಲ್ಲ. ಗಾವುಂಡಕ್ಕೆ ಸಮೀಪದ ಸಂಸ್ಕೃತಪದವೆಂದು 'ಗ್ರಾಮ ಮುಂಡ' ಶಬ್ದವನ್ನು ಮೂಲವೆಂದು ಗ್ರಹಿಸಬೇಕಾಗಿ ಒಬ್ಬ ವಿದ್ವಾಂಸರು ಸೂಚಿಸಿದರು. ಆದರೆ ಈ ಶಬ್ದವು ಕೇವಲ ಕಾಲ್ಪನಿಕವೆಂದು ಹೇಳಬೇಕಾಗು ತ್ತದೆ. ಏಕೆಂದರೆ ಇದು ಎಂದಾದರೂ ಬಳಕೆಯಲ್ಲಿ ಇರದೆ, ಇದರಿಂದ ಗಾವುಂಡ ಪದವು ಹೊರಟಿತೆಂದು ಹೇಗೆ ತಿಳಿಯುವುದು? ಗ್ರಾಮಮುಂಡ ಎಂಬ ಪದವು ಬಳಕೆಯಲ್ಲಿದ್ದರೆ ಯಾವ ಸಂಸ್ಕೃತ ಕೋಶವೂ ಇದನ್ನು ಹೇಗೆ ಉಲ್ಲೇಖಿಸದೆ ಬಿಡುತ್ತಿತ್ತು? ಪಟ್ಟೆಲ ಎಂಬುದರ ರೂಪಸಿದ್ಧಿಯು ಈಗ ನಿಶ್ಚಿತವಿದ್ದು ಪಟ್ಟೆಲರು ಎಂದರೆ ಹಟ್ಟಿಕಾರ ಗೋವಳರೆಂಬ ಅರ್ಥವೂ ಸ್ಪಷ್ಟ ವಾಗಿದೆ. ಪಟ್ಟೆಲರಿಗೇ ಗೌಡರೆಂದು ಹೇಳುವ ಅನೇಕ ಶತಮಾನಗಳ ವಾಡಿಕೆ ಯಂತೆ ಇವೆರಡೂ ಸಮಾನಾರ್ಥಕ ಪದಗಳಾಗಿವೆ. ಆದಕಾರಣ ಗೌಡ ರೆಂದರೆ ಗೌಳರು—ಗೋವಳರೆಂಬಲ್ಲಿ ಸಂದೇಹವಿಲ್ಲ.

ಇಂತಿದು ಗೋವಳರ ನಾಡು; ಪಟ್ಟಿಗಳ ದೇಶ. ಆದಕಾರಣ ಇಲ್ಲಿ ಎಲ್ಲೆಲ್ಲೂ ಪಟ್ಟಿಯ ವಿವಿಧ ಹೆಸರಿನ ಊರುಗಳಿರುವುದು ಸಹಜ ಈ ಗೋವಳರ—ಗೌಡರ ಪಟ್ಟಿ, ಹಟ್ಟಿಗಳಲ್ಲದೆ ಇವರು ಸಾಕಿದ ದನಗಳ ಹೆಸ ರಿನ ಊರುಗಳೂ ಈ ನಾಡವರ ಒಂದು ವಿಶೇಷ. ನಂದಗಡ, ನಂದಗಾವಿ,

ನಂದೀಹಳ್ಳಿ, ನಂದ್ಯಾಲ, ನಂದಿಗ್ರಾಮ ನಂದೂರಬಾರ ಮೊದಲಾದುವು ನಮ್ಮ ಪಟ್ಟಿಕಾರ ನಂದಗೋಪರ ತಲೆತಲಾಂತರಗಳ ಕುರುಹುಗಳಾಗಿವೆ.

ಆವಿನ ಮಡುವು, ಗೋವನಕೊಪ್ಪ, ತರುವೆಕೆರೆ, ತುರುಕರುಹಳ್ಳಿ, ತುರ್ವಗಲ್ಲು, ಎತ್ತಿನಕೊಪ್ಪ, ಬೈಲವಾಡ; ಕುರಿಹಟ್ಟಿ, ಆಡೂರು, ಗೊಲ್ಲರಹಟ್ಟಿ, ಗೊಲ್ಲರದೊಡ್ಡಿ, ಕುರುಬಗಟ್ಟೆ ಎಂಬಿವೇ ಮೊದಲಾದುವೆಲ್ಲವೂ 'ಹಾಲುಮತದ' ಈ ತುರುಕಾರ--ದನಗಾರರ ಪೀಳಿಗೆಯವರ ನೆಲೆವೀಡನ್ನೆ ಸೂಚಿಸುತ್ತವೆ.

ಮಾನವನು ಬೇಟೆಗಾರಿಕೆಯಿಂದ ದನಗಾರಿಕೆಗೆ, ದನಗಾರಿಕೆಯಿಂದ ಒಕ್ಕಲತನಕ್ಕೆ, ಒಕ್ಕಲತನದಿಂದ ವ್ಯಾಪಾರೋದ್ಯೋಗಕ್ಕೆ, ವ್ಯಾಪಾರೋದ್ಯೋಗದಿಂದ ರಾಜ್ಯವ್ಯವಹಾರಕ್ಕೆ ಅರ್ಹತೆಯನ್ನು ಪಡೆಯುತ್ತ ಕ್ರಮವಾಗಿ ತನ್ನ ವಿಕಾಸವನ್ನು ಮಾಡಿಕೊಂಡುದು ಕಂಡುಬರುತ್ತದೆ. ಮಾನವನ ವಿಕಾಸಕ್ರಮದ ಈ ಘಟ್ಟಗಳು—ದನಗಾರಿಕೆಯಿಂದ ಮುಂದಿನ ಮಟ್ಟಗಳು 'ಪಟ್ಟಿ' ಶಬ್ದವು ಅಳವಡಿಸಿಕೊಂಡಿರುವ ಅರ್ಥಗಳಲ್ಲಿ ಸ್ಪಷ್ಟವಾಗಿ ಗೋಚರವಾಗುತ್ತವೆ.

ಪಟ್ಟುಕೊಂಡಿರುವ ಎಡೆ ಪಟ್ಟಿ; ಹಟ್ಟಿ—ಗುಡಿಸಲು, ದನಗಳ ದೊಡ್ಡಿ ಎಂಬ ಇದರ ಮೂಲಾರ್ಥದಲ್ಲಿ ಪಟ್ಟಿಕಾರರ ಮೊದಲನೆಯ ಮಟ್ಟವು ಧ್ವನಿತವಾಗುತ್ತದೆ.

ದನಗಾರಿಕೆಯ ಮುಂದಿನ ಮಟ್ಟ ಒಕ್ಕಲತನ. ಒಕ್ಕಲತನದಲ್ಲಿ ಮಳೆನೀರಿನಿಂದ ಸಾಗು ಆಗುವ ಹೊಲಗಳು ಮೊದಲು ಅಲ್ಲ. ಹೊಯ್ನೀರಿನಿಂದ ಬೆಳೆವ ತೋಟಗಳು ಮೊದಲು. ತೋಟವೆಂಬುದು ಈಗ ರೂಢ ಶಬ್ದವಾಗಿದ್ದರೂ 'ತೋಟ–ಪಟ್ಟಿ' ಎಂಬ ಜೋಡು ನುಡಿಯಲ್ಲಿ 'ಪಟ್ಟಿಗೂ' ಒಂದು ಕಾಲಕ್ಕೆ ತೋಟವೆಂಬ ಅರ್ಥವಿದ್ದುದು ನಿದರ್ಶನಕ್ಕೆ ಬರುತ್ತದೆ. ಒಂದಕ್ಕಿಂತ ಹೆಚ್ಚು ಅರ್ಥಗಳಲ್ಲಿ ಒಂದು ಶಬ್ದವು ಬಳಕೆಯಲ್ಲಿದ್ದಾಗ, ಅರ್ಥಕ್ಕೆ ಸಂದೇಹವುಂಟಾಗಬಾರದೆಂದು ಸ್ಪಷ್ಟತೆಗಾಗಿ ಅದೇ ಅರ್ಥದ ಇನ್ನೊಂದು ಪದವನ್ನು ಅದರ ಬದಿಯಲ್ಲಿ ಸೇರಿಸಿ ಹೇಳುವ ವಾಡಿಕೆಯಿದೆ. ನೆರೆಹೊರೆ ಎಂಬಲ್ಲಿ 'ಹೊರೆ' ಶಬ್ದದ ಜೊತೆಗೆ ನೆರೆಯನ್ನು ಉಪಯೋಗಿಸಿದುದು ಇದೇ ಕಾರಣಕ್ಕಾಗಿ. ಇವೆರಡೂ ಒಂದೇ ಅರ್ಥದ ಶಬ್ದಗಳು.

ಹಳೆಯ ಕಾವ್ಯಗಳಲ್ಲಿ 'ಹೊರೆ' ಶಬ್ದವನ್ನು ಸಮೀಪ, ನೆರೆ ಎಂಬರ್ಥದಲ್ಲಿ ಬಳಸಿದ್ದುಂಟು. ಹಾಗೆ 'ಪಟ್ಟಿ'ಗೂ ತೋಟ ಎಂಬ ಅರ್ಥವು ಇದ್ದ ಬಗೆಗೆ ಸಂದೇಹವೆ ಇಲ್ಲ. ಗದ್ದೆ ಎಂಬರ್ಥದಲ್ಲಿ ಪಟ್ಟಿ ಶಬ್ದವು ತಮಿಳಿನಲ್ಲುಂಟು. ಪಡಪ್ಪೈ ಎಂದರೆ ತೋಟ. ಸಂಸ್ಕೃತದಲ್ಲಿ ಸೇರಿರುವ ಪಟ್ಟಿ ಶಬ್ದದ ಇನ್ನೊಂದು ರೂಪವೂ ವಿಚಾರಾರ್ಹವಾಗಿದೆ. ವಾಟಿ, ವಾಟಿಕಾ ಎಂದರೆ ಸಂಸ್ಕೃತದಲ್ಲಿ ತೋಟವೆಂದರ್ಥ. ಪಟ್ಟಿ ಎಂದರೆ ಹೊಲವೆಂಬರ್ಥವೂ ಕಾಲಾಂತರದಲ್ಲಿ ಬಂದಿತು. ಪಟ್ಟಾದಾರ ಎಂದರೆ ಹೊಲದ ಒಡೆಯ, ಗೇಣಿ ಹಿಡಿದ ಒಕ್ಕಲಿಗ ಎಂದರ್ಥವಿದೆ.

ಪಟ್ಟಿಯಲ್ಲಿ ಒಕ್ಕಲುತನದ ಮಟ್ಟದಿಂದ ಮುಂದಿನ ವ್ಯಾಪಾರೋದ್ಯೋಗ, ರಾಜ್ಯವ್ಯವಹಾರದ ಕಾಲದ ಅರ್ಥವೂ ಲಾಕ್ಷಣಿಕವಾಗಿ ಮುಂದೆ ಬಂದುದುಂಟು. ಪಟ್ಟ, ಪಾಟ; ಪಟ್ಟಣ; ಹಟ್ಟ, ಹಾಟ, ಪೇಟೆ ಎಂಬಿವೆ. ಮೊದಲಾದ ಶಬ್ದಗಳು ಇದಕ್ಕೆ ದೃಷ್ಟಾಂತ. ಪ್ರತಿಷ್ಠಾನದ ರೂಪವೆಂದು ಹೇಳುವ ಪೈಠಣವು ಪಟ್ಟಣ, ಪೇಠ ಶಬ್ದಗಳಿಗೇ ಹೆಚ್ಚು ಸಮೀಪವಾಗಿದೆ. ಅದರ ನಿಜವಾದ ಹೆಸರು ಪಟ್ಟಣವೆಂದಿರಬೇಕೆಂದು ನನ್ನ ತಿಳುವಳಿಕೆ. ಸಂಸ್ಕೃತ, ಮರ್‍ಹಾಟಿ ಮೊದಲಾದ ಭಾಷೆಗಳಲ್ಲಿ ತಮ್ಮ ಅರ್ಥ ಸಾಮರ್ಥ್ಯದಿಂದ ಸ್ಥಾನವನ್ನು ದೊರಕಿಸಿದ ವಾಟ, ವಾಟಿ, ವಾಡಿ, ಪಟ್ಟ, ಹಟ್ಟ, ಹಾಟ, ಪಟ್ಟಣ ಮೊದಲಾದ ಶಬ್ದಗಳು ಆ ಕಾಲದ ಕಂನಾಡ ಹಟ್ಟಕಾರರ ಹಿರಿಮೆ, ಹೆಚ್ಚಳದ ದ್ಯೋತಕಗಳಾಗಿವೆ. ಇಂಗ್ರೇಜಿಯ Garden, town, market, city ಮೊದಲಾದ ಶಬ್ದಗಳು ನಮ್ಮಲ್ಲಿ ನುಸುಳಿಕೊಂಡು ನಮ್ಮ ಮಾತಿನಲ್ಲಿ ಇಂಬುಗೊಂಡುದು ಆ ಭಾಷೆಯ ಪ್ರಭಾವದ, ಆ ಜನಗಳ ಸಂಸ್ಕೃತಿಯ ಹೆಚ್ಚಳದ ಸೂಚಕವಾಗಿಲ್ಲವೆ? ಹಾಗೆಯೆ ಪಟ್ಟ, ಪಟ್ಟಣ, ವಾಟ, ವಾಟಿಕಾ, ಹಟ್ಟ ಮೊದಲಾದುವುಗಳು ಅಂದಿನ ಕಂನಾಡ ಪಟ್ಟಕಾರರು ಸಂಸ್ಕೃತದವರಿಗೆ ಕೊಟ್ಟ ತಮ್ಮ ಸಂಸ್ಕೃತಿಯ ವಿಶೇಷ ಕಾಣಿಕೆಯ ನಿಶ್ಚಿತ ಕುರುಹುಗಳಾಗಿವೆ. ಪಟ್ಟಗಳು ಕೊಟ್ಟ ಇನ್ನೂ ಒಂದು ಹೆಚ್ಚಿನ ಕಾಣಿಕೆಯುಂಟು. ಅದು 'ಪಟ್ಟ–ವಸ್ತ್ರ'. ಪಟ್ಟ ಎಂದರೆ ವಸ್ತ್ರವೆಂಬರ್ಥವು ಹೇಗೆ? ಕ್ಯಾಲಿಕೊ, ಹಾಲಂಡ, ಚೀನಾ(ಂಬರ) ಮೊದಲಾದುವುಗಳಂತೆ ಪಟ್ಟ ನಾಡಿನಲ್ಲಿ ಹುಟ್ಟಿದುದಾದಕಾರಣ ಪಟ್ಟವೆಂದು ವಸ್ತ್ರಕ್ಕೆ

ಹೆಸರು. ಚೀನ+ಅಂಬರ ಎಂಬಂತೆ ಪಟ್ಟ+ವಸ್ತ್ರ; ದೇಶವಾಚಕ ಮೊದಲನೆಯ ಪದವು ಅಲ್ಲಿದೆ. ಪಟ್ಟಕಾರರು, ಹಟಗಾರರೆಂದು ನೇಕಾರರಿಗೆ ಹೆಸರಿರುವುದೂ ಇದೇ ಕಾರಣ. ವಸ್ತ್ರಕ್ಕೆ ಪಟ್ಟಜ ಎಂದೂ ಒಂದು ಹೆಸರಿದ್ದುದಾಗಿ ಮೋನಿಯರ ವಿಲಿಯಂಸರ ಕೋಶದಿಂದ ತಿಳಿಯುತ್ತದೆ. ಪಟ್ಟಜ ಎಂದರೆ ಪಟ್ಟಿಯಲ್ಲಿ ಜನಿಸಿದ್ದು ಎಂಬರ್ಥವು ಇಲ್ಲಿ ಸುಸ್ಪಷ್ಟವಾಗಿಯೆ ಇದೆ. ಅಲ್ಲದೆ ಇನ್ನೂ ಒಂದು ಸಂಗತಿಯು ಇಲ್ಲಿ ವಿಚಾರಾರ್ಹವಾಗಿದೆ. ನೇಕಾರರಿಗೆ ಹಟಗಾರ ಅಥವಾ ಪಟ್ಟೇಗಾರರೆಂದಿರುವ ಹೆಸರು ದಕ್ಷಿಣಾಪಥದಲ್ಲಿ ಮಾತ್ರ ಉಂಟು. ಉತ್ತರ ಹಿಂದುಸ್ತಾನದಲ್ಲಿ ಈ ಹೆಸರು ವಾಡಿಕೆಯಲ್ಲಿಲ್ಲ. ಹತ್ತಿಯ ಬೆಳೆಗೆ ಹಟ್ಟಿಯೇ ಎಂದಿನಿಂದಲೂ ಹೆಸರಾದ ನಾಡು. ವರಹಾಡದ ಹತ್ತಿ ಎಲ್ಲಕ್ಕೂ ಮಿಗಿಲು. ಹಾಟಕವೆಂದರೆ ಬಂಗಾರ; ಹಟ್ಟಿಯಲ್ಲಿ ಹುಟ್ಟಿದ್ದು ಹಾಟಕ. ನಿಜಾಂ ಇಲಾಖೆಯ ಹಟ್ಟಿಯ ಗಣಿಗಳು ಭಾರತದಲ್ಲಿಯೆ ಅತಿ ಪುರಾತನವುವೆಂದು ಡಾ. ಮಾರ್ಶಲ್ಲರು ಮೊಹೆಂಜೋದಾರೋದ ತಮ್ಮ ಗ್ರಂಥದಲ್ಲಿ ಕಾಣಿಸಿದ್ದಾರೆ. ‘ಹಾಟಕ’ವೆಂಬುದೂ ಕಂನುಡಿಯು ಸಂಸ್ಕೃತಕ್ಕೆ —ಭಾರತಕ್ಕೆ ಸಲ್ಲಿಸಿದ ಒಂದು ಬೆಲೆಯುಳ್ಳ ಕಾಣಿಕೆ.

ಹಟ್ಟಿಕಾರ ಗೋಪನು ರಾಜನಾದನು. ಆತನ ಹಟ್ಟಿ ಮೊದಲು ಗುಡಿಸಲೆಂಬ ಅರ್ಥವುಳ್ಳದಾಗಿದ್ದರೂ ಅದು ಮುಂದೆ ಪ್ರೌಢಾರ್ಥವನ್ನು ಹೊಂದಿತು. ‘ಹಟ್ಟ’ವು ಪೇಟೆಯೆಂಬರ್ಥಗೊಂಡಿತು. ಪಟ್ಟ, ಪಟ್ಟಣಗಳು ಮರ್ಯಾದೆಯ ಊರುಗಳಾದುವು. ಪಾಡಿ—ವಾಡಿಗಳು ವಿಸ್ತೀರ್ಣ ದೇಶವಾಚಕ ಪದಗಳಾದುವು. ಅದೇ ಅರ್ಥವು ಹಟ್ಟ, ಹಾಟ (ಕರಹಾಟ, ಮರಹಾಟ ಮುಂ.)ಗಳಿಗೂ ಪ್ರಾಪ್ತವಾಯಿತು. ವಾಡಿಯು ‘ವಾಡಾ’, ‘ವಾಡೆ’ ಎಂದರೆ ಮಹಮನೆ—ಅರಮನೆ ಎಂದೂ ಅರ್ಥವನ್ನು ಪಡೆದುಕೊಂಡಿತು. ಮಾನವನ ಸಾಮಾಜಿಕ ವಿಕಾಸಕ್ರಮದ ಹಿನ್ನೆಲೆಯಲ್ಲಿ ಶಬ್ದಗಳ ಅರ್ಥದ ವಿಕಾಸಕ್ರಮವು ಹೇಗೆ ಸೊಗಸಾಗಿ ತಿಳಿದುಬರುತ್ತದೆಂಬುದನ್ನು ಇಲ್ಲಿ ಚೆನ್ನಾಗಿ ಮನಗಾಣಬಹುದಾಗಿದೆ.

---

## ೪. ಉತ್ತರದಲ್ಲಿ ಪಾಡಿಗಳು

ಪಟ್ಟಿ ಅಥವಾ ಪಾಡಿ ಎಂದರೆ ಪಟ್ಟುಕೊಂಡಿರುವ ಎಡೆ, ಮನೆ, ನೆಲೆ, ನಾಡು ಎಂಬರ್ಥವಿದ್ದುದನ್ನು ಹಿಂದಿನ ಪ್ರಕರಣದಲ್ಲಿ ಹೇಳಿದೆ. ಪಟ್ಟಿ ಅಥವಾ ಪಾಡಿಗಳಲ್ಲಿ ಇದ್ದವರು ಪಟ್ಟಿಗಳು; ಇವರಿಗೆ ಪಟ್ಟಿಲರೆಂಬ ಹೆಸರಿದ್ದ ವಿಚಾರವೂ ಈ ಮೊದಲೆ ಬಂದಿದೆ.

ಈ ಪಾಡಿಗಳು ಕಂನಾಡಿನಲ್ಲಂತೂ ಸರಿಯೆ; ಉತ್ತರದಲ್ಲೂ, ಪುರಾತನ ಕಾಲದಲ್ಲಿ ಇದ್ದುವೆಂದು ನನ್ನ ಕಂಡಿತದ ಮಾತು. ಆದರೆ ಇದನ್ನು ಇನ್ನುಳಿದವರಿಗೂ ಮನಗಾಣಿಸಿಕೊಡುವುದು ಹೇಗೆ? ಇಂದಿನ ಕಂನಾಡ ಪಾಡು ನೋಡಿದರೆ, ಉತ್ತರದಲ್ಲೂ ಪಾಡಿಗಳಿದ್ದರೆಂದು ನಂಬುವುದೆ ಸಾಧ್ಯವಿಲ್ಲ. ಕವಿರಾಜಮಾರ್ಗದಲ್ಲಿ ಹೇಳಿದ ಕಾವೇರಿಯಿಂದ ಗೋದೆಯವರೆಗೆ ಕಂನಾಡು ಇದ್ದಿತೆಂಬುದನ್ನೇ ಅತಿಶಯೋಕ್ತಿ, ಸುಳ್ಳು ಎಂದು ಬಗೆವ ಸಂಶೋಧಕ ವಿದ್ವಾಂಸರಿದ್ದಾರೆ. ಬಳಿಕ ನರ್ಮದೆಯ ವರೆಗೂ ಕಂನಾಡು ಇದ್ದಿತೆಂಬ ಮಾತು ಏತಕ್ಕೆ?

ಇದೀಗ ಬಲ್ಲಿದರ ಎದರು ನಾನೊಂದು ಮಾತನ್ನು ತಲೆವಾಗಿ ಕೇಳಿಕೊಳ್ಳುತ್ತೇನೆ: ಪಟ್ಟಿ—ಹಟ್ಟಿ; ಪಾಡಿ—ವಾಡಿ....ಎಂಬಿವು ಒಂದೇ ಬಳಗದ ಒಂದಕ್ಕೊಂದು ಹತ್ತಿಹೊಂದಿದ ನುಡಿಗಳೆಂಬುದು ಒಪ್ಪಿಗೆಯೆ? ಪಟ್ಟಿ, ಪಾಡಿ ಎಂಬುದು ಪಡು ಧಾತುವಿನಿಂದ ಬಂದ ನುಡಿಯೆಂಬುದು ನಿಜವೆ? ಹಾಗಿದ್ದರೆ ಈ ಪಟ್ಟಿ, ಪಾಡಿ, ವಾಡಿ, ಹಟ್ಟಿಗಳು ಎಲ್ಲಿಯ ವರೆಗೆ ಹಬ್ಬಿರುವುವೊ ಅಲ್ಲಿಯ ವರೆಗೆ ಈ ಪಾಡಿಗಳು ನೆಲಸಿದ್ದರು ಅಥವಾ ಕೊನೆಗೆ ಅವರ ವರ್ಚಸ್ಸು ಇದ್ದಿತೆಂಬ ಮಾತನ್ನಂತೂ ಅಲ್ಲಗಳೆಯಲಿಕ್ಕಾಗುವುದಿಲ್ಲವಷ್ಟೆ? ಈ ಪಟ್ಟಿ, ಪಾಡಿ, ವಾಡಿ, ಹಟ್ಟಿ, ಪಳ್ಳಿ ಎಂಬುವು ಕಂನುಡಿಗೆ ಸಂಬಂಧಪಟ್ಟ ಮಾತುಗಳೇ ಅಲ್ಲ; ಅವು ಸಂಸ್ಕೃತ ಭಾಷೆಯ ಪದಗಳು ಎಂದು ನಿಶ್ಚಿತವಾದರೆ ನನ್ನ ಮೇಲಣ ಅಭಿಪ್ರಾಯವು ತಪ್ಪು; ನನ್ನ ಕಂಡಿತವು ಕೇವಲ ಭ್ರಮೆ ಎಂದು ಸಿದ್ಧವಾಗುವುದು. ಆಗ ನಾನು ನನ್ನ ವಿಚಾರವನ್ನು ತಿದ್ದಿಕೊಳ್ಳಲೇ ಬೇಕು.

ಪಾಡಿಯೊಂದನ್ನು ಬಿಟ್ಟು ಉಳಿದ ಶಬ್ದಗಳು ಸ್ವಲ್ಪ ವ್ಯತ್ಯಾಸದಿಂದ

ಸಂಸ್ಕೃತ ಕೋಶಗಳಲ್ಲಿ ದೊರೆಯುವುವಲ್ಲ? ಎಂದು ಕೆಲವು ವಿದ್ವಾಂಸರು ಕೇಳಬಹುದಾಗಿದೆ. ಪಟ್ಟಿ, ಪಟ್ಟ, ವಾಟ, ವಾಟಿಕಾ, ಹಟ್ಟ, ಪಲ್ಲಿ ಎಂಬುವು ಸಂಸ್ಕೃತ ಕೋಶಗಳಲ್ಲಿ ಕಾಣಿಸಿಕೊಳ್ಳುವುದು ನಿಜ. ಆದರೆ ಸಂಸ್ಕೃತ ಕೋಶದಲ್ಲಿ ಬಂದ ಮಾತ್ರಕ್ಕೆ ಅವು ಸಂಸ್ಕೃತ ಶಬ್ದವೆಂದು ನಿಶ್ಚಿತವಾಗಿ ಹೇಳಲಿಕ್ಕಾದೀತೆ? ಆಕ್ಸಫರ್ಡಕೋಶದಲ್ಲಿ ಧೋತಿ, ಬ್ಯಾಂಗಲ್, ಸಾರಿ, ಮಂಕಿ ಎಂಬೀ ಪದಗಳಿಗೂ ಇಂಬುದೊರೆತಿರುವುದರಿಂದ ಅವಕ್ಕೆ ಇಂಗ್ರೇಜೀ ಶಬ್ದಗಳೆಂದು ಹೇಳಬಹುದೆ? ಪಟ್ಟ, ಪಟ್ಟಿ, ವಾಡಿ, ಹಟ್ಟಿ, ಪಲ್ಲಿಗಳು ಸಂಸ್ಕೃತ ಕೋಶದಲ್ಲಿವೆ; ಆದುದರಿಂದ ಇವು ಸಂಸ್ಕೃತ ಭಾಷೆಯವೆಂದು ಒಮ್ಮೆಲೆ ಹೇಳುವುದು ಸಯುಕ್ತಿಕವಾಗಲಾರದು. ಸಂಸ್ಕೃತ ವರ್ಗದ ಬೇರೆ ಭಾಷೆಗಳಲ್ಲಿಯೂ ಈ ಪದಗಳು ಬಳಕೆಯಲ್ಲಿವೆ, ಎಂದು ಸಿದ್ಧಪಡಿಸುವುದು ಅವಶ್ಯ. ಇಲ್ಲವಾದರೆ ಇವು ಸಂಸ್ಕೃತವೆಂಬ ಮಾತಿಗೆ ಬೆಲೆಯಿಲ್ಲ.

ಪಟ್ಟಿ, ಪಾಡಿ, ವಾಡಿ, ಪಳ್ಳಿ ಎಂಬಿವು ಕಂಡಮಿಳ ವರ್ಗಕ್ಕೆ ಸೇರಿದ ನುಡಿಗಳೇ ಎಂದು ನನ್ನ ನಂಬುಗೆಯಾಗಿದೆ. ಏಕೆಂದರೆ ಇವು ಕಂನುಡಿಯಂತೆ ತುಳು, ಕೊಡಗು, ತಮಿಳು, ತೆಲುಗು, ಮಲೆಯಾಳ ಭಾಷೆಗಳಲ್ಲೂ ಉಂಟು. ನನ್ನ ಈ ನಂಬುಗೆಯು ದೃಢವಾಗುವುದಕ್ಕೆ ಇನ್ನೂ ಕೆಲವು ಹೆಚ್ಚಿನ ಕಾರಣಗಳೂ ಉಂಟು:

೧. ಪಟ್ಟಿ, ಪಾಡಿ, ವಾಡಿ, ಹಟ್ಟಿ ಎಂಬುವು ಒಂದೇ ಬಳಗದ ಹತ್ತಿ ಹೊಂದಿದ ನುಡಿಗಳೆಂಬುದು ಸ್ಪಷ್ಟವಿದೆ. ಇವುಗಳ ಶಬ್ದದೇಹದಲ್ಲಿ ಹೋಲಿಕೆಯಿದೆ; ಅಲ್ಲದೆ ಅರ್ಥವೂ ಒಂದೇ ಬಗೆಯದಾಗಿದೆ.

ಆದರೆ ಇವು ಒಂದಕೊಂದು ಸಂಬಂಧಿಸಿದ ನುಡಿಗಳೆಂಬ ಕಲ್ಪನೆಯು ಕೂಡ ಸಂಸ್ಕೃತ ಕೋಶಕಾರರಿಗೆ ಇದ್ದುದು ಕಂಡುಬರುವುದಿಲ್ಲ. ಪಟ್ಟಿ, ಪಟ್ಟ, ವಾಟ (ವಾಟಿಕಾ), ಹಟ್ಟ ಇವೆಲ್ಲವೂ ಸ್ವತಂತ್ರವಾದ ಬೇರೆ ಬೇರೆ ಪದಗಳೆಂದು ಅವರು ಗ್ರಹಿಸಿದ್ದಾರೆ.

ಪಟ್ಟ ಮತ್ತು ಪಟ್ಟಿಗಳಿಗೆ ಸಂಸ್ಕೃತ ವ್ಯುತ್ಪತ್ತಿಯನ್ನು ಹೇಳಿದ ಕೋಶಗಳೂ ಕಡಿಮೆ. ಕಂನುಡಿಯ ಹಳೆಯ ವ್ಯಾಕರಣಕಾರರು ಪಟ್ಟವನ್ನು ತತ್ಸಮ ಪದವೆಂದು ಹೇಳಿರುವರು. ತತ್ಸಮಗಳೆಂದು ಬಗೆದ ಮಣಿ,

ಮಂಚ ಮುಂತಾದ ೨೪ ಪದಗಳು ಪರಭಾಷೆಯಿಂದ ಸಂಸ್ಕೃತದಲ್ಲಿ ಸೇರಿರುವ ಸಂಭವವೆ ಹೆಚ್ಚಾಗಿದೆ.

ವಾಟ ಎಂಬುದಕ್ಕೆ ಆಪಟೆಯವರ ಕೋಶದಲ್ಲಿ ಅದು 'ವಟ್' ಎಂದರೆ ಸುತ್ತುಗಟ್ಟು ಎಂಬರ್ಥದ ಧಾತುವಿನಿಂದ ಬಂದಿರಬೇಕಾಗಿ ಸೂಚಿಸಿದ್ದಾರೆ. ಮೋನಿಯರ ವಿಲಿಯಂಸರು ವಟವೃಕ್ಷಕ್ಕೆ ಅದರ ಸಂಬಂಧದನ್ನು ಜೋಡಿಸುವರು! ವಾಟಿಕಾ: 1 The site of a house; 2. An orchard, a garden; ವಾಟೀ: 1. The site of a house; 2. A house dwelling; 3. A court; an enclosure; 4. A garden ಎಂದು ಅರ್ಥವೂ ಅಲ್ಲಿದೆ,

ಹಟ್ಟ: ಎಂಬುದು ಹಟ್ ಎಂದರೆ ಹೊಳೆ, ತೊಳಗು ಎಂಬ ಧಾತುವಿನಿಂದ ಬಂದುದಾಗಿ ಹೇಳಿದ್ದಾರೆ. ಹಟ್ಟ: A market; a fair ಎಂದು ಅರ್ಥ ಕೊಟ್ಟಿದೆ.

ಪಲ್ಲಿ ಶಬ್ದವೂ ಸಂಸ್ಕೃತ ಕೋಶದಲ್ಲಿದೆ. ಆದರೆ ನಿರುಕ್ತವನ್ನು ಸೂಚಿಸಿಲ್ಲ. ಇದಕ್ಕೆ ಹಳ್ಳಿ, ಊರು ಎಂದು ಹೇಳಿದ್ದಲ್ಲದೆ, ಈ ಶಬ್ದಕ್ಕೆ ಹಲ್ಲಿ ಎಂಬ ಪ್ರಾಣಿವಾಚಕ ಅರ್ಥವಿರುವುದನ್ನು ಅಲ್ಲಿ ಕಾಣಿಸಲಾಗಿದೆ.

ಅರ್ಥ ಸಾಮ್ಯ ಮತ್ತು ರೂಪ ಸಾಮ್ಯದಿಂದ ಪಟ್ಟ, ಪಟ್ಟಿ, ಪಾಡಿ, ವಾಡಿ, ವಾಟ, ಹಟ್ಟ ಇವೆಲ್ಲವೂ ಒಂದೇ ಧಾತುವಿನಿಂದ ಹುಟ್ಟಿದುವೆಂಬುದು ಸ್ಪಷ್ಟವಿದೆ. ಆದರೆ ಸಂಸ್ಕೃತ ಕೋಶಕಾರರು ಇವನ್ನು ಭಿನ್ನ ಪದಗಳೆಂದು ಬಗೆದುದು ಸರಿಯಾಗಿಲ್ಲವೆಂದು ಹೇಳಬೇಕಾಗುತ್ತದೆ.

೨. ಪಟ್ಟವು ಹಟ್ಟ; ಪಟ್ಟಿಯು ಹಟ್ಟಿ; ಪಾಡಿಯು ವಾಡಿ, ಪಟ್ಟವು-ಪಾಟ ವಾಟವಾಮಡುದನ್ನು, ಕಂನುಡಿಯೊಳಗಿನ ಶಬ್ದರೂಪಗಳು ಪಲ್ಲಟವಾಗುವ ಬಗೆಯನ್ನು ಅರಿತವರಿಗೆ ಮತ್ತೆ ತಿಳಿಸಿ ಹೇಳಬೇಕಾಗಿಲ್ಲ.

ಪಟ್ಟಿಯೆ ಹಟ್ಟಿಯಾಯಿತೆಂದು ಒಪ್ಪಿದರೆ ಹಟ್ಟವೆಂಬುದು ಸಂಸ್ಕೃತದಲ್ಲಿ ಕಂನುಡಿಯಿಂದಲೇ ಸೇರಿತೆಂಬುದನ್ನೂ ಒಪ್ಪಲೇ ಬೇಕು. ಏಕೆಂದರೆ ಪಕಾರಕ್ಕೆ ಹಕಾರವಾಗುವುದು ಕೇವಲ ಕಂನುಡಿಯ ಪಡೆಮಾತಾಗಿದೆ.

೩. ಮೋನಿಯರ್ ವಿಲಿಯಂಸ್‌ನ ಕೋಶದಲ್ಲಿ ಸಂಸ್ಕೃತ ಪದಗಳೊಡನೆ ಇಂಡೊ ಜರ್ಮಾನಿಕ್ ಭಾಷಾ ವರ್ಗದ ಬೇರೆ ಅಂತಹ

ಪದಗಳನ್ನೂ ಕೊಡುವ ವಾಡಿಕೆಯಿದೆ. ಆದರೂ ಅಲ್ಲಿ ಈ ಶಬ್ದಗಳೊಡನೆ ಅಂತಹ ಬೇರೆ ಹೋಲಿಕೆಯ ಯಾವ ಪದಗಳನ್ನೂ ಕೊಟ್ಟಿಲ್ಲ. ಅಲ್ಲಿ ಕೊಟ್ಟ ಅರ್ಥವು ಮೇಲಣ ಪದಗಳ ಅಭ್ಯಾಸಕ್ಕೆ ಉಪಯುಕ್ತವಿರುವುದರಿಂದ ಅದನ್ನಿಲ್ಲಿ ಎತ್ತಿ ಕೊಟ್ಟಿದ್ದೇನೆ.

ಪಟಕ, ಪಾಟಕ— The half of a village; cloth; a camp; encampment; L.

ಪಟಜ— A kind of cloth —ಮಹಾಭಾ.

ಪಟ್ಟಾರ— A district.

ಪಟೀರ— A field.

ಪಟ್ಟಿ— Name of a people.

ಪತ್ರಿ— ಗಣಕ: L.

ಪದ್ರ— A village; L.

ವಾಟ, ವಾಟೀ— ವಟವೃಕ್ಷಕ್ಕೆ ಸಂಬಂಧಿಸಿದ್ದು; ತೋಟ; ಮಹಾಭಾ. ಜಿಲ್ಹೆ; ದಶಕುಚ; A site of a house; L. A hut; L.

ಜನಗಳ ಹೆಸರು— ವರಾಹಮಿಹರ.

ಹಟ್ಟ— A market, a fair, ಪಂಚತಂ. ವೇತಾಳಪಂ. L.

ಹಾಡಿ-ಗ್ರಾಮ— ಹಳ್ಳಿಯ ಹೆಸರು —ರಾಜತರಂಗಿಣಿ

ಪಲ್ಲಿ, ಪಲ್ಲೀ, A small village, (esp.) a settlement of wild tribes. L. A hut, A house, L. ಕಥಾಸರಿತ್. A house-lizard. L.

ಈ ಬಗೆಯಾಗಿ ಅರ್ಥಹೇಳಿ ಅವುಗಳ ಎದುರು L. ಎಂದು ಸಂಜ್ಞೆ ಹಾಕಲಾಗಿದೆ. ಅದು ಯಾವ ಆಧಾರ ಗ್ರಂಥದ ಹೆಸರಲ್ಲ. ಇವುಗಳಿಗೆ ಸಂಸ್ಕೃತವೆಂದು ಪರಿಗಣಿಸಲು ಆಧಾರ ಸಾಲದು ಎಂದು ಎಚ್ಚರಿಸಲು ಹಾಕಿದ ಚಿಹ್ನ! L. ಇದರ ವಿವರಣೆಯನ್ನು ಅಲ್ಲಿ ಹೀಗೆ ಕೊಟ್ಟಿದೆ: L. —Lexicographers, ( i. e. ) a word or meaning which although given in netive lexicons, has not yet been met

with in any published text. ) ಎಂದರೆ ಇವು ಕೇವಲ ಕೋಶಕಾರರು ಹೇಳಿದ ಪದಗಳು. ಸಾಹಿತ್ಯದಲ್ಲಿ ದೊರೆಯುವುದಿಲ್ಲ.

ಮೇಲಣ ಶಬ್ದಗಳ ಸಾಲನ್ನು ವಿಮರ್ಶಿಸಿದರೆ ಅವೆಲ್ಲ ಪಟ್ಟ ಪಾಡಿ, ವಾಡಿ, ಹಟ್ಟಿ ಎಂಬೀ ಮಾತುಗಳ ಬಳಗದುವೆಂದೇ ಕಂಡುಬರುತ್ತದೆ. ರಾಜತರಂಗಿಣಿ ಎಂಬ ಗ್ರಂಥವು ಕಾಶ್ಮಿರದೇಶದಲ್ಲಿ ಬರೆದುದು. ಅದರಲ್ಲಿ ಹಾಡಿ–ಗ್ರಾಮವೆಂಬ ಊರ ಉಲ್ಲೇಖವಿದೆ. ಆವೂರು ಎಲ್ಲಿಯದೆಂಬುದು ಸ್ಪಷ್ಟವಾಗಿಲ್ಲ. ಅದು ಎಲ್ಲಿಯದೆ ಇರಲಿ, 'ಹಾಡಿ–ಗ್ರಾಮ'ವೆಂಬ ಸಂಯುಕ್ತ ಶಬ್ದವು ಕೂಡಲ-ಸಂಗಮದಂತಹ ದ್ವಿರುಕ್ತಿಯಾಗಿದೆ, ಹಾಡಿ ಎಂದರೇ ಗ್ರಾಮ. ಹಾಡಿ ಎಂಬುದು 'ಪಾಡಿ'ಯ ಇನ್ನೊಂದು ರೂಪವೆಂದು ಸಿದ್ಧಪಡಿಸುವ ಆವಶ್ಯಕತೆಯಿಲ್ಲ.

ಪಾಡಿ—ಹಾಡಿಯು ಹೇಗೆ ರಾಜತರಂಗಿಣಿಯಲ್ಲಿ ಸ್ಥಾನವನ್ನು ಪಡೆದುಕೊಂಡಿತೊ, ಹಾಗೆಯೆ ಪಟ್ಟ,–ಹಟ್ಟಿ, ಇವೆಲ್ಲವೂ ಸಂಸ್ಕೃತದಲ್ಲಿ ಸೇರಿಕೊಂಡುವೆಂದು ನಿಶ್ಚಿತವಾಗಿ ಕಂಡುಕೊಳ್ಳಬಹುದಾಗಿದೆ. ಸಂಸ್ಕೃತದಲ್ಲಿ ಈ ಪದಗಳು ಇರುವುದು ನಿಜ. ಆದರೆ ಅವು ಯಾವ ಮಟ್ಟದ ಸಂಸ್ಕೃತದಲ್ಲಿ, ಎಂಬುದನ್ನು ವಿಚಾರಿಸಿದರೂ ಅವುಗಳ ಮೂಲವೆಲ್ಲಿ? ಎಂಬ ಮಾತು ಸ್ಪಷ್ಟವಾಗುವ ಹಾಗಿದೆ. ಈ ಪದಗಳು ಹೆಚ್ಚಾಗಿ ಬಳಕೆಯಲ್ಲಿದ್ದುದು ಶಿಲಾಶಾಸನ ತಾಮ್ರಪಟಗಳ ಸಂಸ್ಕೃತ ಭಾಷೆಯಲ್ಲಿಯೇ. ಅವನ್ನುಳಿದರೆ ಆಮೇಲೆ ಪಂಚತಂತ್ರ, ವೇತಾಳ ಪಂಚವಿಂಶತಿ, ಕಥಾಸರಿತ್ ಸಾಗರಗಳಂತಹ ಜಾನಪದ ಕತೆಗಳ ಸಂಸ್ಕೃತದಲ್ಲಿ; ರಾಜತರಂಗಿಣಿಯೂ ಇತಿಹಾಸ, ಲೋಕಕಥೆಗೆ ಸಂಬಂಧಪಟ್ಟುದೆ. ದಶಕುಮಾರ ಚರಿತವೂ ಚರಿತ್ರಗ್ರಂಥವೆ ಆಗಿದೆ. ಆದಕಾರಣ ಈ ಪದಗಳು ಜಾನಪದದ ಭಾಷೆಯಿಂದಲೇ ಸಂಸ್ಕೃತದಲ್ಲಿ ನುಸುಳಿಕೊಂಡಿವೆಯೆಂದು ಹೇಳಬೇಕಾಗುತ್ತದೆ.

೪. ೧೨ನೆಯ ಶತಮಾನದಲ್ಲಿ ಆಗಿ ಹೋದ ಶ್ರೀ ಹೇಮಚಂದ್ರನು ತನ್ನ 'ದೇಶೀ ನಾಮ ಮಾಲಾ' ಎಂಬ ಗ್ರಂಥದಲ್ಲಿ 'ಹಟ್ಟಿ ಗೃಹಭೇದೇ', ಹಟ್ಟಿಯೆಂಬುದು ಮನೆಯ ಒಂದು ಬಗೆ, ಎಂಬುದಾಗಿ ಹೇಳಿದ್ದಾನೆ. ಆದುದರಿಂದ ಹಟ್ಟ, ಹಟ್ಟಿಯೆಂಬುದಾಗಿ ಹೇಳಿದ್ದಾನೆ. ಆದುದರಿಂದ ಹಟ್ಟ ಅಥವಾ ಹಟ್ಟಿಯೆಂಬುದು ದೇಶೀಯ ಪದವೆಂದು ಹೇಮಚಂದ್ರನ

ಅಭಿಪ್ರಾಯವಿದ್ದಂತಾಯಿತು. ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳೆರಡರಲ್ಲೂ ತಜ್ಞನಾದ ಶ್ರೀ ಹೇಮಚಂದ್ರನಿಗೆ ಹಟ್ಟಿಯು ಸಂಸ್ಕೃತ ಅಥವಾ ಪ್ರಾಕೃತಗಳಲ್ಲಿ ಯಾವುದಕ್ಕೂ ಹೊಂದಿಕೊಂಡುದಲ್ಲವೆಂದು ತೋರಿ ಆತನು ಅದನ್ನು ದೇಶೀಯ ಪದಗಳ ಪಟ್ಟಿಯಲ್ಲಿ ಸೇರಿಸಿದ್ದು ಸ್ಪಷ್ಟವಿದೆ.

ದೇಶೀ ನಾಮಗಳೆಂದರೇನು? ವಿಸ್ತಾರವಾದ ಭರತಖಂಡದ ನಾನಾ ದೇಶಗಳಲ್ಲಿ ಸಂಸ್ಕೃತ ಮತ್ತು ಪ್ರಾಕೃತಗಳು ಅಂದು ಹಬ್ಬಿದಾಗ, ಆಯಾ ಭಾಗದ ಮೂಲ ಭಾಷೆಗಳೊಳಗಣ ಅನೇಕ ಪದ–ಪ್ರಯೋಗಗಳು ಸಂಸ್ಕೃತ ಮತ್ತು ಪ್ರಾಕೃತಗಳಲ್ಲಿ ಸೇರಿಕೊಂಡುವು. ಇಂದು ಈ ಬಗೆಯಾಗಿ ಇಂಗ್ರೇಜಿಯಲ್ಲಿ ಹಲವು ಪ್ರಾಂತೀಯ ಶಬ್ದಗಳು ಸೇರಿಕೊಂಡಿದ್ದುದನ್ನು ನಾವು ನೋಡುತ್ತಿದ್ದೇವೆ. ಇಂತಹ ಪದಗಳಿಗೇ ದೇಶೀನಾಮಗಳೆಂದು ಹೇಳುವ ವಾಡಿಕೆಯಿದೆ. ಡಾ. ಸಿಲ್ವನ್ ಲೆವಿ, ಪ್ರಿಲಸ್ಕಿ ಮೊದಲಾದ ವಿದ್ವಾಂಸರು ಸಂಸ್ಕೃತದೊಳಗಿನ ಜೀಮನ, ತಂಬುಲ, ಬಾಲ, ಲಿಂಗ ಮೊದಲಾದ ಶಬ್ದಗಳು ಆರ್ಯ ಮತ್ತು ದ್ರಾವಿಡರಿಗಿಂತಲೂ ಮೊದಲು ಇಲ್ಲಿ ನೆಲೆಯಾಗಿದ್ದ ಆಸ್ಟ್ರೋ–ಏಶಿಯಾಟಿಕ್ ವರ್ಗದ ಜನಗಳ ಭಾಷೆಯಿಂದ ಬಂದುವೆಂದು ತೋರಿಸಿಕೊಟ್ಟಿದ್ದಾರೆ.

ಅದೇ ಮೇರೆಗೆ ಸಂಸ್ಕೃತದಲ್ಲಿ ಕಾಣಿಸಿಕೊಳ್ಳುವ ಪಟ್ಟ, ಪಟ್ಟಿ, ವಾಟ, ವಾಟಿಕಾ, ಹಟ್ಟ, ಪಲ್ಲಿ ಮೊದಲಾದ ಮಾತುಗಳು ದೇಶೀನಾಮಗಳೇ ಆಗಿವೆ. ಶ್ರೀ ಹೇಮಚಂದ್ರನು 'ಗ್ರಾಮೇ ಊರುಃ' ॥೧೪೩॥ ಎಂದು ಹೇಳಿದ್ದುದರ ಮೇಲಿಂದ 'ಊರು' ಎಂಬುದು ಸಹ ಪಟ್ಟಿ, ಹಟ್ಟಿ ಮೊದಲಾದ ಗ್ರಾಮವಾಚಕಗಳಂತೆ ಸಂಸ್ಕೃತ, ಪ್ರಾಕೃತಗಳಲ್ಲಿ ನುಸುಳಿಕೊಂಡಿದ್ದಿತೆಂಬು ಸ್ಪಷ್ಟವಾಗಿ ಕಂಡುಬರುತ್ತದೆ!

ಸಂಸ್ಕೃತವು ದೇಶೀಯ ನಾಮಗಳನ್ನು ತನ್ನ ಒಡಲಲ್ಲಿ ಅರಗಿಸಿಕೊಂಡು ಬಿಟ್ಟಿರುವುದರಿಂದ ಅವನ್ನು ಬೇರ್ಪಡಿಸಿ ಸಂಸ್ಕೃತದಿಂದ ಭಿನ್ನವಾದುವೆಂದು ನಿರ್ಧರಿಸಿಹೇಳುವುದು ತುಂಬ ಪರಿಶ್ರಮದ ಕೆಲಸವಾಗಿದೆ. ಶ್ರೀ ಹೇಮಚಂದ್ರನಂತಹ ಉಭಯ ಭಾಷಾ ವಿಶಾರದನೆ ಇದು ತೀರ ಕಷ್ಟದ ಕೆಲಸವೆಂದು ಹೇಳುತ್ತಾನೆ. 'ದೇಶೀ ದುಃಖಸಂದರ್ಭಾ ಪ್ರಾಯಃ ಸಂದರ್ಭಿತಾಽಪಿ ದುರ್ಬೋಧಾ' ಎಂಬುದು ಶ್ರೀ ಹೇಮಚಂದ್ರನ ಅನುಭವದ ಉಕ್ತಿಯಾಗಿದ.

ಸಂಸ್ಕೃತ, ಪ್ರಾಕೃತಗಳಲ್ಲಿ ಸೇರಿದ ದೇಶೀನಾಮಗಳು 'ದುಃಖ ಸಂದರ್ಭ'ವಾಗಿವೆ. ಎಂದರೆ ಅವನ್ನು ಗುರುತಿಸುವುದೆ ಕಷ್ಟವಾಗಿದೆ. ಏಕೆಂದರೆ ಸಂಸ್ಕೃತ ಪ್ರಾಕೃತಗಳಲ್ಲಿ ಅವು ತದ್ರೂಪವಾಗುತ್ತವೆ; ತತ್ ರೂಪವನ್ನು ತಾಳುತ್ತವೆ. 'ಊರು' ಪುರವೆಂಬ ರೂಪತಾಳಿದ್ದರೆ ಅದನ್ನು ಗುರುತಿಸುವುದು ಹೇಗೆ ಸುಲಭ ಸಾಧ್ಯ? ಹಟ್ಟಿಯು ಹಟ್ಟವೆಂಬ ರೂಪ ತಾಳಿಲ್ಲವೆ? ಪಾಡಿಯು ವಾಡಿ, ವಾಟ, ವಾಟಿಕಾ ಎಂದಾಗಿಲ್ಲವೆ? ಅಲ್ಲದೆ ಸಂಸ್ಕೃತ ಭಾಷೆಯಲ್ಲಿ ಧಾತ್ವರ್ಥಗಳ ವಿಸ್ತಾರವು ಸರ್ವವ್ಯಾಪಿಯಾಗಿದೆ. ಬೇಕಾದ ಶಬ್ದವನ್ನೂ ಸಂಸ್ಕೃತಕ್ಕೆ ತಿರುಗಿಸಿಕೊಳ್ಳಬಹುದು; ಸಂಸ್ಕೃತ ಧಾತುಗಳಿಂದ ಸಾಧಿತವೆಂದು ಸಿದ್ಧಪಡಿಸಬಹುದು. ಮಾಕ್ಸಮುಲ್ಲರದಿಂದ ಮೋಕ್ಷಮುಲ್ಲರವಾಯಿತೊ, ಅಥವಾ ಮೋಕ್ಷಮುಲ್ಲರದಿಂದ ಮ್ಯಾಕ್ಸ ಮುಲ್ಲರವೆಂದು ಮಾರ್ಪಟ್ಟಿತೊ ಎಂಬುದೂ ಸಂದೇಹಾಸ್ಪದವಾಗುವ ಹಾಗಿದೆ. ಡಾಸಸ—ದೇವಸೇನ, ಅಂಡರಸನ್—ಇಂದ್ರುಸೇನ ಮೊದಲಾದ ಹೆಸರುಗಳು ಹೀಗೆಯೆ ಪ್ರಚಾರದಲ್ಲಿ ಬಂದಿವೆ. ಇವಕ್ಕೆ ಐತಿಹಾಸಿಕ ಹಿನ್ನೆಲೆಯ ನಿಶ್ಚಿತವಾದ ಆಧಾರವು ಇಲ್ಲದಿದ್ದಲ್ಲಿ ಇವೂ ದುಃಖ ಸಂದರ್ಭ ವಾಗುತ್ತಿದ್ದುವು.

ಶ್ರೀ ಹೇಮಚಂದ್ರನು, ದೇಶೀಯ ಪದಗಳಿಗೆ ಸರಿಯಾದ ಅರ್ಥವೆ ಆಗುವುದಿಲ್ಲ; ಅದರಿಂದ ಅವು 'ದುರ್ಬೋಧ'ವಾಗಿರುತ್ತವೆಂದು ಪ್ರಾಮಾ ಣಿಕವಾಗಿ ಒಪ್ಪಿಕೊಳ್ಳುತ್ತಾನೆ. ಸಂಸ್ಕೃತ ಧಾತುಗಳನ್ನು ಎಳೆದಾಡಿ ಅರ್ಥ ಹಚ್ಚುವ ಇಲ್ಲದ ಪಾಂಡಿತ್ಯ ಪ್ರದರ್ಶನವನ್ನು ಮಾಡಬೇಕೆಂದಿದ್ದರೆ ಶ್ರೀ ಹೇಮಚಂದ್ರನಿಗೆ ಅದು ಅಸಾಧ್ಯವಿದ್ದಿಲ್ಲ. ಆದರೆ ಆವನು ಆ ಗೋಜಿಗೆ ಹೋಗಲಿಲ್ಲ. ಹಟ್ಟಿ—ಹಟ್ಟವು ದೇಶೀ ನಾಮವೆಂದು ಯಾವ ಸಂಕೋಚ ವಿಲ್ಲದೆ ಒಪ್ಪಿಕೊಂಡುಬಿಟ್ಟನು. ದೇಶೀಯ ಪದಗಳು ಸಂಸ್ಕೃತದಲ್ಲಿ ಸೇರಿವೆಯೆಂದು ಒಪ್ಪಿಕೊಳ್ಳಲು ಎಷ್ಟೊ ಪಂಡಿತರಿಗೂ ಆರ್ಯಾಭಿಮಾನಿ ಗಳಿಗೂ ಹೇಗೆ ಹೇಗೊ ಎನಿಸುವುದು. ಸಂಸ್ಕೃತದಂತಹ ಪರಿಪೂರ್ಣ ಭಾಷೆಗೆ ಪರಭಾಷೆಯ ಪದಗಳ ಅವಶ್ಯಕತೆಯೇನು? ಸಂಸ್ಕೃತವು ಶುದ್ಧ ಭಾಷೆ. ಗೀರ್ವಾಣವಾಣಿ. ದೇವತೆಗಳ ಈ ಭಾಷೆಯಲ್ಲಿ ಅನಾರ್ಯರ ಮಾತುಗಳು ಬೆರೆತಿವೆಯೆಂಬ ವಿಚಾರವೇ ಈ ಪಂಡಿತವರ್ಗಕ್ಕೆ ಅಸಹ್ಯವಾಗುತ್ತದೆ.

ಇಂತಹರು ಸಂಸ್ಕೃತದಲ್ಲಿರುವ ಎಲ್ಲ ಪದಗಳೂ ಸಂಸ್ಕೃತ ಧಾತುಗಳಿಂದಲೇ ಬಂದುವೆಂದು ಸಾಧಿಸುತ್ತಾರೆ. ಇನ್ನೊಂದು ಜನಾಂಗದ ಏನೂ ಸಂಪರ್ಕ ವಿಲ್ಲದೆ ಇರುವುದು ಎಲ್ಲಿಯ ವರೆಗೆ ಸಾಧ್ಯವಿಲ್ಲವೊ ಅಲ್ಲಿಯ ವರೆಗೆ ಪರ ಭಾಷೆಯ ಶಬ್ದಗಳು ಸೇರಿಕೊಳ್ಳದೆ ಇರುವ ಭಾಷೆಯು ಲೋಕದಲ್ಲಿ ದೊರೆಯ ಲಾರದು.

ಪಟ್ಟಿ, ಹಟ್ಟಿಗಳು ಕಂನುಡಿಗೆ ಸಂಬಂಧಪಟ್ಟ ಪದಗಳೆಂದು ಗ್ರಹಿಸಿದರೆ ಮುಂದೆ ಹಲವು ವಿಚಿತ್ರ ಸಂಗತಿಗಳಿಗೆ ತಲೆದೂಗುವ ಪ್ರಸಂಗಬರುವುದಲ್ಲ! ಎಂದು ಕೆಲರು ಗಾಬರಿಗೊಂಡು ಕೇಳಬಹುದಾಗಿದೆ. ಮರಹಟ್ಟ, ಕರಹಟ್ಟ ಗಳು ಕಂನಾಡವರ ನೆಲೆವೀಡೆಂದು ಹೇಳಬೇಕಾಗುವುದು! ಕರಹಟ್ಟ ಅಥವಾ ಕರ್ಹಾಡವು ಕರ್ಣಾಟದ ಗಡಿಯಲ್ಲಿರುವುದರಿಂದ ಕರಾಡವೂ ಒಮ್ಮೆ ಕರ್ಣಾ ಟದ ಅಂಗವಾಗಿದ್ದಿತೆನ್ನಬಹುದು. ಆದರೆ ಮರ್ಹಾಟ, ಮರ್ಹಾಟದ ಬಗೆಗೆ ಹೀಗೆ ಹೇಳುವುದು ಹೇಗೆ? 'ಕಣ್ಮರೆಯಾದ ಕಂನಡದ' ವಿಮರ್ಶೆಯನ್ನು ಬರೆವಾಗ ನನ್ನ ಒಬ್ಬ ವಿದ್ವಾಂಸರಾದ ಗೆಳೆಯರಿಗೂ ಈ ದಿಗಿಲಾದುದುಂಟು! ಮಹಾರಾಷ್ಟ್ರವೂ ಒಮ್ಮೆ ಕರ್ಣಾಟದ ಭಾಗವಾಗಿದ್ದಿತೆಂಬುದು ಪ್ರಾಂತಾ ಭಿಮಾನದ ಅತಿರೇಕದಿಂದ ತಲೆಕೆಟ್ಟು ಆಡಿದ ಮಾತೆಂದು ಅವರ ಗ್ರಹಿಕೆ ಯಾಗಿದ್ದಿತು! ವಾಸ್ತವ ಸಂಗತಿಗಳು ನನ್ನನ್ನು ಆ ನಿರ್ಣಯಕ್ಕೆ ಒತ್ತಾಯ ಪಡಿಸಿರುವವೆ ಹೊರತು, ಯಾವ ಪ್ರಾಂತಾಭಿಮಾನದ ಉಲ್ಬಣವೂ ನನ್ನನ್ನು ಕೆರಳಿಸಿಲ್ಲವೆಂದು ನಾನು ಹೇಳಬಲ್ಲೆ.

ಪಟ್ಟಿ, ಹಟ್ಟಿ ಎಂಬುದು ಕಂನುಡಿಯದಾಗಿದ್ದರೆ ಈ ಹೆಸರಿನ ಪ್ರದೇ ಶವೂ ಅವರದೇ ಆಗಿರಲಿಕ್ಕೆ ಬೇಕೆಂದು ಬೇರೆ ಹೇಳಬೇಕೆ? ಪಟ್ಟಿ, ಹಟ್ಟಿ ಗಳಷ್ಟೆ ಅಲ್ಲ; ಪಾಡಿಗಳೂ ಮಹಾರಾಷ್ಟ್ರದಲ್ಲಿವೆ. ಹಟ್ಟ ಮತ್ತು ಹಾಟ ಎಂಬುದಕ್ಕೆ ಆರಿಯ ಮಾತಿನಲ್ಲಿ ಇರುವ ಅರ್ಥಗಳಿವು:

ಹಟ್ಟ, ಹಾಟ:— ಪೇಟೆ; ಸಂತೆ; ತಿರುಗುವ ಪೇಟೆ; ಜಾತ್ರೆ; ಹಾಟವಟ; ಹಟ್ಟವಟ; ಹಾಟ ಬಾಜಾರ ಎಂಬ ಜೋಡು ನುಡಿಗಳನ್ನೂ ಅಲ್ಲಿ ಹೇಳಿದ್ದಾರೆ;

ಹಟ್ಟ:— ೧. ಸಣ್ಣ ಸಂತೆ; ಜಾತೆ; ೨ ಒಂದೇ ಬಗೆಯ ವ್ಯವಸಾಯದ

ಅಥವಾ ಜಾತಿಯ ಜನರ ಮನೆಗಳ ಎಡೆ; ೩. ಊರಿಂದ ಕಿರಿದು ಅಂತರದಲ್ಲಿರುವ ಭಿಲ್ಲ, ರಾಮೋಶಿ ಮೊದಲಾದವರ ಬಿಡಾರ; ೪. ಭಿಲ್ಲ, ರಾಮೋಶಿ, ಕೊರಚರ ಬೀಡು; ೫. ಇಂತಹರ ತಂಡ; ಟೋಳಿ.

ಪಟ್ಟಿ:— ಅಗಲಕಡಿಮೆ ಇದ್ದು ಉದ್ದವಾಗಿರುವ ನೆಲದ ತುಂಡು; ಹೊಲ; (ಅಲ್ಲದೆ ಇನ್ನೂ ಹಲವು ಬೇರೆ ಬಗೆಯ ಅರ್ಥಗಳೂ ಉಂಟು.)

ಪಾಡಾ, ಪಾಡಿ:— ೧. ಒಕ್ಕಲತನದ ಅನುಕೂಲತೆಗಾಗಿ ಊರಿಂದ ಸ್ವಲ್ಪ ದೂರ ಹೊಲದ ಹತ್ತಿರ ಕಟ್ಟಿದ ಗುಡಿಸಲುಗಳ 'ವಾಡಿ'; ಸಣ್ಣ ಹಳ್ಳಿ; ೨. ಒಕ್ಕಲತನದವರ ಗುಡಿಸಲು; ೩. ಪಟ್ಟಣದೊಳಗಿನ ಪೇಟೆ, ದೊಡ್ಡ ಓಣಿ; ಎಂಬ ಅರ್ಥಗಳನ್ನು ಕೊಟ್ಟು ಇದು ಗುಜರಾತಿಯಲ್ಲಿ ಪಾಡೋ (ಹಳ್ಳಿ) ಬಂಗಾಳಿಯಲ್ಲಿ ಪಾಡಾ (ಪೇಟೆ); ಸಿಂಧಿಯಲ್ಲಿ ಪಾಡೋ (ವಸತಿ ಸ್ಥಾನ) ಎಂಬ ತೆರನಾಗಿ ಬಳಕೆಯಲ್ಲಿರುವುದಾಗಿ ಹೇಳಿದೆ.

ಸ್ಥಿತಿ, ಅವಸ್ಥೆ ಎಂಬರ್ಥದ ಪಡು ಧಾತುವಿನ ರೂಪಗಳಾದ ಪಾಡು ಎಂಬ ಶಬ್ದವೂ ಮರ್ಹಾಟಿಯಲ್ಲಿದೆ. ಪಕ್ವಸ್ಥಿತಿ—ಪಾಡು ಎಂಬುದನ್ನು ಏಕನಾಥನು ಉಪಯೋಗಿಸಿದ್ದಾನೆ. 'ಅಂಬಯಾ ಪಾಡೂ ಲಾಗಲಾ ಜಾಣ'. ಜ್ಞಾನೇಶ್ವರಿಯಲ್ಲಿಯೂ ಈ ಪದವಿದೆ. 'ಪಾಡ–ಪಂಚಾಯಿತ' ಎಂಬ ಪಡೆನುಡಿ ಇದ್ದು ಊರ ಪಂಚರು ಸೇರಿ ಮಾಡಿದ ಊರ ಸ್ಥಿತಿಯ ಚೌಕಶಿ ಎಂದು ಅದರ ಅರ್ಥ.

ಪಾಡಿಯನ್ನು ಊರು ಎಂಬರ್ಥದಲ್ಲಿ ಮರ್ಹಾಟಿಯ ಆದಿ ಗ್ರಂಥಕಾರರಾದ ಮಹಾನುಭಾವರು ಮತ್ತು ಜ್ಞಾನೇಶ್ವರರೂ ಬಳಸಿದ್ದಾರೆ; 'ಕೈವಲ್ಯಾಚೀ ಪಾಡಿ' (ಮಹಾನುಭಾವ); 'ಸ್ವದ್ವಾಸನೇಚಿಯಾ ಪಾಡಿ ಅಲಾ' (ಜ್ಞಾನೇ. ೬. ೧೨೬); ಕೈವಲ್ಯವೆಂಬ ಊರು, ಸದ್ವಾಸನೆಗಳೆಂಬ ಊರು ಎಂಬುದಾಗಿ ಇಲ್ಲಿ ಅರ್ಥವುಂಟು.

ಗೌಡನಿಗೆ ಪಾಡೇಖೋತ ಮತ್ತು ಪಾಟೀದಾರ ಎಂದು ಪರ್ಯಾಯ ನಾಮಗಳಿವೆ.

ಮರ್ಹಾಟಿಯಲ್ಲಿ ವಾಡಾ ಮತ್ತು ವಾಡೀ ಶಬ್ದಗಳಿಗೆ ಇರುವ ಅರ್ಥವು ಅಭ್ಯಸನೀಯವಾಗಿದೆ.

ವಾಡಾ: ೧. ಭವ್ಯಮಂದಿರ; ಪ್ರಾಸಾದ; ಅರಮನೆ; ೨. ಓಣಿ; ಕೇರಿ; ೩- ಹಳ್ಳಿಯ ಭಾಗ; ೪. ಆವಾರ; ೫. ದನ, ಕುರಿ, ಆಡು ಗಳನ್ನು ಕಟ್ಟುವ ಎಡೆ (ಬಯಲು ಇಲ್ಲವೆ ಛಾವಣಿ ಇರುವಂತಹವು); ೬. ಕುರಿಗಳ ಮಂದೆ. ಇದರ ಪ್ರಯೋಗಗಳು ಮಹಾನುಭಾವರ ಕಾಲದಿಂದಲೂ (೧೨ನೆಯ ಶತಮಾನ) ದೊರೆಯುತ್ತವೆ.

ವಾಡಾಚಾರ, ಎಂದರೆ 'ವಾಡ'ಕೆ; ಪಾಡಿಯಲ್ಲಿ ( ಊರಲ್ಲಿ ) ರೂಢ ವಾಗಿರುವ ಸಂಪ್ರದಾಯಗಳು.

ವಾಡಿ: ೧. ತೋಟ; ೨. ದೊಡ್ಡ ಊರ ಹತ್ತಿರದ ಸಣ್ಣ ವಸತಿ; 'ವತನವಾಡಿ' ಎಂಬ ಜೋಡು ನುಡಿಯಿದೆ. ವಾಡ್ಯಾ ಎಂದರೆ ವಾಡಿಯ ವತನದಾರ;

(ಕೋಶಕಾರು ಈ ಅರ್ಥಗಳನ್ನು ವಿಕಾಸಕ್ರಮಕ್ಕನುಸರಿಸಿ ಪರಿವಿಡಿಯಿಂದ ಹೇಳಿದ್ದರೆ ಚೆನ್ನಾಗಿತ್ತು)

ಮೇಲಣ ವಿವರಣದಿಂದ ಅರಿಯ ಮಾತಿನಲ್ಲಿ ಹಟ್ಟಿ, ಹಾಟ, ಪಾಡು, ಪಾಡಾ, ಪಾಡಿ ಹಾಗೂ ವಾಡಾ ವಾಡಿ ಈವುಗಳಿಗೆ ಇರುವ ಅರ್ಥಗಳೆಲ್ಲವೂ ಒಂದಕೊಂದು ಸಂಬಂಧಪಟ್ಟವುಗಳೇ ಆಗಿವೆಯೆಂಬುದು ನಿದರ್ಶನಕ್ಕೆ ಬರುತ್ತದೆ. ಆದಕಾರಣ ಇವೆಲ್ಲವೂ ಪಟ್ಟಿ, ಪಾಡಿ ಎಂಬುದರ ಭಿನ್ನ ರೂಪ ಗಳೆಂದು ಹೇಳಬೇಕಾಗುತ್ತದೆ. ಇಲ್ಲಿ ಒಂದು ವಿಚಾರರ್ಹವಾದ ಮಾತಿದೆ. ಸಂಸ್ಕೃತ ಪ್ರಾಕೃತಗಳಲ್ಲಿ ಪಾಡಿ, ಪಾಡು ಇಲ್ಲ. ವಾಟ (ವಾಡಿ) ಹಟ್ಟ ಇದೆ. ಹಾಗಾದರೆ ಪಾಡಿಯಿಂದ ವಾಡಿ (ವಾಟ), ಹಟ್ಟಿ (ಹಟ್ಟ)ಗಳು ನಿಷ್ಪನ್ನವಾದುವೆಂದು ಬಗೆಯುವುದು ಸಮಂಜಸವೊ? ಅಥವಾ ಸಂಸ್ಕೃತ, ಪ್ರಾಕೃತ ವಾಟ—ವಾಟಿ ಗಳಿಂದ ಪಾಡಿ—ಪಾಡು ಎಂಬುದು ಬಂದಿತೆಂದು ಗ್ರಹಿಸುವುದು ಲೇಸೆ? ನನ್ನ ತಿಳುವಳಿಕೆಯಂತೆ ಮೊದಲನೆಯದೇ ಸರಿ. ಎರಡನೆಯದಕ್ಕೆ ಏನೂ ಆಧಾರವೇ ದೊರೆಯದು. ಏಕೆಂದರೆ ವಕಾರದಿಂದ

ಪಕಾರವಾಗದು; ಪಕಾರವೆ ವಕಾರವಾಗಬಲ್ಲದು. ಆದಕಾರಣ ಯಾವ ನಾಡಿನ ಹೆಸರು ಮರಹಾಟ, ಯಾವ ನಾಡಿನಲ್ಲಿ ಹಟ್ಟಿ, ಹಾಟ, ಪಾಡಿ, ಪಾಡಾ ಎಂಬ ಊರುಗಳಿವೆ, ಅದು ಒಂದು ಕಾಲಕ್ಕೆ ಕಂನಾಡ ಹಟ್ಟಿಕಾರರ ನೆಲೆವೀಡಾಗಿದ್ದಿತೆಂದು ಹೇಳಲು ಮತ್ತೂ ಬೇರೆ ಪ್ರಮಾಣಗಳು ಬೇಕೆ?

ಮರಹಾಟ ಶಬ್ದವು ಮೂಲವಲ್ಲ. 'ಮಹಾರಾಷ್ಟ್ರ' ದ ತದ್ಭವ 'ಮರಹಾಟ'ವೆಂದು ಒಂದು ಆಕ್ಷೇಪಣೆಯು ತಲೆದೋರಬಹುದು. ಆದರೆ ಇದರಲ್ಲಿ ಹುರುಳಿಲ್ಲ. ಕರ್ಣಾಟ ತದ್ಭವ ಕಂನಾಡು, ಕನ್ನಡ ಎಂಬೀ ಬಗೆಯು ಗತಾನುಗತಿಕರ ವಾದವಿದು. ಮೂಲ ಹೆಸರು ಅಲ್ಲಿಯ ದೇಶಭಾಷೆಯಿಂದ ಅರ್ಥವಾಗುವಂತಹದಾಗಿರುವುದು ಒಂದು ಸಾಮಾನ್ಯ ನಿಯಮವಾಗಿದೆ. ನರ್ಮದೆಯ ದಕ್ಷಿಣಕ್ಕೆ ಆರ್ಯರೇ ಇಲ್ಲದಿರುವಾಗ ಆರಿಯರ 'ಮಹಾರಾಷ್ಟ್ರ' ವೆಂಬ ಹೆಸರಾದರೂ ಎಲ್ಲಿಂದ ಬಂದೀತು? ಮರಹಾಟ ಅಥವಾ ಮರಹಟಿ ವೆಂಬುದರ ಸಂಸ್ಕೃತಕ್ಕೆ ಮಾರ್ಪಡಿಸಿಕೊಂಡ ರೂಪವೇ 'ಮಹಾರಾಷ್ಟ್ರ' ವೆಂಬುದಾಗಿದೆ. ಮುನ್ನವಳ್ಳಿಯು ಮುನಿಪಲ್ಲಿಯಾದಂತೆ. ಏಕೆಂದರೆ ಮರ ಹಾಟಕ್ಕೆ ಸಮಾನಾರ್ಥಕವಾದ 'ಝಾಢಿಮಂಡಲ' ವೆಂಬ ಹೆಸರು ಮರ ಹಾಟದ ಭಾಗದಲ್ಲಿ ಒಂದು ಕಾಲಕ್ಕೆ ರೂಢವಾಗಿದ್ದಿತೆಂದು ಬೆಳಕಿಗೆ ಬಂದಿದೆ. 'ಝಾಡಿ ಮಂಡಲ' ವೆಂಬುದು 'ಮರ-ಹಾಟ' ದ ಶುದ್ಧ ಭಾಷಾಂತರ. ಮೂಲ ಹೆಸರು ಮರಹಟ್ಟಿ ಎಂದಿದ್ದು ಆರಿಯರು ಅದನ್ನು ಝಾಡಿಮಂಡಲ ವೆಂದು ತಮಗೆ ಅರ್ಥವಾಗುವಹಾಗೆ ಭಾಷಾಂತರಿಸಿಕೊಂಡರು. ಆದರೆ ಪಂಡಿತರಿಗೆ ಈ ಹೆಸರು ಅಷ್ಟು ಪ್ರೌಢ ಗಂಭೀರವೆನಿಸದಿರುವುದು ಸಹಜ. ಆದಕಾರಣ ಅವರು ಮರಹಾಟವನ್ನು ಮಹಾರಾಷ್ಟ್ರವೆಂದು ಮಾರ್ಪಡಿಸಿ ಕೊಂಡರೆಂದು ಹೇಳಬಹುದಾಗಿದೆ.

ಆರ್ಯರು ದಕ್ಷಿಣಾಪಥಕ್ಕೆ ಬರುವ ಮೊದಲು ಇಂದಿನ ಗುಜರಾತ, ಮಹಾರಾಷ್ಟ್ರಗಳಲ್ಲಿ ಪಾಡಿಗಳೇ ನೆಲಸಿದ್ದರೆಂದು ಈ ಮೇಲಣ ಸಂಗತಿ ಗಳಿಂದ ಒಪ್ಪಬೇಕಾಗುತ್ತದೆ. ಮರಹಾಟದಂತೆ ಗುಜರಾತಿನಲ್ಲಿ ಪಾಡಿ ಗಳಿವೆ; ವಾಡಿಗಳಿವೆ. ಬಡೋದೆ ಸಂಸ್ಥಾನದೊಳಗಿನ 'ವಡನಗರ'ವೆಂಬುದು ನನ್ನ ತಿಳುವಳಿಕೆಯಂತೆ ವಾಡ-ನಗರವಾಗಿರಬೇಕು. ಇದು ಒಂದು ಹಳೆಯ ಊರು. ಇಲ್ಲಿ ಹಾಟಕೇಶ್ವರನ ಪುರಾತನ ದೇವಾಲಯವಿದೆ. (New

Indian Antiquery Vol. II). ಹಾಟಕೇಶ್ವರನ ಮೂಲ ಆರಾಧಕರು ಹಟ್ಟಕಾರರೇ ಇರಬೇಕಷ್ಟೆ? ಪುರಾತನ ಕಾಲದಲ್ಲಿ ಇದೂ ಹಟ್ಟಕಾರರ ಎಂದರೆ ಪಟ್ಟ (ಪಾಡಿ)ಗಳ ನಾಡು ಆಗಿದ್ದಿತು. ಗುಜರಾತದ ಗಾಝೆಟಿಯರಿನಲ್ಲಿ 'ಪಟೇಲಿಯಾ' ಎಂಬ ಒಂದು ಜನವಿದ್ದುದನ್ನು ವರ್ಣಿಸಿದೆ. ಪಟೇಲರೆಂಬ ಮನೆತನದವರು ಸಾಮಾನ್ಯವಾಗಿ 'ಪಟೇಲಿಯಾ' ಬಗೆಯವರೇ ಆಗಿದ್ದಾರೆ. 'ಪಟೇಲ' ಎಂದರೆ ಕೇವಲ ಗ್ರಾಮಾಧಿಕಾರಿ ಎಂದು ಮಾತ್ರ ಅರ್ಥವಲ್ಲ. ಇದೊಂದು ಜನವಾಚಕ ಶಬ್ದ. ಪಟೇಲಿಯಾಗಳು ಒಕ್ಕಲತನ ಮಾಡುವ ಜನವೆಂದು ಆ ಗ್ಯಾಝೆಟಿಯರು ಹೇಳುತ್ತದೆ. ಈಗಿನ ಈ ಪಟೇಲಿಯಾಗಳ ಮೂಲ ಮನೆತನಗಳು ನಾನು ಹೇಳುವ ಪಟ್ಟಿ ಅಥವಾ ಪಾಡಿಗಳ ಬುಡಕಟ್ಟಿನವರೆಂದು ನನ್ನ ಮತ.

ಈ ಅಭಿಪ್ರಾಯವು ಕೆಲರಿಗೆ ವಿಪರೀತ ಸಾಹಸದ್ದೆನಿಸಬಹುದು. ಸಾಕಷ್ಟು ಆಧಾರಗಳಿಲ್ಲದೆ ಆಡುತ್ತಿರುವ ಮಾತು ಇದಲ್ಲ. ಗುಜರಾತಿ ಮತ್ತು ಮರ್ಹಾಟಿಗಳಿಗೂ ಕಂನುಡಿಗೂ ಇರುವ ಹಲವು ಬಗೆಯ ಸಾಮ್ಯವನ್ನು ಕುರಿತು ಮಿ. ಮಾಸ್ಟರ, I. C. S. ಇವರು ರಾಯಲ್ ಏಶಿಯಾಟಿಕ್ ಜರ್ನಲಿನಲ್ಲಿ ವಿಸ್ತೃತವಾದ ಲೇಖನಗಳನ್ನು ಬರೆದಿದ್ದಾರೆ. ಗುಜರಾತಿಯಲ್ಲಿರುವ ಪಾಡಿ, ಪಟ್ಟಿ ವಾಡಿ ಎಂಬ ಗ್ರಾಮನಾಮಗಳೂ, ಪಟೇಲಿಯಾ ಎಂಬ ಪಟ್ಟಿಲ ಜನಾಂಗವೂ ಇದ್ದುದಕ್ಕೆ ಏನು ಅರ್ಥ ಹೇಳುವುದು? ಮಹಾತ್ಮಾಜೀಯವರು ಉಪ್ಪಿನ ಸತ್ಯಾಗ್ರಹಕ್ಕಾಗಿ ಆರಿಸಿದ 'ದಾಂಡಿ' ಎಂಬ ಹಳ್ಳಿಯ ಹೆಸರೇನು ಹೇಳುವುದು? ಅದೊಂದು ಸಮುದ್ರದ ದಂಡೆಯ ಊರು ಅಲ್ಲವೆ? ದಂಡೆ—ದಾಂಡಿ.

ಮರಹಟ್ಟಿಯ ಬಗೆಗೆ ಇನ್ನೂ ಒಂದು ವಿಶೇಷ ವಿಚಾರಾರ್ಹವಾದ ಸಂಗತಿಯಿದೆ. ಆರಿಯ ಮಾತು ಮೊದಲು ಮರ್ಹಾಡದಲ್ಲಿಯೇ ತಲೆಯೆತ್ತಿತೆಂದು ಮಹಾರಾಷ್ಟ್ರದ ಎಲ್ಲ ವಿದ್ವಾಂಸರೂ ಒಪ್ಪುತ್ತಾರೆ. ಮರ್ಹಾಟದ ಭಾಷೆಯಲ್ಲಿ ಕಂನುಡಿ ಹಲವು ಪದಪ್ರಯೋಗಗಳು ಇದ್ದುದಕ್ಕೆ ಏನು ಸಮಾಧಾನ ಹೇಳುವುದು? ಕಂನುಡಿಯ ಧಾತುಗಳೇ ಆರಿಯ ಮಾತಿನಲ್ಲಿವೆ! ನಡು, ತುಂಬ, ಕೊರೆ, ಕುಟ್ಟು, ಒಪ್ಪು, ಉಗುಳು, ಅಡಕು, ಒಟ್ಟು, ಹರಡು, ಪಿಟಿ, ಆಡು ಮೊದಲಾದುವಂತೂ ಸರಿಯೇ. ಅಲ್ಲದೆ ನಮ್ಮ

ಹಳನುಡಿಯ ಪ್ರಯೋಗಗಳೂ ಆರಿಯ ಮಾತಿನಲ್ಲಿ ದೊರೆಯುತ್ತವೆ. ಸೇಂದು ಧಾತುವು ಶಬ್ದಮಣಿದರ್ಪಣದಲ್ಲಿ ಅನುಸ್ವಾರಸಹಿತವಾಗಿದೆ. ಇಂದು ನಮ್ಮಲ್ಲಿ ಅದರ ಉಚ್ಚಾರದಲ್ಲಿ ಅನುಸ್ವಾರವಿಲ್ಲ. ಸೇದು ಎಂದು ಮಾತ್ರ ಹೇಳುವುದುಂಟು. ಆದರೆ ಮರಾಹಟದಲ್ಲಿ 'ಸೇಂದಣೇ' ಎಂಬ ಪ್ರಯೋಗವೇ ಇದೆ! ಇಂತಹ ಇನ್ನೂ ಹಲವು ಪ್ರಯೋಗಗಳಿವೆ. ಅವುಗಳ ವಿಸ್ತಾರಕ್ಕೆ ಇಲ್ಲಿ ಇಂಬಿಲ್ಲ. ಮಹಾನುಭಾವರ ಸಾಹಿತ್ಯ ಮತ್ತು ಜ್ಞಾನೇಶ್ವರಿಯು ಇಂತಹ ಪ್ರಯೋಗಗಳ ಆಗರವಾಗಿದೆ. ಇದನ್ನೆ ಕುರಿತು ಬೇರೆ ಪ್ರಬಂಧ ಬರೆಯಲಿದ್ದೇನೆ.

ಸಾಮಾನ್ಯವಾಗಿ ನಾಮಗಳನ್ನು ಮಾತ್ರ ಪರಭಾಷೆಯಿಂದ ಸ್ವೀಕರಿಸುವುದು ವಾಡಿಕೆಯಾಗಿದೆ. ಸಂಸ್ಕೃತ ಮತ್ತು ಕಂನುಡಿಗಳ ಸಂಪರ್ಕವು ಬಂದು ಎರಡುಮೂರುಸಾವಿರ ವರುಷಗಳಿಗೆ ಮೀರಿದ್ದರೂ ಇವುಗಳಲ್ಲಿ ನಾಮಗಳ ವಿನಿಮಯವು ಕಂಡುಬರುವುದೆ ಹೊರತು ಧಾತುಗಳನ್ನು ಇದ್ದಕಿದ್ದಂತೆ (ಏನೂ ಪ್ರತ್ಯಯಾದಿಗಳನ್ನು ಸೇರಿಸದೆ) ಎತ್ತಿಕೊಂಡು ಬಳಸಿದ್ದು ಕಂಡುಬರುವುದಿಲ್ಲ. ಆದರೆ ಆರಿಯ ಮಾತಿನಲ್ಲಿ ಮಾತ್ರ ಈ ನೋಟವು ನೋಡಲು ಸಿಕ್ಕುತ್ತಿದೆ. ಇದಕ್ಕೆ ಕಾರಣವೇನು ?

ಭಾಷೆಯು ಪ್ರೌಢ ಸ್ಥಿತಿಗೆ ಬರುವ ಮೊದಲು ಉಂಟಾದ ಸಂಪರ್ಕದಲ್ಲಿ ಮಾತ್ರ ಧಾತುಗಳನ್ನೂ ಪರಭಾಷೆಯಿಂದ ಎತ್ತಿಕೊಳ್ಳುವ ಸಂಭವವಿದೆ. ಇದನ್ನು ಎರಡು ಭಾಷೆಗಳನ್ನು ಆಡಬೇಕಾಗುವ ಚಿಕ್ಕಮಕ್ಕಳ ಮಾತಿನಲ್ಲಿ ಮನಗಾಣಬಹುದು.

ಆದಕಾರಣ ಕಂನುಡಿಯ ಧಾತುಗಳು ಆರಿಯ ಮಾತಿನ ಬಾಲ್ಯಾವಸ್ಥೆಯಲ್ಲಿಯೆ ಅವಳಲ್ಲಿ ಸೇರಿರಲಿಕ್ಕೆ ಬೇಕು. ಆರಿಯ ಮಾತಿನ ಹುಟ್ಟುಮನೆ ಮರಾಡ. ಆದುದರಿಂದ ಆರಿಯ ಮಾತಿನ ಜನ್ಮಕಾಲದಲ್ಲಿ ಅಲ್ಲಿ ಕಂನುಡಿಯು ಏಳ್ಗೆಯಲ್ಲಿರಬೇಕೆಂಬುದು ನಿಶ್ಚಿತ. ೧೦–೧೧ನೆಯ ಶತಮಾನದಲ್ಲಿ ಆರಿಯ ಮಾತಿಗೆ ಆರಂಭವಾಗಿದೆ. ಈ ಕಾಲವು ಕಂನಾಡವರು ವೈಭವ ಶಿಖರದಲ್ಲಿದ್ದ ಕಾಲ. ಗುಜರಾತ, ಮರಾಡಗಳಲ್ಲಿ ಕಂನಾಡ ವೀರರು ಅರಸುಗೆಯ್ಯುತ್ತಿದ್ದರು. ಚಲುಕ್ಯರೂ ರಾಷ್ಟ್ರಕೂಟರೂ ಆ ಭಾಗದ ಪ್ರಭುಗಳಾಗಿದ್ದರು. ಸಂಸ್ಕೃತದ ಮತ್ತು ಪ್ರಾಕೃತದ ಪ್ರಭಾವಕ್ಕೆ ತಲೆವಾಗಿ ಆ ಭಾಗದಲ್ಲಿದ್ದ

ಕಂನುಡಿಯು ನೆಲಕ್ಕೆ ಒರಗಿತು. ಪಟ್ಟೆಲರೂ, ಹಟ್ಟಿಕಾರರೂ, ಗುಜರಾತಿ-ಮರ್‍ಹಾಟಿಗಳ ಅಭಿನಿವೇಶದಿಂದ ಸಂಪೂರ್ಣವಾಗಿ ಹೊಸ ಪಂಗಡಗಳನ್ನು ಹೂಡಿದರು.

ಭಾಷೆ ಮತ್ತು ಸಂಸ್ಕೃತಿಗಳ ತುಲನಾತ್ಮಕ ಅಭ್ಯಾಸಿಗಳಿಗೆ ಗುಜರಾತ ಮಹಾರಾಷ್ಟ್ರಗಳ ಮೊದಲಿಗರು ಆರ್ಯರಾಗಿದ್ದಿಲ್ಲವೆಂಬುದು ಈ ಮೊದಲೆ ಸ್ಪಷ್ಟವಾಗಿ ಕಂಡುಬಂದಿದೆ. ಆದರೆ ಈ ಭಾಗದಲ್ಲಿ ನೆಲಸಿದ ಜನಗಳು ಯಾರೆಂಬುದನ್ನು ನಿಶ್ಚಿತವಾಗಿ ಹೇಳುವುದಕ್ಕೆ ಈ ವರೆಗೆ ಯಾವ ಸಂಶೋಧಕರೂ ಸಮರ್ಥರಾಗಿಲ್ಲ. ಪಟ್ಟಿ-ಪಾಡಿಗಳ ಈ ಪೂರ್ವವೃತ್ತಾಂತವು ಸಾಕಷ್ಟು ಬೆಳಕಿಗೆ ಬಾರದೆ ಇದ್ದುದೇ ಇದಕ್ಕೆ ಮುಖ್ಯ ಕಾರಣವು. ಆದುದರಿಂದ ಈ ವರೆಗೆ ಸಂಶೋಧಕರೆಲ್ಲ ಈ ನಾಡ ಮೊದಲಿಗರಿಗೆ 'ದ್ರಾವಿಡ'ರೆಂಬ ಸ್ಥೂಲ ಹೆಸರಿನಿಂದಲೇ ಕರೆಯುತ್ತ ಬಂದಿದ್ದಾರೆ.

The substratum over which Marathi and Gujarahi have spread, was Dravidiam' ಎಂದು ಡಾ. ಸ್ಟೆನ್ ಕೊನೊ ಅವರು ಹೇಳುವರು. ಆದರೆ 'ದ್ರಾವಿಡ'ರೆಂಬುದು ಅತ್ಯಂತ ಸ್ಥೂಲಾರ್ಥವುಳ್ಳ ಹೆಸರು. ಸ್ಥೂಲಾರ್ಥವೆಂಬುದಕ್ಕಿಂತಲೂ ಅಪಾರ್ಥದಾಯಕವೆಂಬುದೇ ಸರಿ. ಡಾ. ವಿನಸೆಂಟ ಸ್ಮಿತ್‌ನು ಇದು ತೀರ ಸಂದಿಗ್ಧಾರ್ಥವುಳ್ಳುದೂ, ಕೇವಲ ತಪ್ಪು ಕಲ್ಪನೆಯನ್ನು ಕೊಡುವುದೂ ಆಗಿದೆ. (most inappropriate and singularly misleading) ಎಂದಿದ್ದಾನೆ. ಏಕೆಂದರೆ 'ದ್ರಾವಿಡರು' ಎಂಬಲ್ಲಿ ಕಂನಾಡು, ತುಳು, ಕೊಡಗು, ತೆಲುಗು, ತಮಿಳ, ಮಲೆಯಾಳ ಮೊದಲಾದ ಈ ವರ್ಗದ ಎಲ್ಲ ಮೊದಲಿಗರೂ ಎಂದರ್ಥವನ್ನು ಪಾಶ್ಚಿಮಾತ್ಯರು ಕಲ್ಪಿಸಿಕೊಂಡಿದ್ದಾರೆ. ಆದರೆ ನಮ್ಮ ನಾಡಿನ ಪರಂಪರೆಯಲ್ಲಿ 'ದ್ರಾವಿಡ'ವೆಂದು ಕೇವಲ ತಮಿಳರಿಗೇ ಹೆಸರು. 'ದ್ರವಿಡ'ವೆಂಬ ಪದವೂ ತಮಿಳ ಎಂಬ ಶಬ್ದದಿಂದಲೇ ನಿಷ್ಪನ್ನವಾಗಿದೆ. ಆದಕಾರಣ ಮರಹಾಟ, ಗುಜರಾತುಗಳಲ್ಲಿ ದ್ರಾವಿಡರೆ ಮೊದಲು ನೆಲಸಿದ್ದರೆಂದು ಹೇಳುವಲ್ಲಿ ನಿಶ್ಚಿತವಾದ ಯಾವ ಅರ್ಥಬೋಧವೂ ಆಗುವುದಿಲ್ಲ.

ಇಲ್ಲಿ ಮೊದಲು ನೆಲಸಿದ ದ್ರಾವಿಡರು ಯಾರು? ತೆಲುಗರೆ? ತೆಲಗರ ಇತಿಹಾಸದಲ್ಲಿ ಅವರು ಈ ಭಾಗಕ್ಕೆ ಬಂದುದರ ಉಲ್ಲೇಖಗಳು ಇಲ್ಲ.

ತಮಿಳರೊ? ಇದೂ ಅಸಂಭವ. ಏಕೆಂದರೆ, ಕಂನಾಡವರನ್ನು ಮೆಟ್ಟಿ ದಾಟಿ ಮರಹಾಟ–ಗುಜರಾತಗಳ ವರೆಗೆ ತಮಿಳರು ಹಬ್ಬಿದ್ದುದನ್ನು ಹೇಳುವ ಐತಿಹಾಸಿಕ ಘಟನೆಗಳಾಗಲಿ, ದಂತಕಥೆಗಳಾಗಲಿ ನಮ್ಮ ಈ ಭಾಗದಲ್ಲಿ ಎಲ್ಲಿಯೂ ಪ್ರಚಾರದಲ್ಲಿಲ್ಲ. 'ಲಾಟ–ಕರ್ಣಾಟ'ಗಳ ಅನ್ಯೋನ್ಯ ನಿಕಟ ಸಂಬಂಧವಿದುದಕ್ಕೆ ಪ್ರಾಚೀನ ಇತಿಹಾಸದಲ್ಲಿ ಸಾಕಷ್ಟು ಆಧಾರಗಳಿವೆ. (ಕ. ನೆಲೆ ಪು. ೧೪೪—೧೫೦). ಕುಂತಲ–ಕರ್ಣಾಟಗಳ ಐಕ್ಯ, ಅಭಿನ್ನತೆಗಳು ಸಂಶೋಧಕರನ್ನೂ ಬೆರಗುಗೊಳಿಸಿವೆ. ದ್ವಾರಕೆಯಿಂದ ಕುಂತಳವು ಆರಂಭವಾಗುವುದೆಂದು ಶಾಕ್ತ ಪರಂಪರೆಯಲ್ಲಿ ಹೇಳಿದೆ. ಅಲ್ಲದೆ ವರ್ಾಟವು ಕುಂತಳವೆಂದು ರಾಜಶೇಖರಾದಿ ಕವಿಗಳು ವರ್ಣಿಸಿದ್ದಾರೆ. ಉದಯ ಸುಂದರೀ ಕಥೆಯಲ್ಲಿ ಗೋದಾವರಿ ತಟಾಕದ ಪ್ರತಿಷ್ಠಾನ ನಗರವು ಕುಂತಲದಲ್ಲಿ ಎಂದು ವರ್ಣಿಸಿದೆ. ಬಿಲ್ಹಣನು 'ಕರ್ಣಾಟೇಂದು'ವೆಂದು ವರ್ಣಿಸಿದ ಚಲುಕ್ಯ ರಾಜರಿಗೆ ಕುಂತಲಾಧಿಪರೆಂಬ ಪರ್ಯಾಯ ನಾಮವೂ ಇದೆ. ಬುಲ್ಹರನು ಕುಂತಲ ಮತ್ತು ಕರ್ಣಾಟಗಳು ಒಂದು ಎಂದು ಹೇಳಿದ್ದಾನೆ. ಆದುದರಿಂದ ಲಾಟ ಮತ್ತು ಕರ್ಾಟಗಳಲ್ಲಿ ಆರ್ಯರ ಮೊದಲು ನೆಲಸಿದ್ದವರು, ಆರ್ಯರು ಬಂದ ಬಳಿಕ ಪ್ರಾಕೃತ ಭಾಷೆಯನ್ನು ಸ್ವೀಕರಿಸಿ ಲಾಡರೂ ಮರಾಟ (ಆರಿಯು)ರೂ ಆದ ಜನಗಳು ಕಂನಾಡ ಬಳಗದವರೆಂದೇ ಸಿದ್ಧವಾಗುತ್ತದೆ. ಅಲ್ಲದೆ ಮೇಲೆ ಉಲ್ಲೇಖಿಸಿದ ಆ ಭಾಷೆಗಳ ಮೇಲೆ ಕಾಣುವ ಕಂನುಡಿಯ ಪ್ರಭಾವವೂ ಇದಕ್ಕೆ ಬೆಂಬಲವನ್ನು ಕೊಡುತ್ತಲಿದೆ. ಆದ ಕಾರಣ ಪಾಡಿ, ವಾಡಿ ಹಟ್ಟಿಗಳನ್ನು ಕಟ್ಟಿ ನೆಲಸಿದ ಆ ಜನಗಳು ಕಂನಾಡ ಪಟ್ಟಿಗಳು—ಹಟ್ಟಿಕಾರರೆ ಆಗಿದ್ದರೆಂದು ಹೇಳಬೇಕಾಗುತ್ತದೆ. ನನ್ನ ಈ ಅಭಿಪ್ರಾಯಕ್ಕೆ ಡಾ. ಎ. ವೆಂಕಟಸುಬ್ಬಯ್ಯ ಮತ್ತು ಶ್ರೀ ಗೋವಿಂದ ಪೈಗಳ ಬೆಂಬಲವು ದೊರೆತಿದೆ. ಡಾ. ವೆಂಕಟಸುಬ್ಬಯ್ಯನವರು ಕ ಸಾ. ಪತ್ರಿಕೆಯ ಆಕ್ಟೋಬರ ೧೯೩೪ರ ಸಂಚಿಕೆಯಲ್ಲಿ 'ಕಣ್ಮರೆಯಾದ ಕಂನಡ'ದ ವಿಮರ್ಶೆಯನ್ನು ಮಾಡುವಾಗ ಬರೆದುದೇನೆಂದರೆ:

ನರ್ಮದಾ ಗೋದಾವರೀ ನದಿಗಳ ಮಧ್ಯದಲ್ಲಿರುವ ಪ್ರಾಂತವೇ ಪ್ರಾಚೀನ ಕರ್ಣಾಟವೆಂದು ಈ ಗ್ರಂಥಕರ್ತರು ಉದಹರಿಸುವ ಸಾಧನ ಸಾಮಗ್ರಿಯನ್ನು ಪರೀಕ್ಷಿಸಿ ನೋಡುವಲ್ಲಿ ಅವರ ಮೇಲ್ಕಂಡ ಸಿದ್ಧಾಂತವು ನ್ಯಾಯವಾದುದೆಂದು ನಮಗೂ ತೋರುವುದು.

ಆದುದರಿಂದ ಪ್ರಾಚೀನ ಕಾಲದಲ್ಲಿ ಮರಹಟ್ಟಿಯು (ಎಂದರೆ ಮರ್ಹಾಟವೂ) ಕಂನಾಡವರ ನೆಲೆವೀಡೆಂಬಲ್ಲಿ ಸಂದೇಹವೆ ಇಲ್ಲ. ಪಟೇಲಿಯಾಗಳು ಎಂದರೆ ಪಟ್ಟಿಲರು ಯಾವ ನಾಡಿನ ಮೊದಲಿಗರೊ ಅದೂ ಅಂದು ಹಟ್ಟಿಕಾರ—ಕಂನಾಡವರ ಪ್ರದೇಶವೆ ಎಂಬುದು ಸಿದ್ಧವಾಗುತ್ತದೆ. Hatakar-Dhangars seem to have been of eonsiderable importance in Berar ಎಂದು ಎಂಥೋವೆನರು ಜಾತಿ ಜನಾಂಗಗಳೆಂಬಗ್ರಂದಲ್ಲಿ ಬರೆದಿದ್ದು ಇದನ್ನೆ ದೃಢಪಡಿಸುತ್ತದೆ.

---

## ೫. ಉತ್ತರಾಪಥದಲ್ಲಿ ಪಾಡಿಗಳು

ನರ್ಮದೆಯಿಂದ ಉತ್ತರಕ್ಕೆ ಆರ್ಯಾವರ್ತವೆಂದು ಮನುಸ್ಮೃತಿಯಲ್ಲಿ ಹೇಳಿದೆ. ಪ್ರಾಚೀನ ಕಾಲದಲ್ಲಿ ನರ್ಮದೆಯಿಂದ ದಕ್ಷಿಣ ದೇಶವು ಎಂದರೆ ದಕ್ಷಿಣಾಪಥವು ಆರ್ಯರ ನೆಲೆವೀಡಾಗಿದ್ದಿಲ್ಲ. ಬೌದ್ಧಾಯನ ಧರ್ಮಸೂತ್ರದಲ್ಲಿ ಸೌರಾಷ್ಟ್ರವನ್ನೂ ದಕ್ಷಿಣಾಪಥವನ್ನೂ ಕೂಡಿ ಹೇಳಿದೆ. (೧. ೧೨. ೧೩). ಲಾಟ-ಮರಹಾಟಗಳ ವರೆಗೂ ಪಾಡಿ-ವಾಡಿಗಳು ಇದ್ದುದು ಕಂಡುಬರುತ್ತದೆ. ಆದಕಾರಣ ಪಟ್ಟಿಗಳು ಅಥವಾ ಪಾಡಿಗಳೆಂಬ ಜನರೂ ಅಲ್ಲಿ ನೆಲಸಿದ್ದರೆಂದು ಹೇಳಿದರೆ ಸಮಂಜಸವೆಂದು ತೋರಬಹುದು. ಆದರೆ ಉತ್ತರಾಪಥದಲ್ಲಿಯೂ ಪಾಡಿಗಳು ಇದ್ದರೆಂಬುದು ಮಾತ್ರ ವಿಚಿತ್ರವಲ್ಲವೆ? ಪಟ್ಟಿ ಅಥವಾ ಪಾಡಿಗಳು ಆರ್ಯೇತರರಾಗಿದ್ದಾದರೆ ಅವರ ನೆಲೆವೀಡು ಆರ್ಯಾವರ್ತದಲ್ಲೂ ಇದ್ದುವೆಂಬುದು ಹೇಗೆ ಸಾಧ್ಯ?

ವಿಚಿತ್ರವೆನಿಸಿದರೂ ವಾಸ್ತವ-ಸತ್ಯವಿದ್ದರೆ ಅದನ್ನು ಒಪ್ಪಿಕೊಳ್ಳಲೆ ಬೇಕಷ್ಟೆ? 'Our Basic Vocabulary': 'ಸಬ ಕೀ ಬೋಲೀ' 'ಅರ್ಥಾತ್ ಭಾರತವರ್ಷ ಕೀ ಸಾಮಾನ್ಯ ಭಾಷಾ ಕೀ ಶಬ್ದಾವಲೀ' ಎಂಬ ಕೋಶವನ್ನು ಲಾಹೋರಿನ ವಿದ್ವನ್ಮಣಿ,ಆಚಾರ್ಯ ರಘುವಿರ,M.A., Ph. D., D. Lit. ಎಂಬ ವಿದ್ವಾಂಸರು ಪ್ರಕಟಿಸಿದ್ದಾರೆ. ಅದರಲ್ಲಿ ಆರ್ಯ ಭಾಷಾವರ್ಗದ ಪ್ರಾಂತಭಾಷೆಗಳಲ್ಲೆಲ್ಲ ಬಳಕೆಯಲ್ಲಿರುವ ಸಾಮಾನ್ಯ ಪದಗಳನ್ನು ಸಂಗ್ರಹಿಸಿರುವರು. ಅದರಲ್ಲಿ ಗ್ರಾಮಾರ್ಥದಲ್ಲಿ ಕೆಳಗಣ ಶಬ್ದಗಳೂ ಬಂದಿವೆ.

ವಾಟಿ, ವಾಡಿ; ಕಾಶ್ಮೀರ, ವಾರೂ; ಪಂಜಾಬ ಮತ್ತು ಸಿಂಧ ವಾಡಿ; ಬಂಗಾಲಿ, ಬಾಡಿ; ಗುಜರಾತ ಮತ್ತು ಮಹಾರಾಷ್ಟ್ರ ವಾಡಿ; ಇದರಂತೆ ಸಂಯುಕ್ತ ಪ್ರಾಂತ, ಆಸಾಮು, ಬಿಹಾರ, ಉತ್ಕಲಗಳಲ್ಲೂ ಇದು ಬಳಕೆಯಲ್ಲಿದೆ.

ಬಾಡಿ, ಬಾಡ: ಕಾಶ್ಮೀರ ವಾರ್; ವಾರೂ; ಬಂಗಾಲ, ಬಾಡ್; ಸಿಂಧ ವಾಡೋ; ನೇಪಾಳ ಬಾರ್; ಗುಜರಾತ, ಮಹಾರಾಷ್ಟ್ರಗಳಲ್ಲಿ ವಾಡಿ. ಕಾಶ್ಮಿರ; ಪಂಜಾಬ ನೇಪಾಳಗಳಲ್ಲಿ ಬಾಥಿ, ವಢ್ಢ, ಎಂದು ಮುಂತಾಗಿಯೂ ಉಂಟು. ಇದರಂತೆ ಪಾಡಿ ಎಂಬುದೂ ಹಲವು ಪ್ರಾಂತಗಳಲ್ಲಿ ಕಾಣಿಸಿಕೊಳ್ಳುತ್ತದೆ.

ಹಾಟ: ಕಾಶ್ಮೀರ, ಹಾಠ; ಪಂಜಾಬ–ಹಟ್; ನೇಪಾಳ, ಬಂಗಾಲ, ಗುಜರಾತ ಮಹಾರಾಷ್ಟ್ರಗಳಲ್ಲಿ ಹಾಟ; ಸಿಂಧಿ ಹಟು; ಇದರಂತೆ ಆಸಾಮು, ಉತ್ಕಲಗಳಲ್ಲಿ ಹಾಟ ಎಂದು ಉಂಟು.

ಪತ್ತನ ( ಪಟ್ಟಣ ): ಕಾಶ್ಮೀರ, ಪಟನ್; ಪಂಜಾಬ, ಪತ್ತಣ್; ನೇಪಾಳಿ, ಪಾಟನ್; ಸಿಂಧಿ, ಪತಣು; ಮರ್ಹಾಟ, ಪಾಟಣ; ಇದರಂತೆ ಲಹಂದಿ, ಉತ್ಕಲ, ಬಿಹಾರ ಬಂಗಾಲಗಳಲ್ಲಿ ಒಂದೊಂದು ಬಗೆಯಾಗಿದೆ. ಉತ್ತರ ದೇಶದಲ್ಲಿ ಪಂಜಾಬ ಮೊದಲಾದ ಕಡೆಗೆಲ್ಲ ಗೌಡ ಅಥವಾ ಪಟ್ಟೇಲರಿಗೆ 'ಪಟವಾರಿಗಳೆಂದು ಹೆಸರಿದೆ.

ಇಂತು ಉತ್ತರಾಪಥದಲ್ಲಿ ಎಲ್ಲೆಡೆಗೂ ವಾಡಿ, ಬಾಡಿ, ವಾಡ, ಬಾಡ, ಪೇಟ, ಹಾಟ, ಪಟ್ಟಣಗಳು ಎಂದರೆ ಪಟ್ಟಿ-ಹಟ್ಟಿಯು ವಿವಿಧ ರೂಪಗಳು ಅಲ್ಲಿ ಊರ ಹೆಸರಿನಲ್ಲಿ ಇರುವುದಂತೂ ನಿಶ್ಚಿತವಾಯಿತು. ಪಾಡಿ ಎಂಬುದು ಮಹಾರಾಷ್ಟ್ರ ಗುಜರಾತಗಳಲ್ಲಿ ಪಾಡಾ ಎಂಬ ರೂಪ ತಾಳಿರುವಂತೆ ಬಂಗಾಲ, ಬಿಹಾರಾದಿಗಳ ಕಡೆಗೆ ಪಾರಾ ಎಂದಾಗಿದೆ. ದತ್ತಪಾರಾ, ಉತ್ತರಪಾರಾ, ತೆಲ್ಲಪಾರಾ ಎಂಬೀ ಹೆಸರುಗಳು ಬಂಗಾಲ ಬಿಹಾರಗಳ ಊರುಗಳಿಗೆ ಇವೆ. ಆದುದರಿಂದ ಉತ್ತರಾಪಥದಲ್ಲಿ ಕಾಶ್ಮೀರ, ನೇಪಾಳದವರೆಗೂ ಪಟ್ಟಿ, ಪಾಡಿ, ಹಟ್ಟಿ ( ಊರು ) ಗಳು ಹಬ್ಬಿಕೊಂಡಿರುವುದರಲ್ಲಿ ಸಂದೇಹಕ್ಕೆ ಎಡೆಯೆ ಇಲ್ಲ.

ಮರ್ಾಟಿಯು ಕೋಶದಲ್ಲಿ ಪಾಡಿಯು ಪದ್ರಕ ಎಂಬ ಸಂಸ್ಕೃತ ಪದದಿಂದ ಬಂದಿತೆಂದು ಸೂಚಿಸಿದೆ. ಪದ್ರಕ–ಪಡ್ಡಅ (ಪ್ರಾಕೃತ), ಬಳಿಕ ಪಾಡಿ ಮರ್ಾಟಿ. ಆದರೆ ಪಡ್ಡಅ ಎಂಬ ಪದವೇ ಪ್ರಾಕೃತ ಕೋಶದಲ್ಲಿ ಇಲ್ಲ! ಅಲ್ಲದೆ ಪದ್ರಕದ ಎದುರು ಮೋನಿಯರ ಕೋಶದಲ್ಲಿ L. ಎಂದರೆ ಕೇವಲ ಕೋಶಕಾರರು ಸೂಚಿಸುವ ಶಬ್ದ ಎಂದು ಹೇಳಿದೆ. ಹಿಂದೀ ಕೋಶದಲ್ಲಿ ಪಾಡಿ ಶಬ್ದವು 'ಪಹನ' ಎಂಬುದರಿಂದ ಬಂದಿತೆಂಬುವರು. ಪಹನವು ಸಂಸ್ಕೃತ ಶಬ್ದವೇ ಎಂಬುದೇ ಸಂದೇಹಾಸ್ಪದ. ಯಾವ ಕೋಶದಲ್ಲೂ ದೊರೆಯುವುದಿಲ್ಲ! ಪಟ್ಟಿ, ಪಾಡಿ ಹಟ್ಟಿಗಳು ಪಡು ಧಾತುವಿನ ಕಂದುವಿನ ವರ್ಗದ ಪದಗಳಲ್ಲವೆಂದು ಸಿದ್ಧವಾಗುವ ವರೆಗೆ ಈ ಊರುಗಳು ಪುರಾತನ ಕಾಲದಲ್ಲಿ ಅಲ್ಲಿ ನೆಲಸಿದ್ದ ಪಟ್ಟಿಗಳ ಅಥವಾ ಹಟ್ಟಿಕಾರರ ಕುರುಹುಗಳೆಂದು ಹೇಳಲು ಯಾವ ಅಡ್ಡಿಯೂ ತೋರುವುದಿಲ್ಲ. ಪಾಶ್ಚಿಮಾತ್ಯ ಹಾಗೂ ಭಾರತೀಯ ಸಂಶೋಧಕರ ಬೆಂಬಲವೂ ;ಸ್ವಲ್ಪ ಬೇರೆ ಶಬ್ದಗಳಲ್ಲಿ ಈ ಮಾತಿಗೆ ದೊರೆತಿದೆ. ಪಟ್ಟಿ–ಹಟ್ಟಿ ಶಬ್ದದ ಸೂಕ್ಷ್ಮಾರ್ಥವು ತಿಳಿಯದೆ ಇದ್ದುದರಿಂದ ಅವರಿಗೆ ಇನ್ನೂ ಸರಿಯಾದ ಶಬ್ದದಿಂದ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವುದಕ್ಕಾಗಿಲ್ಲ. 'ಆರ್ಯರು ಭಾರತಕ್ಕೆ ಬರುವ ಮುನ್ನ ಈ ದೇಶದಲ್ಲಿ ದ್ರಾವಿಡರು ಎಂಬ ಜನಾಂಗವು ಪ್ರಬಲವಾಗಿ ನೆಲಸಿದ್ದಿತು,' ಎಂದು ಈಗ ವಾಡಿಕೆಯಾಗಿ ಹೇಳುವ ಸಂಪ್ರದಾಯವಾಗಿದೆ.

ಆದರೆ ಈ ಮೊದಲು ಸೂಚಿಸಿದಂತೆ 'ದ್ರಾವಿಡ'ವೆಂಬುದು ಸಂದಿಗ್ಧಾರ್ಥದ ಸ್ಥೂಲ ಶಬ್ದವು. ಅಲ್ಲದೆ ಈ ಶಬ್ದವು ಸ್ಮೃತಿಗಳ ಮೊದಲು ಬಹಳ ಹಿಂದೆ ಬಳಕೆಯಲ್ಲಿದ್ದಿತೇ ಎಂಬುದೇ ಸಂದೇಹಾಸ್ಪದವಾಗಿದೆ. ಆರ್ಯರ ಮೊದಲು ಈ ನಾಡಿನಲ್ಲಿ ನೆಲಸಿದ್ದರೆಂದು ಹೇಳುವ ದ್ರಾವಿಡರ ಉಲ್ಲೇಖವು ವೇದಗಳಲ್ಲಂತೂ ಬರಲೇ ಬೇಕಲ್ಲವೆ? 'ದ್ರಾವಿಡ' ಶಬ್ದದ ಸುಳಿವು ವೇದಗಳಲ್ಲಿ ಎಲ್ಲಿಯೂ ಕಾಣುವುದಿಲ್ಲ. ಈ ಕಾರಣದಿಂದಲೂ 'ದ್ರಾವಿಡ'ವೆಂಬ ಸ್ಥೂಲಾರ್ಥದ ಅರ್ವಾಚೀನ ಶಬ್ದವನ್ನು ಬಳಸದೆ ಇರುವುದು ಉಚಿತವಾಗಿದೆ. ಆದರೆ 'ದ್ರಾವಿಡ'ವೆಂದು ಈಗ ರೂಢವಾದುದನ್ನು ಬಿಟ್ಟುಬಿಡಬೇಕಾದರೆ ಬೇರೊಂದು ಪದವು ಹೆಚ್ಚು ಸಮರ್ಪಕವೆಂದು ಸಿದ್ಧವಾಗಬೇಕಲ್ಲವೆ?

'ದ್ರಾವಿಡ' ಶಬ್ದವು ವೇದಗಳಲ್ಲಿ ದೊರೆಯುವುದಿಲ್ಲ; ಆದಕಾರಣ ದ್ರಾವಿಡರೆಂಬ ಜನ ಮೊದಲು ಇದ್ದಿತೆಂಬ ಮಾತನ್ನೆ ಒಪ್ಪದ ಒಂದು ಪಂಗಡವಿದೆ. ಆರ್ಯರು ಮೊದಲಿನಿಂದಲೂ ಭಾರತದಲ್ಲಿ ಇದ್ದವರು; ಅವರು ಹೊರಗಣಿಂದ ಬಂದವರಲ್ಲ, ಎಂದು ಈ ಪಂಥವರ ಅಭಿಪ್ರಾಯ. ಆರ್ಯರು ಹೊರಗಣಿಂದ ಇಲ್ಲಿ ಬಂದು ನೆಲಸಿದರು, ಎಂಬುದನ್ನು ಒಪ್ಪುವುದಕ್ಕೆ ಮನಸಿಗೆ ಏನೊ ಒಂದು ಬಗೆಯ ವಿಷಾದವು ಅಡ್ಡಬರುವುದು. ಸ್ವಾಭಿಮಾನಕ್ಕೆ ಸೂಕ್ಷ್ಮವಾದ ಪೆಟ್ಟು ಬೀಳುವುದು. ಆದಕಾರಣ, ನಾವು ಆರ್ಯರು ಎಂದಿನಿಂದಲೂ ಇಲ್ಲಿಯವರೇ ಎಂಬ ಪುರಾಣಪ್ರಿಯತೆಯು ವಾದವು ಸವಿಯೆನ್ನಿಸುವುದು, ನಿಜ. ಆದರೆ ಸತ್ಯವನ್ನು ಒಪ್ಪಲು ಸ್ವಾಭಿಮಾನ, ಹೆಮ್ಮೆಗಳು ಅಡ್ಡಬರುತ್ತಿದ್ದರೆ ಅವನ್ನು ಬದಿಗೆ ಸರಿಸದೆ ಗತಿಯಿಲ್ಲ. ಇಂತಹ ಸ್ವಾಭಿಮಾನ, ದೇಶಾಭಿಮಾನ ಮೊದಲಾದ ಹೆಮ್ಮೆಗಳ ಜಂಜಾಟವೇ ಲೋಕದ ಇಂದಿನ ಕೋಲಾಹಲಕ್ಕೆ ಕಾರಣವಾಗಿದೆ. ಸತ್ಯವನ್ನು ಕಡೆಗಣಿಸುವುದರಿಂದ ಮಾನವನ ಏಳ್ಗೆಗೆ, ವಿಕಾಸಕ್ಕೆ ತಡೆಯುಂಟಾಗುವುದು.

ಪಟ್ಟಿ, ಹಟ್ಟಿಗಳೆಂಬ ಈ ಪದಗಳು ಸಂಸ್ಕೃತಕ್ಕೆ ಹೊರಗಿನವೆಂಬುದು ನಿಜವಿದ್ದರೆ, ಈ ಹೆಸರಿನ ಊರುಗಳನ್ನು ಕಟ್ಟಿಕೊಂಡು ನೆಲಸಿದ ಜನಗಳು ಆರ್ಯರಿಂದ ಭಿನ್ನರಾಗಿರಬೇಕೆಂಬುದು ಸ್ಪಷ್ಟವಿದೆ. ಆರ್ಯರಿಂದ ಭಿನ್ನರೆಂದು ಒಪ್ಪಿಕೊಳ್ಳಬಹುದಾದರೂ ಇವರು ಆರ್ಯರಿಗಿಂತ ಮೊದಲಿನವರೆಂಬುದಕ್ಕೆ ಪ್ರಮಾಣವೇನು? ಆರ್ಯರಷ್ಟಾದರೂ ಪ್ರಾಚೀನರೆಂದು ಸಿದ್ಧವಾಗಲು ವೇದಗಳಲ್ಲಿ ಎಲ್ಲಿಯಾದರೂ ಇವರ ಸ್ಪಷ್ಟವಾದ ಉಲ್ಲೇಖವು ದೊರೆಯಬೇಡವೆ?

ಯಜುರ್ವೇದದಲ್ಲಿ ಪಟ್ಟಿಗಳೆಂಬ ಜನಗಳ ಹೆಸರು ಬಂದಿದೆ. ರುದ್ರಾಧ್ಯಾಯದಲ್ಲಿ ಶಿವನು ಅದೆಷ್ಟೊ ಬಗೆಬಗೆಯ ಪಂಗಡ, ಗುಂಪುಗಳ ಒಡೆಯನಾಗಿದ್ದುದರ, ಅವರಿಂದ ಪೂಜೆಗೊಳ್ಳುತ್ತಲಿರುವ ವರ್ಣನೆಯಿದೆ. ಅಂತಹ ಅನೇಕ ಪಂಗಡಗಳ ಹೆಸರುಗಳಲ್ಲಿ 'ಪತ್ತಿ'ಗಳ ಒಂದು ಉಲ್ಲೇಖವೂ ಉಂಟು.

ನಮ ಉಚ್ಚೈರ್ಘೋಷಾಯಾऽऽಕ್ರಂದಯತೇ

ಪತ್ತೀನಾಂ ಪತಯೇ ನಮಃ। ರುದ್ರಾಧ್ಯಾಯ ೨. ೧೨

ಇದನ್ನು ಕುರಿತು 'ಹಟ್ಟಿಕಾರರು ಅಥವಾ ಕರ್ಣಾಟಕ ವೀರಕ್ಷತ್ರಿಯರು'

ಎಂಬ ಪುಸ್ತಕದಲ್ಲಿ ಈ ಮೊದಲೆ ವಿವರಿಸಿದೆ. ( ಪು. ೨೭, ೧೨೭, ೧೩೬); ಸಂಸ್ಕೃತದಲ್ಲಿ ಪಟ್ಟಣವು ಪತ್ತನವಾಗಿರುವಂತೆ ಪಟ್ಟಿಯೂ ಪತ್ತಿ ಎಂದು ಮಾರ್ಪಟ್ಟಿದ್ದುಂಟು. ಪತ್ತಿಃ ಅಥವಾ ಪಟ್ಟಿಃ ಎಂದು ಒಂದು ಜನಾಂಗದ ಹೆಸರಿದ್ದುದಾಗಿ ವರಾಹಮಿಹಿರಾದಿಗಳ ಉಲ್ಲೇಗಳಿಂದು ಕಂಡುಬರುತ್ತದೆ. ಮೋನಿಯರ ವಿಲಿಯಂಸನ ಕೋಶದಲ್ಲಿ ಪತ್ತಿಃ name of a people ಎಂದು ಹೇಳಿದೆ. ಶಿವನಿಗೆ ಹಾಟಕೇಶ್ವರನೆಂದಿರುವ ಹೆಸರಿನ ಔಚಿತ್ಯವು ಈ ಸಂದರ್ಭದಲ್ಲಿ ಚೆನ್ನಾಗಿಯೆ ಹೊರವಡುತ್ತದೆ. 'ಪತ್ತಿನಾಂ ಪತಿಃ' ಎಂದರೇ ಹಟ್ಟಿಕಾರರ ಈಶ್ವರ; ಹಾಟಕರ ಈಶ್ವರನು: ಅವನೇ ಹಾಟಕೇಶ್ವರನು. ರುದ್ರ–ಶಿವನಿಗೂ ಈ ಜನಗಳಿಗೂ ಇರುವ ನಿಕಟಸಂಬಂಧವನ್ನು ನೆನೆಸರೆ ಇಂದಿನ ಈ ಹಟ್ಟಿಕಾರರೆ ಅಂದಿನ 'ಪತ್ತಿ'ಗಳು ಎಂದು ಹೇಳಬೇಕಾಗುವುದು. ಈ ಕಾರಣದಿಂದಲೆ ಇಂದು ಹಟ್ಟಿಕಾರರೆನಿಸುವ ಜನಗಳ ಮೊದಲಿಗರೆ, ಅಂದಿನ ಪತ್ತಿ ಅಥವಾ ಪಟ್ಟಿಗಳೆಂದು ನನ್ನ ನಂಬುಗೆಯಾಗಿದೆ. ಈ ಹಟ್ಟಿಕಾರ ಗೌಡ( ಳ )ರ ಅಥವಾ ಪತ್ತಿಗಳ ಉಲ್ಲೇಖವು ಋಗ್ವೇದದಲ್ಲಿ ಇನ್ನೂ ಒಂದು ತೆರನಾಗಿ ಬಂದಿದೆ ಋಗ್ವೇದದಲ್ಲಿ ಇವರು ಯದು–ತುರ್ವಶರೆಂಬ ಹೆಸರಿನಲ್ಲಿ ವಿಖ್ಯಾತರಾಗಿದ್ದಾರೆ. ಯದು-ತುರ್ವಶರು ಗೋವಳರು, ಎಂದರೆ ಹಟ್ಟಿಕಾರರೆಂದು ವೇದದೊಳಗಿನ ವರ್ಣನೆಗಳಿಂದಲೂ ಮುಂದೆ ಮಹಾಭಾರತದ ಉಲ್ಲೇಖಗಳಿಂದಲೂ ನಿಶ್ಚಿತವಾಗಿ ಗೊತ್ತಾಗುತ್ತದೆ.

ಯದು-ತುರ್ವಶರೂ -ಗೋವಳರು; ಪತ್ತಿಗಳೆಂಬ ಜನಗಳೂ ಗೋವಳರು; ಇರಬಹುದು. ಆದರೆ ಇವೆರಡೂ ಜನಗಳು ಒಂದೇ ಬಗೆಯುವರೆಂಬುದು ಇಷ್ಟರಿಂದಲೇ ಸಿದ್ಧವಾಗುವುದಿಲ್ಲ. ಪತ್ತಿಗಳೆಂದು ಯಜುರ್ವೇದದಲ್ಲಿ ಉಲ್ಲೇಖಿತರಾದ ಜನಗಳು ಆರ್ಯರಾಗದೆ ಇರುವ ಸಂಭವವಿದೆ. ಏಕೆಂದರೆ ರುದ್ರಾಧ್ಯಾಯದಲ್ಲಿ ಪತ್ತಿಗಳಂತೆ ಉಲ್ಲೇಖಿತರಾದ ಇನ್ನೂ ಬೇರೆ ಹಲವು ಪಂಗಡಗಳ ಹೆಸರುಗಳನ್ನು ನೋಡಿದರೆ ಅವು ಆರ್ಯರ ಗುಂಪಿನ ಹೆಸರಿರುವ ಸಂಭವವಿಲ್ಲ. ಶಿವನ ಭಕ್ತಗಣದ ಈವರೆಗಣ ಪರಂಪರೆಯೂ ಈ ಮಾತಿಗೆ ಪುಷ್ಟಿಕರವಾಗಿದೆ (ಶಿವರಹಸ್ಯದಲ್ಲಿ ಹೆಚ್ಚಿನ ವಿವರಣೆ ಬಂದಿದೆ. ಪು. ೧೧; ೩೭; ೪೩; ೪೫; ೪೭; ೫೧;) ಆದುದರಿಂದ

ಅಲ್ಲಿಯ ಪತ್ತಿಗಳನ್ನು ಪಟ್ಟಿಕಾರ ಎಂದರೆ ಹಟ್ಟಿಕಾರರು ಎಂದು ಒಪ್ಪಿಕೊಂಡರೂ ಋಗ್ವೇದದೊಳಗಿನ ಯದು-ತುರ್ವಶರನ್ನು ಆರ್ಯೇತರರೆಂದು ಗ್ರಹಿಸುವುದಕ್ಕೆ ಆಧಾರಗಳೇನು? ಯಾದವರು ಆರ್ಯರೆಂದೇ ಈವರೆಗಿನ ಸಾಮಾನ್ಯವಾದ ತಿಳುವಳಿಕೆಯಾಗಿದೆ. ಆರ್ಯಪರಂಪರೆ, ವೈದಿಕಮಾರ್ಗದ ಸಂರಕ್ಷಕನಾದ ಶ್ರೀಯುತ ಕೃಷ್ಣನು ಯಾದವ ವಂಶದವನು.

ಸಿದ್ಧಯೋಗಿಯಾದ ಶ್ರೀಮಾನ್ ಕೃಷ್ಣನೊಬ್ಬನು ಆ ವೈದಿಕಸಂಪ್ರದಾಯದ ಅಭಿಮಾನಿಯಾದರೂ ಅವನೊಬ್ಬನ ಮೇಲಿಂದ ಯಾದವರೆಲ್ಲರೂ ಆರ್ಯರೇ ಆಗಿದ್ದರೆಂದು ಊಹಿಸುವುದಕ್ಕಾಗುವುದಿಲ್ಲ. ಮಹಾಭಾರತದೊಳಗಿನ ಶ್ರೀಕೃಷ್ಣನ ಪಂಗಡವೊಂದು ವೈದಿಕ ಮಾರ್ಗಕ್ಕೆ ಅನುಕೂಲವಾಗಿದ್ದರೂ ಯಾದವರ ಬಳಗದ ಇನ್ನೂ ದೊಡ್ಡ ಪಕ್ಷವೊಂದು ಅವನ ವಿಚಾರಕ್ಕೆ ಸಂಪೂರ್ಣವಾಗಿ ವಿರೋಧಿಯಾಗಿದ್ದಿತೆಂದು ಮಹಾಭಾರತದ ವರ್ಣನೆಗಳಿಂದಲೇ ಗೊತ್ತಾಗುತ್ತದೆ. ಕಂಸ, ಜರಾಸಂಧ, ಶಿಶುಪಾಲಾದಿ ಬಲಾಢ್ಯರು ಯಾದವರಿಗೆ ಹತ್ತಿಹೊಂದಿದ---ಬಳಗದ ಜನಗಳು. ಇವರೆಲ್ಲರೂ ರಾಕ್ಷಸರೆಂಬಂತೆ ಬಣ್ಣಿಸಿದ್ದಾಗಿದೆ.

ಡಾ ಪ್ರಿಲಸ್ಕಿಯವರು ಮಿಥಿಕ್ ಸೊಸ್ಯಾಟಿ ಜರ್ನಲಿನ ಬೆಳ್ಳಿಹಬ್ಬದ ಸಂಚಿಕೆಯಲ್ಲಿ ಒಂದು ಮಹತ್ವದ ಲೇಖವನ್ನು ಬರೆದಿರುವರು. ಅದರಲ್ಲಿ ಯಾದವರೂ ಅಂಧಕ-ವೃಷ್ಣಿಗಳೂ ಆರ್ಯೇತರರಾದ 'ದ್ರಾವಿಡ' ಪಂಗಡಕ್ಕೆ ಸೇರಿದವರೆಂದು ಸಂಸ್ಕೃತ, ಪಾಲೀಗ್ರಂಥಗಳಿಂದ—ವೈದಿಕ, ಬೌದ್ಧ ಪರಂಪರೆಗಳ ಆಧಾರದಿಂದಲೂ ತುಲನಾತ್ಮಕ ಭಾಷಾಶಾಸ್ತ್ರದ ಸಹಾಯದಿಂದಲೂ ಸಿದ್ಧಪಡಿಸಿರುವರು.

ಭಾರತದ ಯದು-ತುರ್ವಸುಗಳು ಋಗ್ವೇದದೊಳಗಿನ ಯದು-ತುರ್ವಶರ ಪೀಳಿಗೆಯೆಂದು ಎಲ್ಲರ ನಂಬುಗೆಯಾಗಿದೆ. ಆದಕಾರಣ ಋಗ್ವೇದದೊಳಗಿನ ಯದು-ತುರ್ವಶರೂ ಆರ್ಯೇತರರೇ ಎಂದು ಊಹಿಸಲು ಅಡ್ಡಿಯಿಲ್ಲ. ಆದರೆ ಋಗ್ವೇದದಲ್ಲಿಯೆ ಈ ಮಾತಿಗೆ ಏನಾದರೂ ಆಧಾರಗಳು ದೊರೆತರೆ ಅದು ಹೆಚ್ಚು ವಿಶ್ವಸನೀಯವಾಗುವುದು. ಋಗ್ವೇದಲ್ಲಿ ಬಂದ ಯದು-ತುರ್ವಶರ ವರ್ಣನೆಗಳಲ್ಲಿ ಅವರು ಕೆಲವು ಬಾರಿ ಆರ್ಯರ ವಿರೋಧಿಗಳಾಗಿದ್ದುದೂ ಕಂಡುಬರುತ್ತದೆ. ಯದು-ತುರ್ವಶರನ್ನು ನಾಶಮಾಡಲು

ಇಂದ್ರನನ್ನು ಪ್ರಾರ್ಥಿಸಿದ ವಸಿಷ್ಠರ ಸೂಕ್ತಗಳಿವೆ. ಇಂದ್ರನು ದಿವೋದಾಸನಿಗಾಗಿ ಒಂದೇ ದಿವಸ ಶಂಬರ ಯದು ಮತ್ತು ತುರ್ವಶರನ್ನು ಗೆದ್ದು ಅವರ ಪುರಗಳನ್ನು ಒಡೆದನೆಂದು ವರ್ಣನೆಯಿದೆ.

ಇಂದ್ರನು ಯದು-ತುರ್ವಶರ ಪುರಗಳನ್ನು ನಾಶಮಾಡಿದನಂತೆ. ಹಗೆಗಳ ಪುರಗಳನ್ನು ವಿದಾರಣಮಾಡತಕ್ಕವನೆಂದು ಇಂದ್ರನಿಗೆ ಪುರಂದರನೆಂಬ ಹೆಸರಿದ್ದುದಾಗಿ ತಿಳಿದುಬರುತ್ತದೆ. ಪುರ ಎಂದರೆ ಪಟ್ಟಣಗಳನ್ನು ಕಟ್ಟಿಕೊಂಡು ಯದು-ತುರ್ವಶರು ಇಂದ್ರನಿಗೆ ಎಂದರೆ ಆರ್ಯರಿಗೆ ಪ್ರಬಲರಾಗಿ ವಿರೋಧಿಗಳಿದ್ದುದು ಮೇಲಣ ಸೂಕ್ತದಿಂದ ಕಂಡುಬರುತ್ತದೆ. ಪುರ ಎಂದರೆ ಊರು, ಪಟ್ಟಣಗಳನ್ನು ಕಟ್ಟಿಕೊಂಡು ನೆಲಸಿದ ಕೆಲವು ಜನ, ಆರ್ಯರನ್ನು ವಿರೋಧಿಸುತ್ತಿದ್ದರೆಂದು ಇದರ ಅರ್ಥವಾಗುತ್ತದೆ. ಯದು—ತುರ್ವಶರಿಗೆ 'ದಾಸ' ರೆಂದೂ ಒಂದು ಋಚೆಯಲ್ಲಿ (೧೦. ೬೨. ೧೦.) ಹೇಳಿದೆ. ಈ ಕಾರಣಗಳಿಂದಲೂ ಯದು-ತುರ್ವಶರು ಆರ್ಯೇತರೆಂದು ಹೇಳಬೇಕಾಗುತ್ತದೆ. ಶ್ರೀ ರಾಮಪ್ರಸಾದ ಚಂದಾ ಮತ್ತು ಪ್ರೊ. ಎನ್. ಕೆ. ದತ್ತ ಅವರು ಈ ವಿಷಯಕ್ಕೆ ಸ್ವತಂತ್ರವಾದ ಲೇಖನಗಳನ್ನು ಬರೆದಿದ್ದಾರೆ.

ನನ್ನಲ್ಲಿ ಇನ್ನೂ ಒಂದು ಹೆಚ್ಚಿನ ಆಧಾರವುಂಟೆಂದು ಬಲ್ಲಿದರ ಎದುರು ಅರಿಕೆ ಮಾಡಿಕೊಳ್ಳಬೇಕಾಗಿದೆ. ಯದು ಮತ್ತು ತುರ್ವಶರೆಂಬ ಎರಡು ಪಂಗಡಗಳು ಉಂಟಷ್ಟೇ. ಈ ಹೆಸರುಗಳ ಅರ್ಥವನ್ನು ತಿಳಿದುಕೊಳ್ಳುವ ಪ್ರಯತ್ನಪಟ್ಟರೆ ಇನ್ನೂ ಕೆಲವು ಹೊಸ ಮಾತುಗಳು ಬೆಳಕಿಗೆ ಬರಲಿವೆ. ಯದು-ತುರ್ವಶರಂತೆ ವೇದದಲ್ಲಿ ಉಲ್ಲೇಖಿತವಾದ ಬೇರೆ ಪಂಗಡಗಡ ಹೆಸರುಗಳೂ ಅರ್ಥಪೂರ್ಣವಾಗಿವೆ. ಅಜಾಃ, ಎಂದರೆ ಆಡಿನವರು; ಶಿಗ್ರುಃ ಎಂದರೆ ಕುದುರೆಯವರು; ಇವುಗಳಂತೆಯೇ ಯದು, ತುರ್ವಶರ ಹೆಸರಿಗೂ ಅರ್ಥವಿರಬೇಕೆಂದು ನನ್ನ ತಿಳುವಳಿಕೆ. ಯಾದಸ್, ಯಾದಃ ಎಂಬುದು ರಸಾರ್ಥಕ ಶಬ್ದವಾಗಿದೆ. ಆದುದರಿಂದ ಯದುಗಳು ಅಥವಾ ಯಾದವರು ಎಂದರೆ (ಗೋ)ರಸ ವ್ಯವಹಾರಿಗಳೆಂದು ಅರ್ಥವಾಗುತ್ತದೆ. ಯಾದವ—ಜಾಧವರೇ ಪ್ರಮುಖ ಜನಾಂಗವಾದ ಮರಾಠಿಟರನ್ನು 'ಭಾಗ್ಯೇ ರಸ ವಿಕ್ರಯಿಣಃ' ಎಂದು ವರಾಹಮಿಹರನು ವರ್ಣಿಸಿದ್ದಾನೆ (೧೦.೮).

ತುರ್ವಶರು ಯಾದವರ ಬಳಗದವರೇ ಎಂದು ವಿದ್ಯಾನಿಧಿ ಚಿತ್ರಾವ

ಶಾಸ್ತ್ರಿ, ಪ್ಯಾಕಡೊನೆಲ್ಲ ಪ್ರಭೃತಿ ವೇದಾಭ್ಯಾಸಿಗಳ ಅಭಿಪ್ರಾಯವಿದೆ. ಈ ಜನವು ಗೋಪಾಲಕ ವೃತ್ತಿಯದು. ಆದುದರಿಂದ ಯಾದವರಂತೆ ತುರ್ವಶರೂ 'ರಸವಿಕ್ರಯಿ'ಗಳೆಂದು ಹೇಳಬಹುದಾಗಿದೆ. ತುರ್ವಶವೆಂಬುದು ನನ್ನ ಅಭಿಪ್ರಾಯದಂತೆ ಒಂದೇ ಶಬ್ದವಿಲ್ಲ. ತುರು+ವಶ ಎಂಬ ಎರಡು ಪದಗಳಿಂದಾಗ ಕೂಡು-ನುಡಿಯಿದು. ಋಗ್ವೇದದಲ್ಲಿ 'ತರ್ವ' ಎಂದು ಮಾತ್ರ ಉಲ್ಲೇಖವಿದೆ (೧೦ ೬೨ ೧೦); 'ವಶಾ' ಎಂದರೆ ವೈದಿಕ ಸಾಹಿತ್ಯ ದಲ್ಲಿ ಗೋವುಗಳೆಂದು ಅರ್ಥವಿದೆ. 'ವಶ' ಎಂದು ಒಂದು ಜನದ ಹೆಸರು; ಋಗ್ವೇದದ ತುರ್ವಶರೇ ಭಾರತದಲ್ಲಿ ತುರ್ವಸುಗಳೆಂದು ಕರೆಯಲ್ಪಟ್ಟಿದ್ದಾರೆ. ವಸು ಎಂದರೆ ಸಂಪತ್ತು. ಆರಂಭಕಾಲದ ಮಾನವರ ಸಂಪತ್ತು ಅವರು ಸಾಕಿದ ಪಶುಗಳು, ಎಂಬುದು ಸರ್ವಸಮ್ಮತವಾದ ಸಾರ್ವತ್ರಿಕ ಸಿದ್ಧಾಂತ ವಾಗಿದೆ. ಆದುದರಿಂದ Cattle, Capital ಗಳಲ್ಲಿರುವ ಅನ್ಯೋನ್ಯಸಂಬಂಧವೇ ಪಶು ಮತ್ತು ವಸುಗಳಲ್ಲಿ ಅದರಂತೆ ವಶಾ ಮತ್ತು ವಸುಗಳಲ್ಲಿ ಇದ್ದರೆ ಸೋಜಿಗವಿಲ್ಲ.

ಯಾದವರು ಗೋವಳರು; ವಶರು ಅವರ ಸಂಬಂಧಿಗಳೆಂದು ಗೋವಳ ರೆಂದು ಗೊತ್ತಾಗುವುದಲ್ಲದೆ ವಶಾ ಎಂದರೆ ಗೋವು ಎಂಬರ್ಥದ ಶಬ್ದದ ಮೂಲಕವಾಗಿಯೂ 'ಅಜ', 'ಶಿಗ್ರು'ಗಳಂತೆ 'ವಶರೂ' ಪಶುಪಾಲಕ ವೃತ್ತಿ ಯವರೆಂದು ಕಂಡುಬರುವುದು. 'ತುರ್ವಶ' ಶಬ್ದದೊಳಗಿನ 'ವಶವು' ಗೋಪಾಲನ ವೃತ್ತಿಯ ಸೂಚಕವಾಗಿರುವಂತೆ 'ತುರ್ವ' ಅಥವಾ 'ತುರು' ಎಂಬುದೂ ಅದೇ ಅರ್ಥವುಳ್ಳುದ್ದಾಗಿರಲಿಕ್ಕಿಲ್ಲವೆ?

ತುರ್ವಶವೆಂಬುದು ಚಂದ್ರ-ಮಸ್ ಅಥವಾ ಕೂಡಲ-ಸಂಗಮ ಎಂಬಂತೆ ಒಂದೇ ಅರ್ಥದ ಎರಡು ಶಬ್ದಗಳಿಂದಾದ ಜೋಡು ನುಡಿಯೆಂದು ನನ್ನ ತಿಳುವಳಿಕೆಯಾಗಿದೆ. ಇಲ್ಲಿ 'ತುರು' ಎಂದರೆ ಪಶು; ವಶ ಎಂದರೆ ತುರು; ತುರು ಎಂದರೆ ಗೋವು ಎಂದು ಕಂದಮಿಳ ವರ್ಗದ ಭಾಷೆಯಲ್ಲಿ ಅರ್ಥವಿದೆ. ಈ ಕಾರಣದಿಂದಲೂ ತುರ್ವಶರೂ ಅವರ ಬಳಗದವರೇ ಆದ ಯಾದವರೂ ಆರ್ಯೇತರರೆಂದು ಸಿದ್ಧವಾಗುತ್ತದೆ.

ಯಜುರ್ವೇದದ ಪತ್ತಿಗಳು ಎಂದರೆ ಪಟ್ಟಿ-ಪಾಡಿಗಳು ಅಥವಾ ಹಟ್ಟಿ ಕಾರರು ಆರ್ಯೇತರರು; ಹಟ್ಟಿಕಾರರು ಗೋವಳರು; ಋಗ್ವೇದದ ಯದು-

ತುರ್ವಶರೂ ಆರ್ಯೇತರರಾದ ಗೋವಳರು; ಆದಕಾರಣ ಯದು-ತುರ್ವಶರೆಂದರೂ ಒಂದೇ, ಪತ್ತಿ ಎಂದು ವರ್ಣಿಸಲ್ಪಟ್ಟ ಹಟ್ಟಿಕಾರರೆಂದರೂ ಒಂದೇ ಎಂದು ಸ್ಪಷ್ಟವಾಗುವುದು.

ಉತ್ತರ ಹಿಂದುಸ್ತಾನದಲ್ಲಿ ಸಿಂಧ, ಪಂಜಾಬ, ಕಾಶ್ಮೀರ, ನೇಪಾಳ, ಆಸಾಮು, ಬಂಗಾಲ, ಬಿಹಾರ, ಉತ್ಕಲ, ಸಂಯುಕ್ತಪ್ರಾಂತ ಮೊದಲಾದ ಕಡೆಗಳಲ್ಲೆಲ್ಲ ಹಬ್ಬಿಕೊಂಡಿರುವ ಪಟ್ಟಿ, ಪತ್ತನ, ಪಾಡಿ, ವಾಡಿಗಳ ಮೂಲ ಕಾರಣರು ಯಾರಿರಬೇಕೆಂಬ ಮಾತಿನ ಮೇಲೆ ಹಟ್ಟಿಕಾರ ಯದು-ತುರ್ವಶರಿಂದ ಈಗ ಚೆನ್ನಾಗಿಯೆ ಬೆಳಕು ದೊರೆಯುತ್ತಲಿದೆ ಈ ವರೆಗೆ ಸಂಶೋಧಕ ವಿದ್ವಾಂಸರು 'ದ್ರಾವಿಡ'ವೆಂದು ಬಳಸುತ್ತಿದ್ದ ಸಂದಿಗ್ಧಾರ್ಥದ ಪದಕ್ಕೆ ಪ್ರತಿಯಾಗಿ ನಿಶ್ಚಿತಾರ್ಥದ ಉಚಿತವಾದ ಪದವು ದೊರೆತಂತಾಯಿತು. ಇನ್ನು ಮೇಲೆ 'ದ್ರಾವಿಡ' ಎಂಬುದರ ಬದಲು ಪತ್ತಿಗಳು ಅಥವಾ ಯದು-ತುರ್ವಶರು ಎಂಬ ಪದವನ್ನು ಬಳಸುವುದು ಸಮರ್ಪಕವಾಗಿದೆ.

ಈ ಪತ್ತಿಗಳು ಅಥವಾ ಯದು-ತುರ್ವಶರು ದಕ್ಷಿಣ ದೇಶದ ಈಗಿನ ಯಾವ ಪ್ರಾಂತಕ್ಕೆ ಮುಖ್ಯವಾಗಿ ಹೆಚ್ಚು ಸಂಬಂಧಿಸಿದವರು? ಎಂಬುದು ಒಂದು ಮಹತ್ವದ ಪ್ರಶ್ನೆಯಾಗಿದೆ. ಏಕೆಂದರೆ ಪಟ್ಟಿ, ಪಾಡಿ ಎಂಬ ನುಡಿಯು ಕಂದಮಿಳ ವರ್ಗದ ಎಲ್ಲ ಭಾಷೆಗಳಲ್ಲಿಯೂ ಸುಮಾರಾಗಿ ದೊರೆಯುತ್ತದೆ. ಆದಕಾರಣ ಪಟ್ಟಿ-ಪಾಡಿಯು ಈ ಜನ ತೆಲುಗರೆ? ತಮಿಳರೆ? ಮಲೆಯಾಳಿಗಳೆ? ಕಂನಾಡವರೆ? ಇದನ್ನು ನಿರ್ಧರಿಸುವುದಕ್ಕೆ ಏನಾದರೂ ಪ್ರಮಾಣಗಳುಂಟೆ?

ಈ ವರೆಗೆ ಬೆಳಕಿಗೆ ಬಂದಿರುವ ಹಲವು ಸಂಗತಿಗಳ ಮೇಲಿಂದ ಇವರು ಕಂನಾಡವರ ಮೊದಲಿಗರಾಗಿರಬೇಕೆಂದು ನನ್ನ ಅಭಿಪ್ರಾಯವಾಗಿದೆ. ಅಂತಹ ಕೆಲವು ಸಂಗತಿಗಳನ್ನು ಬಲ್ಲಿದರ ಅವಗಾಹನೆಗಾಗಿ ಕೆಳಗೆ ಸೂಚಿಸುತ್ತಲಿದ್ದೇನೆ.

೧ ವೈದಿಕ ಸಾಹಿತ್ಯದಲ್ಲಿ ಹಲವು 'ದ್ರಾವಿಡ' ವರ್ಗದ ಪದಗಳು ಕಾಣಿಸಿಕೊಳ್ಳುತ್ತವೆಂದು ಅನೇಕ ಸಂಶೋಧಕರು ಕಂಡುಹಿಡಿದಿದ್ದಾರೆ. ಅಣು, ಅರಣಿ, ಮರ್ಕಟ, ಅಟವಿ, ಅಲರ್ಕ, ಮಟಚಿ ಮುಂತಾದುವುಗಳ ವಿಷಯಕ್ಕೆ ಚರ್ಚೆಗಳು ಆಗಿವೆ. ಇವುಗಳಲ್ಲಿ 'ಮಟಚಿ' ಯನ್ನು ಕುರಿತು

ಡಾ. ದೇವದತ್ತ ಭಂಡಾರಕರ, ಶ್ರೀ. ಪಾಠಕ ಮೊದಲಾದ ವಿದ್ವಾಂಸರು ಲೇಖನಗಳನ್ನು ಬರೆದಿದ್ದಾರೆ. ಅದು ಸಂಸ್ಕೃತೇತರ ಭಾಷೆಯ ಪದವೆಂಬ ಬಗೆಗೆ ಭಿನ್ನಾಭಿಪ್ರಾಯವೆ ಇಲ್ಲ. ಈ 'ಮಟಚಿ'ಯು ಕಂನಾಡಿನಲ್ಲಿ ಮಿಡಚೆ ಎಂಬುದಾಗಿ ಈಗಲೂ ಬಳಕೆಯಲ್ಲಿದೆ. ತೆಲುಗು ತಮಿಳಗಳಲ್ಲಿ ಈ ರೂಪ ದಲ್ಲಿ ಈ ಪದವಿಲ್ಲ.

೨ ಬಲುಚಿಸ್ತಾನದ ಬದಿಯಲ್ಲಿ 'ಬ್ರಾಹೂಯಿ' ಎಂಬ ದ್ರಾವಿಡ ವರ್ಗದ ಒಂದು ಭಾಷೆಯು ಈಗಲೂ ಸ್ವಲ್ಪ ಉಳಿದುಕೊಂಡಿದೆ. ಈ ಭಾಷೆಯ ಮೊದಲಿಗರು ದಕ್ಷಿಣದಿಂದ ಇಲ್ಲಿ ಬಂದು ನೆಲಸಿದರೆಂಬುದಕ್ಕಿಂತಲೂ ಮೊದಲು ಇಲ್ಲಿಯೂ ಆ ಭಾಷೆ ಬಳಕೆಯಲ್ಲಿದ್ದಿತೆಂಬುದೇ ಸರಿ, ಎಂದು ಡಾ ಗ್ರಿಯರಸನ್‌ರು 'ಲಿಂಗ್ವಿಸ್ಟಿಕ್ ಸರ್ವೇ ಆಫ್ ಇಂಡಿಯಾ' ಗ್ರಂಥದ ಮುನ್ನುಡಿಯ ಸಂಪುಟದಲ್ಲಿ ಸಕಾರಣವಾಗಿ ವಿವರಿಸಿದ್ದಾರೆ. ಇದು ಬಹಳ ಪುರಾತನ ಕಾಲದಿಂದ ಇದ್ದ ಭಾಷೆಯ ಅವಶೇಷ. ಜುಲೇಸ್ ಬ್ಲೊಚ್ ಎಂಬ ಫ್ರಾನ್ಸದ ಸಂಶೋಧಕ ವಿದ್ವಾಂಸರ ಅಭಿಪ್ರಾಯದ ಮೇರೆಗೆ ಇದು ಕಂನುಡಿಗೆ ಹೆಚ್ಚು ಸಮೀಪವಾಗಿದೆ. (.. in Dravidian Brahui is connected with Canara, Kurkh, Malto: ಇನ್ನೊಂದೆಡೆಗೆ Canara-Kurkh-Brahui group; Pre-Aryan and Pre-Dravidian, p. 37; 58;)

೩ ಭೌಗೋಲಿಕ ದೃಷ್ಟಿಯಿಂದ ನೋಡಿದಲ್ಲಿ ಉತ್ತರ ಭಾರತ ದೊಡನೆ ತಮಿಳರಿಗಿಂತಲೂ ತೆಲುಗು ಮತ್ತು ಕಂನಾಡವರ ಸಂಬಂಧವೇ ಹೆಚ್ಚು ಶಕ್ಯವೂ ಸಾಧ್ಯವೂ ಆಗಿದೆ.

ಇನ್ನು, ತೆಲುಗು ಮತ್ತು ಕಂನಾಡುಗಳಲ್ಲಿ, ಭಾಷೆ ಮತ್ತು ಐತಿಹಾ ಸಿಕ ಘಟನೆಗಳು ಉತ್ತರ ಹಿಂದುಸ್ತಾನದಲ್ಲಿ ಕಂನಾಡವರ ಪ್ರಭಾವವೇ ವಿಶೇಷವಾಗಿದ್ದುದನ್ನು ಹೇಳುತ್ತವೆ.

i. ಭಾಷೆಯ ದೃಷ್ಟಿಯಿಂದ ತಮಿಳು ಮತ್ತು ಕಂನುಡಿಗಳು ಹತ್ತಿರ ಹತ್ತಿರದವು; ಮತ್ತು ಪ್ರಾಚೀನ. ಆಂಧ್ರವೆಂಬ ಜನವಾಚಕ ಶಬ್ದವು ಬ್ರಾಹ್ಮಣ ಗ್ರಂಥಗಳಲ್ಲಿ ದೊರೆಯುವುದು; ಇದನ್ನುಳಿದರೆ ತೆಲುಗರ ಭಾಷೆ

ಮತ್ತು ಇತಿಹಾಸಗಳಲ್ಲಿ ಪುರಾತನದ ಕುರುಹುಗಳು ದೊರೆಯುವುದಿಲ್ಲ. ಇವರ ಸಾಹಿತ್ಯಕ್ಕೆ ಆರಂಭವು ೧೧ನೆಯ ಶತಮಾನದ ತರುವಾಯ.

ಕರ್ನುಡಿಯಲ್ಲಿ ತಮಿಳಿಗಿಂತಲೂ ಪ್ರಾಥಮಿಕ ಸ್ಥಿತಿದರ್ಶಕ ಶಬ್ದರೂಪಗಳು ಉಂಟೆಂದು ದಿವಂಗತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರ ಅಭಿಪ್ರಾಯವಿದ್ದಿತು.

ii. ಸಾತವಾಹನರಿಗೆ ಆಂಧ್ರರೆಂಬುದು ತಪ್ಪು, ಎಂದು ಡಾ. ಸುಕಥನಕರರು ಒಂದು ಲೇಖನದಲ್ಲಿ ಪ್ರತಿಪಾದಿಸಿದ್ದಾರೆ. ಪುರಾಣಗಳ ಹೊರತು ಸಾತವಾಹನರಿಗೆ ಆಂಧ್ರರೆಂದ ಬೇರೆ ಆಧಾರಗಳೆ ಇಲ್ಲ. ಸಾತವಾಹನಿ ರಠ, ಸಾತವಾಹನಿ ಹರಪೆಂದು ಉಲ್ಲೇಖವಿರುವ ಶಾಸನಗಳು ಬಳ್ಳಾರಿ ಜಿಲ್ಲೆಯ ಹಿರೇಹಡಗಲಿ ಮತ್ತು ಮ್ಯಾಕಡೋಣಿ ತಾಲ್ಲೂಕುಗಳಲ್ಲಿ ದೊರೆತಿದ್ದು ಅದು ಕರ್ನಾಡ ಭಾಗವಾಗಿದೆ. ಸಾತವಾಹನರಲ್ಲಿ ಪುಲಿಮಾಯಿ, ಹಾಲ ಎಂಬ ಹೆಸರಿನ ರಾಜರಾದರು. ಪುಲಿಮಾಯಿಯಂತೆ ಪುಲಿಕೇಶಿ, ಪುಲಿಕಾಲ ಎಂಬೀಬಗೆಯ ಹೆಸರು ಕರ್ನಾಡಿನ ರಾಜರಿಗೇ ಇವೆ. 'ಹಾಲ' ವೆಂಬ ಹೆಸರಂತು ತೆಲುಗು ಇರುವುದು ಸಾಧ್ಯವಿಲ್ಲ. ಏಕೆಂದರೆ ತೆಲುಗಿನಲ್ಲಿ ಅದಕ್ಕೆ ಅಪಾರ್ಥವಿದೆ. ಹಾಲವೆಂಬುದಕ್ಕೆ ಮದ್ಯವೆಂಬ ಸಂಕುಚಿತಾರ್ಥವು ಮಾತ್ರ ತೆಲುಗಿನಲ್ಲಿದೆ.

iii. ಸ್ವತಃ ಶಾತವಾಹನರೇ ತಮ್ಮನ್ನು ಆಂಧ್ರರೆಂದು ಎಲ್ಲಿಯೂ ಹೇಳಿಕೊಂಡಿಲ್ಲ. ಗೌತಮಿಾ ಪುತ್ರ, ವಾಸಿಷ್ಠಿ ಪುತ್ರ—ಸಾತಕರ್ಣಿಗಳೆಂದು ಹೆಸರಿಸಿದ್ದಾರೆ. ಸಪ್ತಶತಿಯನ್ನು ಬರೆದ ಹಾಲನೆಂಬ ರಾಜನು ಕುಂತಲಾಧಿಪತಿಯೆಂದು ಭುವನಪಾಲನು ಸಪ್ತಶತಿಯ ತನ್ನ ಟೀಕೆಯಲ್ಲಿ ಹೇಳಿದ್ದಾನೆ (ಹಾಲ ಇತಿ ಶಾತವಾಹನಸ್ಯ ಕುಂತಲಾಧಿಪ ನೃಪಸ್ಯ ನಾಮ).

iv. ಕುಂತಲವು ಕರ್ನಾಡು. Karnataka is another name for Kuntaldesh ಎಂದು ನಂದೋಲಾಲ ಡೇಯವರು ಭಾರತವರ್ಷದ ಪ್ರಾಚೀನ ಸ್ಥಳಗಳನ್ನು ಕುರಿತು ಬರೆವಾಗ ಹೇಳಿದ್ದಾರೆ. ಆದಕಾರಣ ಕುಂತಲರೆಂದರೆ ಕರ್ನಾಡವರು; ಎಂದರೆ ಕನ್ನರೆಂದು ಅರ್ಥ. ತಮಿಳ ಪರಂಪರೆಯಲ್ಲಿ ಶಾತಕರ್ಣಿಗಳನ್ನು 'ನೂರುವರ್ ಕನ್ನರ್' ಎಂದು ಹೇಳಿದೆ.

ಆದಕಾರಣ ಸಾತವಾಹನರನ್ನು ಆಂಧ್ರರು, ಆಂಧ್ರಭೃತ್ಯರೆಂದು ಹೇಳುವುದು ತೀರ ವಿಪರೀತ. ಪುರಾಣಗಳು ಒಂದು ಕಡೆ; ನಾಣ್ಯ, ಶಾಸನ ಮತ್ತು ಸಾಹಿತ್ಯಗ್ರಂಥಗಳು ಇನ್ನೊಂದು ಕಡೆ. ಇವುಗಳಲ್ಲಿ ಶಾಸನಾದಿಗಳಿಗಿಂತ ಪುರಾಣಗಳು ವಿಶ್ವಾಸಾರ್ಹವೆಂಬುದು ಕೇವಲ ಅಶಾಸ್ತ್ರೀಯವಾಗಿದೆ.

ಸಾತವಾಹನರ ಮುಖ್ಯ ಶಾಖೆಯು ಗೋದಾತೀರದ ಪ್ರತಿಷ್ಠಾನದಲ್ಲಿ ಆಳಿತು. ಇವರ ಶಾಖೆಯು ಆಂಧ್ರದೇಶದಲ್ಲೂ ನೆಲಸಿತ್ತು. ಇಷ್ಟರಿಂದ ಸಾತವಾಹನರು ಆಂಧ್ರರೆಂಬುದು ಸರಿಯಲ್ಲ. ಬಾದಾಮಿಯ ಚಾಲುಕ್ಯರ ಒಂದು ಶಾಖೆಯು ಪುಲಿಕೇಶಿಯ II ತಮ್ಮನಾದ ವಿಷ್ಣುವರ್ಧನಿಂದ ತೆಲುಗುನಾಡಿನಲ್ಲಿ ಬೇರೂರಿ ಅಲ್ಲಿ ರಾಜ್ಯವಾಳಿದ್ದುಂಟು ಅದರಿಂದ ಚಾಲುಕ್ಯರೆಲ್ಲ ಆಂಧ್ರರೆಂದು ಹೇಳುವುದು ಯುಕ್ತವೆ?

ಪ್ರತಿಷ್ಠಾನದಲ್ಲಿ ಆಳಿದ ಕುಂತಲ ಸಾತಕರ್ಣಿಗಳ ಸಂಬಂಧವೇ ಉತ್ತರ ಭಾರತದೊಡನೆ ಹೆಚ್ಚಾಗಿ ಬಂದಿದೆ. ಶಾಲಿವಾಹನ ಶಕದ ಸಂಸ್ಥಾಪಕರೂ ಪ್ರತಿಷ್ಠಾನದ ಕುಂತಲ ಸಾತವಾಹನರೇ.

ಗಂಗರು, ಚಲುಕ್ಯರು. ರಾಷ್ಟ್ರಕೂಟರುಗಳು ಕಂನಾಡವರು. ಇವರೆಲ್ಲರ ಸಂಬಂಧವು ಉತ್ತರ ಹಿಂದುಸ್ಥಾನದೊಡನೆ ಬಂದಿದೆ. ತೆಲುಗರ ಇತಿಹಾಸದೊಳಗಿನ ಯಾವ ಯಾವ ಅರಸುಮನೆತನಗಳು ಉತ್ತರ ಹಿಂದೂದೇಶದಲ್ಲಿ ತಮ್ಮ ಪ್ರಭಾವವನ್ನು ಬೀರಿದುವೆಂಬುದು ಈವರೆಗೆ ಏನೂ ಬೆಳಕಿಗೆ ಬಂದಿಲ್ಲ.

೪. ಉತ್ತರದ ಒಂದೊಂದು ದೇಶದ ನಿಕಟ ಸಂಬಂಧವು ಕಂನಾಡಿನೊಡನೆ ಇರುವಷ್ಟು ತೆಲುಗು ದೇಶದೊಡನೆ ಇದ್ದುದು ಕಂಡುಬರುವುದಿಲ್ಲ.

i. ಅಶೋಕನ ಶಾಸನಗಳು ಕಂನಾಡಿನಲ್ಲಿಯೆ ಹೆಚ್ಚಿವೆ.

ii. ಸಿಂದಿಗೆ, ಸಿಂದೋಗಿ, ಸಿಂಧನೂರ, ಸಿಂಧೂರ, ಸಿಂದಘಟ್ಟ ಮೊದಲಾದ ಊರುಗಳೂ ಸಿಂದವಾಡಿ ಎಂಬ ದೇಶಭಾಗವೂ ಕಂನಾಡಿನ ವೈಶಿಷ್ಟ್ಯವಾಗಿದೆ. ಈ ಹೆಸರು ಸಿಂಧುದೇಶದೊಡನೆ ಇದ್ದ ಹತ್ತುಗೆಯನ್ನು ಹೇಳುತ್ತವೆ. ಸಿಂದರೆಂಬ ಹೆಸರಿನ ಅರಸು ಮನೆತನವೆ ಒಂದು ಆಗಿಹೋಯಿತು.

iii. ಚಿನಾಬ ಎಂಬ ನದಿಗೆ ಪ್ರಾಚೀನ ಕಾಲದಲ್ಲಿ ಚಂದ್ರಭಾಗಾ ಎಂಬ ಹೆಸರಿದ್ದಿತು. ಆ ಹೆಸರನ್ನೆ ಮತ್ತೆ ಭೀಮಾನದಿಗೆ ಪಂಡರಿಗೆ (ಪಂಢರಪುರ) ಹತ್ತಿರ ಇಟ್ಟುಕೊಂಡುದು, ದಕ್ಷಿಣ ಗಂಗಾ, ದಕ್ಷಿಣ ಕಾಶಿ ಎಂಬಂತೆ ಕಂನಾಡವರಿಗೆ ಮೊದಲಿನ ಆ ಚಂದ್ರಭಾಗೆ ( ಚಿನಾಬ ) ವಿಷಯಕ್ಕಿರುವ ಅಕ್ಕರೆಯನ್ನೇ ತೋರಿಸುತ್ತದೆ.

iv. ಶೈವ ಸಂಪ್ರದಾಯದ ಪರಂಪರೆಯಲ್ಲಿ ಕಾಶ್ಮೀರ ಮತ್ತು ಕಂನಾಡಿನಲ್ಲಿ ಹೋಲಿಕೆಯಿದೆ. ಬಿಲ್ಹಣನಂತಹ ಪಂಡಿತರು ಕಂನಾಡ ರಾಜರಲ್ಲಿ ಆಶ್ರಯಕ್ಕಾಗಿ ಬರುತ್ತಿದ್ದರು. ಸರಸ್ವತೀ ತೀರದ ಕಾಶ್ಮೀರೀ ಬ್ರಾಹ್ಮಣರೆಂದು ಖ್ಯಾತಿಯಿರುವ ಸಾರಸ್ವತರು ಮತ್ತು ಸಹವಾಸಿಗಳು ಇಲ್ಲಿ ಇಂದು ಕಂನಾಡವರೆ ಆಗಿದ್ದುದುಂಟು.

v. ನೇಪಾಳದಲ್ಲಿ ಕರ್ಣಾಟ ಕ್ಷತ್ರಿಯರ ಒಂದು ಮನೆತನವು ರಾಜ್ಯವಾಳಿದ್ದುದು ಆ ನಾಡಿನ ಇತಿಹಾಸದಲ್ಲಿಯೇ ಇದೆ.

vi. ಮಿಥಿಲೆ–ಬಿಹಾರದಲ್ಲಿ ಆಳಿದ ನಾನ್ಯದೇವನೆಂಬವನು ಭರತನ ನಾಟ್ಯಶಾಸ್ತ್ರಕ್ಕೆ ಟೀಕೆ ಬರೆದಿದ್ದು ಅದರಲ್ಲಿ ತಾನು ಕರ್ಣಾಟಕುಲದವನೆಂದು ಹೇಳಿದ್ದಾನೆ.

vii. ಬಂಗಾಳದ ಸೇನರಾಜರು ಕರ್ಣಾಟದ ಬ್ರಹ್ಮಕ್ಷತ್ರಿಯ ವರ್ಣದವರೆಂದು ಅವರ ಶಾಸನಾದಿಗಳಲ್ಲಿ ಹೇಳಿದ್ದು ಬೆಳಕಿಗೆ ಬಂದಿದೆ— ಗೌಡ ( ಬಂಗಾಲ ) ದೇಶದಿಂದ ಬಂದವರೆಂದು ಪರಂಪರೆಯು ಹೇಳುವ ಗೌಡ ಸಾರಸ್ವತರ ನೆಲೆವೀಡು ಕಂನಾಡು.

viii. ಉತ್ಕಲದ ಗಂಗರಾಜರೂ ಕಂನಾಡ ಗಂಗ ಅರಸರೂ ಮೂಲ ಒಂದೇ ಮನೆತನದವರು: ಗಂಗಾತೀರದಿಂದ ಹೊರಟವರೆಂದು ತಿಳಿದು ಬರುತ್ತದೆ.

ix. ಇವೆಲ್ಲ ಹೆಚ್ಚಾಗಿ ಕ್ರಿಸ್ತಶಕದ ನಂತರ ಸಂಬಂಧಗಳೆಂಬುದು ನಿಜ. ಆದರೆ ಕಂನಾಡ ಅರಸುಕುಲಗಳು ಹೇಳಿಕೊಳ್ಳುವ ತಮ್ಮ ಪೂರ್ವ ಪರಂಪರೆಯನ್ನು ಲಕ್ಷಿಸಿದರೆ ಈ ಸಂಬಂಧವು ಅತಿಪುರಾತನ ಕಾಲದವರೆಗೂ ನಿಶ್ಚಿತವಾಗಿ ಹೋಗಿ ಮುಟ್ಟುತ್ತದೆ. ಚಲುಕ್ಯರೂ ರಾಷ್ಟ್ರಕೂಟರೂ ತಾವು ಯದುವಂಶದವರು, ಭೋಜಕುಲದವರು ಎಂದು ಹೇಳಿದ್ದುಂಟು. ಗಂಗರು

ತುರ್ವಸುವಿನ ಸಂತತಿಯೆಂದು ಇತಿಹಾಸವು ಹೇಳುತ್ತದೆ. ವಿಜಯನಗರದ ತುಳುವಂಶದ ಅರಸರು ತುರುವಂಶದವರೆಂದು ತಿಳಿದು ಬರುತ್ತದೆ.

x. ಗೋವೆಯಲ್ಲಿ ಗೌಡರೆಂಬ ಒಂದು ಒಕ್ಕಲರ ಜಾತಿಯಿದ್ದು, ಬಂಗಾಳದತ್ತಣಿಂದ ಬಂದುದಾಗಿ ಅವರು ಹೇಳುವರೆಂದು ಮಹಾರಾಷ್ಟ್ರ ಶಬ್ದಕೋಶಕಾರರು ಬರೆಯುತ್ತಾರೆ. ಗೌಡ ಸಾರಸ್ವತರು ಮೊದಲು ನೆಲೆಯಾದುದೂ ಗೋವೆಯಲ್ಲಿಯೇ. ಗೋವೆಯೆಂದರೆ ಗೋಪರಾಷ್ಟ್ರ. ಗೌಡ (ಗೌಳ)ರು ಬಂದು ನೆಲಸಿದ ಪ್ರದೇಶಕ್ಕೆ ಗೋಪರಾಷ್ಟ್ರವೆಂಬ ಹೆಸರು ಪ್ರಾಪ್ತವಾಗುವುದು ಸಹಜವಾಗಿದೆ.

ಇದರಂತೆ 'ತುಳು' ನಾಡ ಹೆಸರಿನಲ್ಲಿಯೂ ತುಂಬ ಸ್ವಾರಸ್ಯವಿದೆ. ತುಳುನಾಡಿಗೂ ಗೋಪರಾಷ್ಟ್ರವೆಂಬ ಇನ್ನೊಂದು ಹೆಸರಿದೆ. ತುಳು ಮನೆತನದ ವಿಜಯನಗರದ ಅರಸರು 'ತುರ್ವಸು'ವಿನ ವಂಶಜರಂತೆ. ಎಂದರೆ ಗೋವಳರೆಂದು ಅರ್ಥ. ಆದುದರಿಂದ ತುಳುವರು ಎಂದರೆ ಗೋವಳರು; ಇದರಿಂದ ತುಳು ಶಬ್ದದ ಮೂಲವು 'ತುರು' ಎಂದಿರಬೇಕೆಂದು ನನ್ನ ಮತ. ತುರು ಇದುವೆ ತುಳುವಾಗಿದೆ; ಇದರಿಂದ ತುಳುವರು ಎಂದರೆ ತುರುವರು ಕಂನಾಡ ಹಟ್ಟಿಕಾರರೇ ಆಗಿರುವರೆಂಬುದು ಸಿದ್ಧವಾಗುತ್ತದೆ. ಕಂನಾಡಿಗೂ ತುಳುನಾಡಿಗೂ ಇರುವ ನಿಕಟಸಂಬಂಧವು ಇದನ್ನೆ ದೃಢಪಡಿಸುತ್ತದೆ. ಗೋಪಾಡಿ ಮೊದಲಾದ ತುಳುನಾಡಿನಲ್ಲಿರುವ ಪಾಡಿಗಳು ಹಟ್ಟಿಗಳಂತೆ ತುರುಕಾರರ ಕುರುಹಗಳೆ ಆಗಿವೆ.

ಇಂತಿವೆಲ್ಲ ಕಾರಣಗಳಿಗಾಗಿ ಉತ್ತರಾಪಥದಲ್ಲಿರುವ ಪಟ್ಟಿ, ಪಾಡಿ, ವಾಡಿ, ಹಟ್ಟಿಗಳಿಗೆ ಕಾರಣರಾದವರು ಕಂನಾಡ ಮೊದಲಿಗರೆಂದೇ ನನ್ನ ಗ್ರಹಿಕೆಯಾಗಿದೆ. ಮತ್ತು ವೇದಗಳಲ್ಲಿ ಕಾಣಿಸಿಕೊಳ್ಳುವ ಪತ್ತಿ (ಪಟ್ಟಿ) ಗಳೂ: ಯದು-ತುರ್ವಶರೂ ಆ ಮೊದಲಿಗರಾಗಿರಬೇಕೆಂದೂ ನನ್ನ ತಿಳುವಳಿಕೆಯಾಗಿದೆ.

ೱ. ಆಸಾಮು, ಬಂಗಾಳ ಮತ್ತು ಉತ್ಕಲಗಳ ಹೆಸರುಗಳು ಇನ್ನೂ ವಿಚಾರಾರ್ಹವಾಗಿವೆ. ಆಸಾಮುದಲ್ಲಿ ಗೌಹಟ್ಟಿ, ಸಿಲಹಟ್ಟಿಗಳುಂಟು. ಬಂಗಾಳದ ವಿಚಾರದಲ್ಲಿ ಇನ್ನೂ ಹೆಚ್ಚಿನ ಸಂಗತಿಗಳು ಗೊತ್ತಾಗಲು ಸಾಧ್ಯವಾಗಿದೆ. ಡಾ. ಸುನೀತಿಕುಮಾರ ಚಟರ್ಜಿಯವರು ಬಂಗಾಲಿ

ಗ್ರಾಮನಾಮಗಳ ಮೇಲಾಗಿರುವ 'ದ್ರಾವಿಡ'ದ ಪ್ರಭಾವವನ್ನು ಕುರಿತು ಲೇಖನಗಳನ್ನು ಬರೆದಿರುವರು. ರಮೇಶಚಂದ್ರ ಮುಜುಮದಾರರ 'ಬಂಗಾಲಾ ಭಾಷಾಯೂ ದ್ರಾವಿಡಿ ಉಪಾದಾನ' ಎಂಬ ಬರೆಹವೂ ಈ ವಿಷಯದ ಮೇಲಿದೆ. ಬಂಗಾಲದ ಊರುಗಳಲ್ಲಿ ಸಾಂತಿ, ಗಡ್ಡ, ಕುಂಬಿ, ಪೊಲ, ಊರು, ಹಟ್ಟಿ ಎಂಬುವು ದೊರೆಯುತ್ತವೆ. ಘೋಷ–ಪಾಟಾ, ಸಾಂತಿ–ಪಾಟಕ ಎಂಬ ಕೂಡಲಸಂಗಮ ಜಾತಿಯ ಊರ ಹೆಸರುಗಳುಂಟು. ಪಾಟಕ ಎಂಬ ಪೇಟೆಯ ಮೊದಲ ರೂಪವನ್ನು ಕಂಡುಕೊಳ್ಳಬಹುದು. (ದತ್ತ, ಉತ್ತರ) ಪಾರಾಗಳಂತೆ 'ಊರಾ'ಗಳೂ ಬಂಗಾಲದಲ್ಲಿವೆ. ಬಂಕೂರಾ, ಹವೂರಾ, ಚಾಕೂರಾ ಮುಂತಾದುವು ಇದಕ್ಕೆ ನಿದರ್ಶನ. ಬೀಡು ಎಂಬುದು ಭಿಟ್ಟ, ವಿಸ್ಟ, ಹಿಸ್ಟ ಎಂಬ ಬಗೆಬಗೆಯಾದ ರೂಪ ತಾಳಿದೆ. ಪೊಲವು 'ಪಲಾ' ಆಗಿದೆ. ಕಂಗೂಸಪಲಾ ಎಂಬ ಊರ ಹೆಸರಿನ ಅರ್ಥವು Bell-metal-field ಎಂದಿರುವುದಂತೆ. ಜಯರಾತಿಪೊಲಾ, ಉಕ್ಕೈಪೊಲಾ ಎಂಬ ಎಡೆಗಳ ಹೆಸರಿನಲ್ಲಿ ಪೊಲ ಎಂಬುದೆ ಉಳಿದಿದೆ. 'ಚಂಪಾಟಿ' ಎಂಬ ಹೆಸರು ಚಂಪಾಹಟ್ಟಿ ಎಂದಿರಬೇಕಂತೆ.

These are again, some unmistakably Dravidian affinities in Bengali phonetics, morphology, syntax and vocabulary; but these agreements with Dravidian are not confined to Bengali alone, but are found in other North Indo-Aryan languages also. (Bengali Language: its Origin and Development; also read Kolarian and Dravidian place names: J. R. A. S 1903; part III)

ಬಂಗಾಳಕ್ಕೆ ಆಂಧ್ರದೇಶವು ಸಮೀಪ. ಆದಕಾರಣ ಈ 'ದ್ರಾವಿಡ' ಪ್ರಭಾವಕ್ಕೆ ಕಾರಣರು ಆಂಧ್ರರೆಂದು ಊಹಿಸಲು ಆತಂಕವೇನು?

ಇದಕ್ಕೆ ಈ ಮೊದಲು ಹೇಳಿದ ಐತಿಹಾಸಿಕ ಘಟನೆಗಳ ಒಂದು ಕಾರಣವಂತೂ ಇದ್ದೇ ಇದೆ. ಆಂಧ್ರವು ಬಂಗಾಳಕ್ಕೆ ಹತ್ತಿರವಿದ್ದುದು ನಿಜವಿದ್ದರೂ ಬಂಗಾಳದಲ್ಲಿ ೧೨ನೆಯ ಶತಮಾನದ ವರೆಗೆ ಕರ್ಣಾಟದ ಪ್ರಭಾವವೇ ಇದ್ದುದು ಕಂಡುಬರುತ್ತದೆ. ಡಾ. ಬರುವಾ ಮತ್ತು ಡಾ. ಲಾ

ಇವರ ನೇತೃತ್ವದಲ್ಲಿ ಹೊರಡುವ Indian Culture ಎಂಬ ಸುಪ್ರಸಿದ್ಧ ಮಾಸ ಪತ್ರಿಕೆಯಲ್ಲಿ ಬಂಗಾಳದಲ್ಲಿದ್ದ ಕರ್ಣಾಟ ಜನರ ಪ್ರಭಾವವನ್ನು ಕುರಿತು ಕೆಲವು ಲೇಖನಗಳೂ ಬಂದಿವೆ. ಸೇನ-ಬಲ್ಲಾಳ ಮನೆತನದ ಕ್ಷತ್ರಿಯ ರಾಜರು ಮಾತ್ರವಲ್ಲ, ಬಂಗಾಳದಲ್ಲಿ ಕರ್ಣಾಟ ಬ್ರಾಹ್ಮಣರೂ ಬಹಳ ಪ್ರಮುಖರಾಗಿದ್ದುದನ್ನು ಸಾಧಾರವಾಗಿ ಬಂಗಾಳಿ ಲೇಖಕರೆ ವಿವರಿಸಿದ್ದಾರೆ. ಗೌರಾಂಗ ಪ್ರಭುವಿಗೆ ಆಧ್ಯಾತ್ಮಿಕ ಸ್ಫೂರ್ತಿ ದೊರೆತುದು ಕಂನಾಡ ಶ್ರೀ ಮಧ್ವಾಚಾರ್ಯರ ತತ್ವಜ್ಞಾನದಿಂದ. ಶ್ರೀ ಚೈತನ್ಯ-ಶಿಷ್ಯರಾದ ಜೀವಗೋಸಾವಿಯ ಮಠದ ಪೀಳಿಗೆಯಲ್ಲಿ ಅವನ ಪೂರ್ವಜರು ಕರ್ಣಾಟರು ಇದ್ದುದನ್ನು ಆ ಪಂಥದ ಇತಿಹಾಸದಲ್ಲಿ ಹೇಳಿದೆ. ಇವರ ಪೂರ್ವಜನಾದ ವಿದ್ಧಿರಾಜನು ಕರ್ಣಾಟನು. ಇವನ ಮೊಮ್ಮಗನು ಸಯ ಹಟ್ಟಿಯಲ್ಲಿ ರಾಜ್ಯ ಮಾಡಿದನು. (Modern Review 1946).

ಅತ್ತ ಬಂಗಾಳದಲ್ಲಿ ಕರ್ಣಾಟರಿದ್ದರೆ, ಇತ್ತ ಕರ್ಣಾಟದಲ್ಲಿ ಗೌಡ (ಬಂಗಾಳ)ರು ಬಂದು ನೆಲಸಿದ್ದುಂಟು. ಬಂಗಾಳದಲ್ಲಿ ಗಂಗೂಳಿ ಮನೆ ತನವಿದ್ದರೆ ಕಂನಡ ಜಿಲ್ಹೆಯಲ್ಲಿ 'ಗಂಗಾ ಹೊಳೆ'ಯಿದೆ. ಗಂಗೊಳ್ಳಿ ಅಡ್ಡ ಹೆಸರಿನ ಗೌಡರಿದ್ದಾರೆ ಕಂನಾಡ ಬ್ರಾಹ್ಮಣರಿಗೆ ಶಾಸನಗಳಲ್ಲಿ ಭಟ್ಟಾಚಾರಿ, ಭಟ್ಟೋಪಾಧ್ಯಾಯಗಳೆಂಬ ಹೆಸರು ಇದ್ದುದು ದೊರೆಯುತ್ತವೆ. ಆಂಧ್ರವು ಹತ್ತಿರವಿದ್ದರೂ ಕಂನಾಡ-ಬಂಗಾಲಗಳಂತಹ ಅನ್ಯೋನ್ಯ ಸಂಬಂಧವು ಆಗದೆ ಇದ್ದುದಕ್ಕೆ ಕಾರಣವೇನು? ೧೦ನೆಯ ಶತಮಾನದವರೆಗೆ ಇನ್ನೂ ತಲೆಯೆತ್ತಿ ತಮ್ಮ ಕಾಲಮೇಲೆ ತಾವು ನಿಲ್ಲಲು ಆಂಧ್ರರು ಸಮರ್ಥರಾಗಿ ದ್ದಿಲ್ಲವೆಂದು ಅವರ ಸಾಹಿತ್ಯ, ರಾಜಕೀಯ ಇತಿಹಾಸವೆ ಹೇಳುತ್ತಿದೆ. ಆದುದರಿಂದ ಬಂಗಾಳದಲ್ಲಿ ಕಾಣುವ 'ದ್ರಾವಿಡ'ದ ಪ್ರಭಾವದ ಶ್ರೇಯಸ್ಸು ಕಂನಾಡವರಿಗೆ ಸಲ್ಲಬೇಕಾಗುತ್ತದೆ.

ಕಂನುಡಿಯಲ್ಲಿ ೧೦ನೆಯ ಶತಮಾಸದಲ್ಲಿ ಕಾಣಬರುವ ವಕಾರವು ಬಕಾರವಾಗುವ ಲಕಾರವು ಳಕಾರವಾಗುವ ವೈಶಿಷ್ಟ್ಯವು ಬಂಗಾಳ-ಕಂನಾಡಿನ ನಿಕಟಸಂಬಂಧದ ದ್ಯೋತಕವಾಗಿದೆ.

ತೆಲುಗಿನಲ್ಲಿ 'ಪಾಡು' ಶಬ್ದವು ಪಾಳು-ಹಾಳು ಎಂಬ ಸಂಕುಚಿತಾರ್ಥ ದಲ್ಲಿಯೆ ಹೆಚ್ಚಾಗಿ ಬಳಕೆಯಲ್ಲಿದೆ. 'ಪಾಡು' ಎಂಬುದಕ್ಕೆ ತಮಿಳು ಕಂನುಡಿ

ಗಳಂತೆ ಇರುವ, ಸಾಮಾನ್ಯ ಸ್ಥಿತಿ, ಎಂಬ ಅರ್ಥವು ಅಲ್ಲಿ ಇಲ್ಲ. ಪಾಡು: Ruin, destruction, dilapidated condition, desolation; (at the end of the names of places) a village;

ಆದರೆ ಇದು ಪಾಡು ಶಬ್ದದ ಇಳಿಗಾಲದ ಒಂದು ಅವಸ್ಥೆಯ ಸಂಕುಚಿತವಾದ ಅರ್ಥವು. ಮೂಲದಲ್ಲಿ ಇದೇ ಅರ್ಥವಿಲ್ಲ. ರಟ್ಟ-ಪಾಡಿ, ಗಂಗವಾಡಿ ಮೊದಲಾದ ಕಡೆಯ ಪಾಡಿ, ವಾಡಿಯು ರಾಜವೈಭವಕಾಲದ ಅರ್ಥವುಳ್ಳುದು. ಈ ಪಾಡು ತೆಲುಗಿಗೆ ಅರಿದು. ಆ ವೈಭವದ ಪಾಡಿನಲ್ಲಿಯೇ ಪಾಟ-ಪೇಟೆ, ಪಟ್ಟಣಗಳು ತಲೆಯೆತ್ತಿದುವು.

ಪಟ್ಟಿ ಶಬ್ದವು ತಮಿಳಿನಲ್ಲೂ ಕನ್ನುಡಿಯಲ್ಲೂ ಇರುವ ಎಡೆ, ಇರುವ ಸ್ಥಳ, ಕೊಟ್ಟಿಗೆ ಎಂಬರ್ಥದಲ್ಲಿ ತೆಲುಗಿನಲ್ಲಿ ಇಲ್ಲ. ಪಟ್ಟಿಕಾರ, ಪಟ್ಟಿಲವೆಂಬ ಮಾತುಗಳು ತೆಲುಗಿಗಂತೂ ಸರಿಯೆ, ತಮಿಳಿನಲ್ಲೂ ಕನ್ನುಡಿಯ ಬಗೆಯಲ್ಲಿ ಬಳಕೆಯಲ್ಲಿಲ್ಲ. ಪಟ್ಟಿಯಿಂದಾದ 'ಹಟ್ಟಿ' ಎಂಬುದು ತಮಿಳಿನಲ್ಲಿ ಇರುವುದೇ ಸಾಧ್ಯವಿಲ್ಲ. ಏಕೆಂದರೆ ತಮಿಳಿಗೆ ಹಕಾರವೆ ಇಲ್ಲ. ಪಟ್ಟಿಕಾರ, ಪಟ್ಟಿಲರು-ಹಟ್ಟಿಕಾರರೆಂಬುದು ಕರ್ನಾಡವರ ವೈಶಿಷ್ಟ್ಯವೆಂದೇ ಹೇಳಬೇಕಾಗುತ್ತದೆ. ಪಟ್ಟಿಕಾರನೆಂಬುದಕ್ಕೆ A village servant ಎಂದು ತಮಿಳ ಮಹಾಕೋಶದಲ್ಲಿ ಕೊಟ್ಟಿದೆ. ತುರುಕಾರ-ದನಗಾರರೆಂಬರ್ಥದಲ್ಲಿ ತಮಿಳಿನಲ್ಲಿ ಇಡೈಯನ ಎಂಬ ಮಾತು ರೂಢವಾಗಿದೆ. ಪಟ್ಟಿಕಾರ, ಪಟ್ಟಿಲ ಅಥವಾ ಹಟ್ಟಿಕಾರವೆಂಬುದು ಕೇವಲ ಕರ್ನಾಡ ವಾಡಿಕೆ. ಸಂಸ್ಕೃತದಿಂದ 'ಹಟ್ಟ' ಎಂದರೆ ಪೇಟೆ ಎಂದು ಮಾತ್ರ ಅರ್ಥವು ತೆಲುಗಿನಲ್ಲಿದೆ. ಹಟ್ಟಿ, ತುರುಕಾರ ಹಟ್ಟಿ, ದನಗಾರ ಹಟ್ಟಿ ಎಂಬುದೆಲ್ಲವೂ ಕರ್ನಾಡಿಗೆ ಸೇರಿದ್ದು.

ಆದಕಾರಣ ಅಸಾಮುದ ಗೌಹಟ್ಟಿಗೆ ಯಾರಾದರೂ ದ್ರಾವಿಡ ವರ್ಗೀಯರೆ ಕಾರಣರಿದ್ದರೆ ಅವರು ಕರ್ನಾಡವರೇ ಆಗಿರಬೇಕಲ್ಲದೆ ತೆಲುಗರಲ್ಲ; ಅಥವಾ ತಮಿಳರೂ ಅಲ್ಲ. ಇದೇ ಮೇರೆಗೆ ಬಂಗಾಳದ ಚಂಪಾಹಟ್ಟಿಯ ವಿಚಾರವೂ ಉಂಟೆಂದು ಬೇರೆ ಹೇಳಬೇಕಾದುದಿಲ್ಲ.

ಆದರೆ 'ದ್ರಾವಿಡ'ರು ಉತ್ತರದ-ಭಾಷೆಗಳ ಮೇಲೆ ತಮ್ಮ ಪ್ರಭಾವ ಬೀರಿರುವರೆಂಬು ಆದ ಗ್ರಹಿಕೆಯ ಮೂಲಕ, ದ್ರಾವಿಡರೆಂದರೆ ತಮಿಳರೇ ಎಂದು ಪೂರ್ವಪರಂಪರೆಯಿರುವುದರಿಂದ ಅನೇಕ ವಿದ್ವಾಂಸರಿಗೆ ಉತ್ತರದಲ್ಲಿ ದ್ರಾವಿಡರು ಎಂದರೆ ತಮಿಳರೆಂದೇ ಭಾವನೆಯಾಗುತ್ತದೆ.

The languages which were replaced by Magadhi-Apabhramsh in Bengal were Dravidian, Kol and Monkhmer, Tibito-Burman (Bengali Language p. 284) ಎಂದು ಡಾ. ಸುನೀತಿ ಕುಮಾರರು ಬರೆಯುತ್ತಾರೆ. ಅವರು ತಮ್ಮ ಗ್ರಂಥದ ೬೮ನೆಯ ಪುಟದಲ್ಲಿ 'ತಾಮಲೂಕ' ಎಂಬ ಒಂದು ಊರಿನ ವಿಚಾರವಾಗಿ ಬರೆವಾಗ ಅದು ತಮಿಳರ ನೆಲೆವೀಡಾಗಿರಬೇಕೆಂದು ಊಹಿಸಿದ್ದಾರೆ. ಮ. ಮ. ಹರಪ್ರಸಾದ ಶಾಸ್ತ್ರಿಗಳಿಗೆ ಅಲ್ಲಿ ತಮಿಳರೇ ಕಂಡಿರುವರು. ದಶಕುಮಾರ ಚರಿತದೊಳಗಿನ ತಾಮ್ರಲಿಪ್ತಿ ಅಥವಾ ದಾಮಲಿಪ್ತ ಎಂಬ ಹೆಸರಿನ ಊರ ವಿಚಾರವಾಗಿ ಆದ ಚರ್ಚೆಯಲ್ಲಿ ಈ ಮಾತುಗಳು ಮುಂದೆ ಬಂದಿವೆ.

This is a Sanskritised form of same name like 'ದಾಮಲಿಪ್ತ'; and here we probably have a connection with the word ದಾಮಿಳ=ತಮಿಳ as Mahamahopadhyay Haraprasad Shastri has suggested (ದಾಮಲಿತ್ತ for a ದಮಿಳ ವಿಟ್ಟು) Home of ದಮಿಳ people).

ಆದರೆ ಮಹಾಮಹೋಪಾಧ್ಯಾಯ ಹರಪ್ರಸಾದ ಶಾಸ್ತ್ರಿಗಳ ಕಾಲದಲ್ಲಿ ಎಂದರೆ ಸುಮಾರ ೫೦ ವರುಷಗಳ ಹಿಂದೆ ಬಂಗಾಳದಲ್ಲಿ ಆಳಿದ ಸೇನಬಲ್ಲಾಳರು ಕರ್ಣಾಟ ಕ್ಷತ್ರಿಯರೆಂಬ ಸಂಗತಿಯು ಇನ್ನೂ ಬೆಳಕಿಗೆ ಬಂದಿರಲಿಲ್ಲ. ಪ್ರಾಚೀನ ಬಂಗಾಳದಲ್ಲಿ ಕಾಣಿಸಿಕೊಳ್ಳುವ ಕರ್ಣಾಟ ಬ್ರಾಹ್ಮಣಾದಿಗಳ ವರ್ಚಸ್ಸಿನ ಸಂಶೋಧನವೂ ಆಗಿದ್ದಿಲ್ಲ. ಈಗ ಇವೆಲ್ಲ ವಿಷಯಗಳು ನಿಃಸಂದಿಗ್ಧ ರೀತಿಯಲ್ಲಿ ಸಿದ್ಧವಾಗಿವೆ. ಡಾ. ರಮೇಶಚಂದ್ರ ಮುಜುಮದಾರರಂತಹರೆ ಸೇನಬಲ್ಲಾಳರು ಕರ್ಣಾಟರೆಂದು ಕಂಡುಹಿಡಿದಿರುವರು. ಆದಕಾರಣ ಡಾ. ಸುನೀತಿಕುಮಾರರು ಹೇಳುವ ಬಂಗಾಳದ ಭಾಷೆಯಲ್ಲಿ ಶಬ್ದರಚನೆ, ಶೈಲಿ, ಉಚ್ಚಾರದ ರೀತಿ ಮೊದಲಾದುವುಗಳ ಮೇಲೂ ಊರ ಹೆಸರಿನ ಮೇಲೂ ಆಗಿರುವ 'ದ್ರಾವಿಡ'ವೆಂಬ ಪ್ರಭಾವಕ್ಕೆ ಕಂನಾಡವರೇ ಕಾರಣರೆಂದು ಈಗ ನಿಶ್ಚಿತವಾಗಿ ಹೇಳಲು ಸಾಧ್ಯವಾಗಿದೆ.

ಅಲ್ಲದೆ ತಾಮಲೂಕ ಎಂಬ ಊರಹೆಸರಿನ ಕೊನೆಯ ಭಾಗವು ಒಕ್ಕಲು ಎಂಬ ಕಂನುಡಿಯ ಪದವಾಗಿರಬೇಕೆಂದು ಡಾ. ಬಾರ್ನೆಟರ ಅಭಿಪ್ರಾಯವಿದ್ದುದೂ ವಿಚಾರಾರ್ಹವಾಗಿದೆ.

The modern name of this town is ತಾಮುಲೂಕ (Tam(o) luk): The affix suggests, according to Dr. L. D. Barnett, a connection with Kannad ಒಕ್ಕಲು, house, home ( of the ಉತ್ಕಲ for ಒರಿಸಾ, probably also of Dravidian origin: Kannada ಒಕ್ಕಲ house-holder, farmer,....); ಓಢ್ರ, ಅಥವಾ ಒಡಿಸಾ ಎಂಬುದು ಒಡ್ಡರು ಎಂಬ ಪದದಿಂದಲೂ ಬಂದಿರುವ ಸಂಭವವುಂಟೆಂದೂ ಅಲ್ಲಿ ಸೂಚಿಸಲ್ಪಟ್ಟಿದೆ.

ಒರಿಸಾ ಅಥವಾ ಒಡಿಸಾ ಎಂಬುದಕ್ಕಿಂತ ಉತ್ಕಲವೇ ಮೂಲ ಪದವಾಗಿದ್ದು ಅದು ಒಕ್ಕಲವೆಂಬ ಕಂನುಡಿಯಿಂದ ವಾಡಿಕೆಯಲ್ಲಿ ಬಂದಿರುವ ಸಂಭವವೆ ಹೆಚ್ಚಾಗಿದೆ ಒಡ್ಡರೆಂಬ ಜನದ ಸಂಸ್ಕೃತಿಯ ಮಟ್ಟವನ್ನು ನೋಡಿದರೆ ಈ ಮಾತು ಸ್ಪಷ್ಟವಾಗುವುದು. ಯದು-ತುರ್ವಸುವಿನ ಬಳಗದವರಾದ ಕಂನಾಡ ಹಟ್ಟಿಕಾರ ಒಕ್ಕಲರು ರಾಜ್ಯ, ಸಾಮ್ರಾಜ್ಯಗಳನ್ನು ಕಟ್ಟಿ ಆಳಿದವರಾಗಿದ್ದಾರೆ. ಆದುದರಿಂದ ಒಂದು ಕಾಲಕ್ಕೆ ಈ ಹಟ್ಟಿಕಾರರು ಒಕ್ಕಲಾದ ನಾಡೆಂದು ಅದಕ್ಕೆ ಒಕ್ಕಲ-ಉತ್ಕಲವೆಂಬ ಹೆಸರಾಗಿರುವುದೆ ಹೆಚ್ಚು ಸುಸಂಗತವಾಗಿದೆ. ಈ ಉತ್ಕಲದಲ್ಲಿ ಕಿರುಕುಳ ಸ್ಥಿತಿಯಲ್ಲಿದ್ದ ಕೆಲವು ಜನಕ್ಕೆ ಒಡ್ಡರೆಂಬ ಸಂಜ್ಞೆ, ದೇಶದ ಮೇಲಿಂದ ಅವರಿಗೆ ಬಂದಿರುವುದು ಶಕ್ಯವಾಗಿದೆ. ಏಕೆಂದರೆ ಅವರಿಂದ ದೇಶಕ್ಕೆ ಹೆಸರು ಬರುವಂತಹ ಪ್ರಭಾವಶಾಲಿಗಳು ಅವರು ಇಂದಿಗೂ ಆಗಿಲ್ಲ.

ಒಡ್ಡರಿಂದ ಓಢ್ರವೆಂದು ದೇಶಕ್ಕೆ ಹೆಸರು ಬಂದಿದ್ದರೆ, ಅದು ತೆಲುಗು ಭಾಷೆಯಿಂದ ಬಂದುದೆನ್ನಬೇಕಾಗುವುದು. ಏಕೆಂದರೆ ಒಡ್ಡರು ತೆಲುಗು ಮಾತಿನವರು. ಆದರೆ ಉತ್ಕಲದ ಊರುಗಳಲ್ಲಿರುವ ಗೋವುಡೊ ಗೋಥೂ, ಹಟ್ಟಿ-ಪಾಡೆಗಳಂತಹ ಹೆಸರುಗಳು, ಇಲ್ಲಿ ಒಕ್ಕಲಾದವರು ತೆಲುಗು ಒಡ್ಡರು, ಪ್ರಮುಖರೆನ್ನಲು ಅಡ್ಡಿಯನ್ನುಂಟುಮಾಡುತ್ತವೆ. ಅಚ್ಚ ತೆಲುಗು ನಾಡಿನಲ್ಲಿ ಹಟ್ಟಿಗಳು ದೊರೆಯುವುದಿಲ್ಲ. ಅದರಂತೆ ಗೌಡ–ಗೌಳವೆಂಬ ಹೆಸರಿನ ಊರುಗಳೂ ಸಿಕ್ಕಲಾರವು. ಅಚ್ಚ ತೆಲುಗು ಜಿಲ್ಹೆಗಳಲ್ಲಿ ಗೊಲ್ಲ ಪಲ್ಲೆ, ಗೊಲ್ಲವಾನಿಗುಂಟ, ಗೊಲ್ಲವಾರಿ ಪಲ್ಲೆ ಎಂಬೀ ಬಗೆಯ ಹೆಸರುಗಳೆ ಹೊರತು ಗೌಡರ ಹಳ್ಳಿಗಳು ಇಲ್ಲ; ಹಟ್ಟಿಗಳ ಸುಳಿವಂತೂ ಇಲ್ಲವೇ ಇಲ್ಲ. ಉತ್ಕಲ

ದೇಶದ ಪ್ರಭಾವವಿರುವ ಅಥವಾ ಉತ್ಕಲರು ತಮ್ಮ ನಾಡೆಂದು ಪ್ರತಿಪಾದಿಸುವ, ಆದರೆ ಈಗ ಆಂಧ್ರದಲ್ಲಿ–ಮದರಾಸ ಇಲಾಖೆಯಲ್ಲಿ ಸೇರಿರುವ ಕೆಲವೊಂದು ಪ್ರದೇಶದಲ್ಲಿ ಮಾತ್ರ ಗೌಡ, ಹಟ್ಟಿ (ಊರುಗಳು) ದೊರೆಯುವುವು.

ಗ್ರಾಮಾಧಿಕಾರಿ ಗೌಡನೆಂಬರ್ಥದಲ್ಲಿ 'ರೆಡ್ಡಿ' ಶಬ್ದವು ತೆಲುಗು ನಾಡಿನಲ್ಲಿ ವಾಡಿಕೆಯಾಗಿದೆ. ಕುರುಬ–ದನಗಾರರಿಗೆ ಗೌ(ಂ)ಡರೆಂಬ ಪ್ರತಿಶಬ್ದವಿದ್ದುದಾಗಿ ಕೋಶದಿಂದ ತಿಳಿಯುತ್ತದೆ. ಗೌ(ಂ)ಡನೆಂಬುದಕ್ಕೆ ಒಕ್ಕಲಿಗ, ರಯತ, ಎಂದೂ ಅಲ್ಲಿ ಅರ್ಥವಿದೆ. ಆದರೂ ಗೌ(ಂ)ಡು ಶಬ್ದಕ್ಕೆ ಇವು ಗೌಣವಾದ ಅರ್ಥಗಳಿದ್ದು ಮದ್ಯ ಮಾರುವನೆಂಬುದೇ ತೆಲುಗಿನಲ್ಲಿ ಮುಖ್ಯವಾದ ಅರ್ಥವಾಗಿದೆ. ಒಕ್ಕಲಿಗ, ಹಟ್ಟಿಕಾರ-ತುರುಕಾರನೆಂಬರ್ಥದಲ್ಲಿ ಗೊಲ್ಲ ಶಬ್ದವೇ ವಾಡಿಕೆಯಲ್ಲಿದ್ದು ಆ ಹೆಸರಿನ ಹಳ್ಳಿಗಳೇ ಎಲ್ಲೆಲ್ಲೂ ತೆಲುಗು ನಾಡಿನಲ್ಲಿ ಕಾಣಲು ದೊರೆಯುತ್ತವೆ.

ಗೌ(ಂ)ಡು ಶಬ್ದಕ್ಕಿರುವ ಮದ್ಯವ್ಯವಸಾಯಿಯೆಂಬ ತೆಲುಗಿನಲ್ಲಿರುವ ಅರ್ಥವಿಶೇಷವು ಅಭ್ಯಸನೀಯವಾಗಿದೆ. ಗೌಡ ಮತ್ತು ಗೌ(ಂ)ಡ ಭಿನ್ನ ಶಬ್ದಗಳೆ? ಗೌ(ಂ)ಡ ಎಂಬಲ್ಲಿರುವ ಅರ್ಧ ಅನುನಾಸಿಕವು ದೇಶಭೇದದಿಂದ ಸೊಲ್ಲಿನಲ್ಲಿ ಸೇರಿಕೊಂಡಿರಬೇಕು. ವಿಕಲ್ಪ ಬಿಂದುಗಳ ಇಂತಹ ಉಚ್ಚಾರದ ಎಷ್ಟೋ ಶಬ್ದಗಳು ಭಾಷೆಯಲ್ಲಿರುತ್ತವೆ. ತೆಲುಗಿನಲ್ಲಿ ಪೇ(ಂ)ಟಿ ಎಂದೂ ಹೇಳುವುದುಂಟು. ಆದಕಾರಣ ಗೌಡ ಮತ್ತು ಗೌ(ಂ)ಡಗಳು ಭಿನ್ನವೆಂದು ಬಗೆವ ಕಾರಣವು ತೋರುವುದಿಲ್ಲ.

ತೆಲುಗಿನಲ್ಲಿ ದನಗಾರ, ಕುರುಬನೆಂಬ ಅರ್ಥವು ಅಮುಖ್ಯವಾಗಿದ್ದರೂ ಗೌ(ಂ)ಡು ಶಬ್ದಕ್ಕೆ ಅದು ಉಂಟು. ಆದುದರಿಂದ ಗೌಡನೆಂಬುದರ ಮೂಲ ರೂಪವು ಗೌಳವೆಂದಿರಬೇಕೆಂಬಲ್ಲಿ ಸಂದೇಹಕ್ಕೆ ಎಡೆಯಿಲ್ಲ. ಆದರೆ ಗೌಳ ಅಥವಾ ಗೌಡಕ್ಕೂ ಮದ್ಯದ ವ್ಯವಹಾರಕ್ಕೂ ಏನು ಸಂಬಂಧ? ಗೌಡ ಶಬ್ದಕ್ಕೆ ಸಾರಾಯಿ ಮಾರುವವನೆಂಬರ್ಥವು ದೊರೆಕೊಂಡ ಕಾರಣವೇನು? ಗೌಳ ಅಥವಾ ಗೌಡನೆಂದರೆ ಹಾಲು ಮಾರುವವನೆಂದರ್ಥವಿರಬೇಕು. ಆದರೆ ಗೌಡನು ಮದ್ಯವ್ಯವಸಾಯಿ ಹೇಗೆ?

ಇದರ ಸ್ಪಷ್ಟೀಕರಣಕ್ಕಾಗಿ ಇದೇ ಬಗೆಯ ಬೇರೆ ಕೆಲವು ಉದಾಹರಣೆಗಳನ್ನು ಅರಿತುಕೊಳ್ಳುವುದು ಅವಶ್ಯ. ಕಳ್ ಎಂದರೆ ಹಾಲು, 'ಕಳ್ಳಿ'

ಎಂದರೆ ಹಾಲಿನಸಗಿಡವೆಂಬರ್ಥ. ಕಳವರ್, ಕಳ್ಳರ್ ಎಂದರೆ ಗೋವಳರು, ಗೌಡರು; ಅದರಂತೆ ಮದ್ಯ ವ್ಯವಸಾಯಿಗಳೆಂದೂ ಅರ್ಥವುಂಟು. ಕಳ್ಳು ಎಂಬ ಪದಕ್ಕೆ ಮದ್ಯವೆಂಬರ್ಥವು ಪ್ರಾಪ್ತವಾಗಿದೆ. 'ಗೌಡ' ಶಬ್ದಕ್ಕೆ ಮಜ್ಜಿಗೆ ಎಂದೂ ಒಂದು ಅರ್ಥವಿರುವುದಾಗಿ ಕಾರಂತರ ಅರ್ಥಕೋಶದಲ್ಲಿ ಕೊಟ್ಟಿದೆ. 'ಹಾಲಾ' ಎಂದರೆ ಮದ್ಯವೆಂಬ ಅರ್ಥವೂ ಉಂಟು. ಇಡೈಯರ್ ಎಂದು ತಮಿಳಿನಲ್ಲಿ ಗೋವಳರಿಗೆ ಹೆಸರು. ಆದರೆ ಕಂನುಡಿಯಲ್ಲಿ ಈಳಿಗೆಯವರು (ಈಳಿಗರು) ಎಂದರೆ ಕಲಾಲರು-ಕಳವರು; ಮದ್ಯವ್ಯವಸಾಯಿಗಳು. ಇಡಾ-ಇರಾ, ಈರ್ ಎಂದರೆ ರಸ; ನೀರ್, ಸೀರಾ, ಎಂಬಲ್ಲಿರುವ ಅರ್ಥವಿಶೇಷವೇ ಹಾಲು-ಹಾಲಾ, ಕಳ್-ಕಳ್ಳು ಎಂಬಲ್ಲೂ ಉಂಟು. ಕಂನುಡಿಯಲ್ಲಿ ಅಳ್-ಕಳ್, ಆಲ್-ಪಾಲ್, ಈರ್-ಸೀರ್ ಎಂಬಿವು ರಸಾರ್ಥಕ ಶಬ್ದಗಳು. ಆ ರಸವು ಗೋವಿನದಾಯ್ತು; ಈಚಲದಾಯ್ತು; ಮೂಲದಲ್ಲಿ 'ರಸವೆಂಬರ್ಥವು ಅಲ್ಲಿದೆ. ಅದುದರಿಂದ ಗೌಡರು, ಕಳವರು ಮತ್ತು ಇಡೈಯರು ಎಂದರೆ ರಸವ್ಯವಹಾರಿಗಳೆಂದೇ ಅದರ ಮೂಲಾರ್ಥವು. ಇಷ್ಟು ಇಲ್ಲಿ ಇನ್ನೊಂದು ಸಂಗತಿಯು ಗಮನಾರ್ಹವಾಗಿದೆ. ಕಳವರ್ ಎಂಬುದು ಅತಿ ಪ್ರಾಚೀನ ಶಬ್ದವಾಗಿದ್ದು ಅದು ಎಲ್ಲೆಡೆಗೂ ಹಿಂದೆ ಬಿದ್ದಿದ್ದು, ಅದರ ಪೂರ್ವಪರಂಪರೆಯೂ ಮರೆತುಹೋಗಿದೆ. ಆದರೆ ಇಡೈಯರ್ ಎಂಬುದು ತಮಿಳ ದೇಶದಲ್ಲಿ ಗೋವಳರೆಂಬರ್ಥದಲ್ಲಿ ಬಳಕೆಯಲ್ಲಿದೆ. ಇಡೈಯರ ಪಾಳಯಂ, ಇಡೈಯ್ಯಕೋಟೆ, ಇಡೈಯಸತ್ತಂ, ಇಡೈಕ್ಕುಲಂ ಎಂದು ಮುಂತಾದ ಹೆಸರಿನ ಎಡೆಗಳಿವೆ. ಆದರೆ ತಮಿಳಿನಲ್ಲಿ ಗೋವಳರೆಂದಿದ್ದ ಶಬ್ದವು ಕಂನಾಡಿನಲ್ಲಿ ಈಳಿಗರೆಂದು ಬೇರೆ ಅರ್ಥದಲ್ಲಿ ರೂಢವಾಗಿದೆ. ಕಂನಾಡಿನ ಗೌಳ (ಗೌಡ) ಶಬ್ದವು ತೆಲುಗು ದೇಶದಲ್ಲಿ ಹೀಗೆಯೆ ಭಿನ್ನಾರ್ಥತಾಳಿದೆ.

ನಮ್ಮ ಹಾಲು ಸಂಸ್ಕೃತದಲ್ಲಿ ಹಾಲಾ ( ಮದ್ಯ ) ಆಗಿದೆ. ಮಲ್ಲಿನಾಥನು ಮೇಘದೂತದ 'ಹಿತ್ವಾ ಹಾಲಾಂ' ಎಂಬುದಕ್ಕೆ ಬರೆದ ಟೀಕೆಯಲ್ಲಿ ಅದು ದೇಶೀಯ ನಾಮವೆಂದು ಹೇಳಿದ್ದಾನೆ. ತೆಲುಗಿನಲ್ಲಿ, ತಮಿಳಿನಲ್ಲಿ ಪಾಲ್ ಎಂಬ ರೂಪವು ಮಾತ್ರ ಉಂಟು. ಆಪಕಾರಣ ಸಂಸ್ಕೃತದ ಹಾಲಾ ಶಬ್ದವು ಕಂನುಡಿಯ 'ಹಾಲು' ಎಂಬುದರಿಂದಲೇ ಬಂದಿರಬೇಕೆಂದು ಹೇಳ

ಬೇಕಾಗುತ್ತದೆ. ಈ ಕಾರಣದಿಂದ, ಪಕಾರಕ್ಕೆ ಹಕಾರವಾದ ಕಂನುಡಿಯಲ್ಲಿ ದೊರೆವ ಲಿಖಿತ ಉದಾಹರಣವೆಂದರೆ 'ಹಾಲು' ಎಂಬುದೆ ಮೊದಲನೆಯದಾಗಿದೆ; ಮತ್ತು ಕಾಲಿದಾಸನ ಕಾಲದಷ್ಟು ಪ್ರಾಚೀನ ಎಂದರೆ ಕ್ರಿ. ಶ. ೫ನೆಯ ಶತಮಾನದ ಸುಮಾರಿಗೆ ಪಕಾರಕ್ಕೆ ಹಕಾರವಾಗುವ ಮಾರ್ಪಟಿಕ್ಕೆ ಮೊದಲಾಯಿತೆನ್ನಬೇಕಾಗುತ್ತದೆ. ಮುಂದೆ ೭-೮ ಶತಮಾನದ ವರೆಗೆ ಕಂನುಡಿಯ ಸಾಹಿತ್ಯದಲ್ಲಿ ಈ ಬಗೆಯ ಮಾರ್ಪಾಟಗಳಿಗೆ ಪ್ರೌಢರ ಮನ್ನಣೆ ದೊರೆಯದೆ ಹೋದರೂ ಸಂಸ್ಕೃತದಲ್ಲಿ ದೊರೆವ 'ಹಾಲಾ' ಎಂಬ ಪ್ರಯೋಗದಿಂದ ಬಾಯ್ಮಾತಿನಲ್ಲಿ, ಜನಸಾಮಾನ್ಯರ ಮಾತಿನಲ್ಲಿ ಇದು ಎಂದೊ ಆರಂಭವಾಯಿತೆಂದು ಕಂಡುಬರುತ್ತದೆ. ಬಳಕೆಯ ಮಾತು ಸಾಹಿತ್ಯದಲ್ಲಿ ಇಂಬುಗೊಳ್ಳಬೇಕಾದರೆ ಅದಕ್ಕೆ ಎಷ್ಟೋ ಶತಮಾನಗಳು ಹಿಡಿಯುವುದು ಒಂದು ಸಾರ್ವತ್ರಿಕ ನಿಯಮವೆ ಆಗಿದೆ. 'ಹಾಲಾ' ಶಬ್ದವು ಕಾಲಿದಾಸನ ಕಿವಿಗೆ ಬೀಳುವಷ್ಟು ಉತ್ತರ ಭಾರತದಲ್ಲಿ ಪ್ರಚಾರದಲ್ಲಿರಬೇಕಾದರೆ ಅಲ್ಲಿ ಕಂನಾಡ ಗೋವಳರ ಪ್ರಭಾವವು ಎಷ್ಟು ಹೆಚ್ಚಾಗಿದ್ದಿತೆಂಬುದೆ ಮತ್ತೆ ಸ್ಪಷ್ಟವಾಗುತ್ತದೆ.

ಒಂದು ಜನದಲ್ಲಿ ರೂಢವಿರುವ ಪದಪ್ರಯೋಗವು, ಇನ್ನೊಂದು ಜನದಲ್ಲಿ ಕೆಲವೊಂದು ಭಿನ್ನಾರ್ಥವನ್ನು ಪಡೆದರೆ ಅದರಲ್ಲಿ ಆ ಜನಗಳ ಪರಸ್ಪರ ಸಂಬಂಧದಲ್ಲಿರುವ ಮನಸ್ಥಿತಿಯೂ ಕೆಲಮಟ್ಟಿಗೆ ವ್ಯಕ್ತವಾಗುತ್ತಿರುತ್ತದೆ. ತೆಲುಗಿನಲ್ಲಿ 'ಪೆದ್ದ' ಎಂದರೆ ಪಂಡಿತ; ಕಂನುಡಿಯಲ್ಲಿ 'ಪೆದ್ದ'ನೆಂದರೆ ಹುಚ್ಚ. ಗೌಡ, ಇಡ್ಡೆಯ, ಹಾಲು ಮೊದಲಾದುವುಗಳ ವಿಚಾರದಲ್ಲೂ ಇದೇ ಮಾತು ಸರಿಹೋಗುತ್ತದೆ. ಈ ಕಾರಣದಿಂದ, ಗೌ(ಂ)ಡವೆಂಬುದು ತೆಲುಗರಿಗೆ ಇಷ್ಟವಾದ ಸನ್ಮಾನಾರ್ಥಕ ಪದವಾಗದೆ ಇರುವುದಕ್ಕೆ ಅದು ಕಂನಾಡವರಲ್ಲಿ ವಿಶೇಷ ಬಳಕೆಯ ಪದವಾಗಿರಬೇಕೆಂದು ಹೇಳಬೇಕಾಗುತ್ತದೆ.

ಪ್ರಾಚೀನ ಕಾಲದಲ್ಲಿ ಬಂಗಾಳದ ಒಂದು ಪ್ರದೇಶಕ್ಕೆ ಗೌಡ ದೇಶವೆಂಬ ಹೆಸರಿತ್ತು. ಬಂಗಾಳದ ಭಾಗಕ್ಕೆ ಗೌಡವೆಂಬ ಹೆಸರು ಬರಲು ಕಾರಣರಾದ ಗೌಳರು ಯಾರಿರಬಹುದು? ಬಂಗಾಳದತ್ತ ಪಟ್ಟಿ, ಪಾಡಿ, ಪಾರಾ, ಪಾಟಕ, ಹಟ್ಟ, ಊರು, ಸಂತಿ, ಕಂಡಿ, ಗಡ್ಡಾ, ಪೊಲ ಎಂಬವೆ

ಮೊದಲಾದ ಗ್ರಾಮನಾಮಗಳಿಗೆ ಕಾರಣರಾದ ಪಟ್ಟಿ (ಪತ್ರಿ) ಗಳು ಎಂದರೆ ಹಟ್ಟಿಕಾರ ಗೋವಳರಿಂದಲೇ ಆ ನಾಡಿಗೆ ಗೌಡವೆಂಬ ಹೆಸರು ಬಂದಿತೆಂದು ಊಹಿಸಿದರೆ ತಪ್ಪಾದೀತೆ? ಈ ಗೌಡರು ಮೇಲೆ ವಿವರಿಸಿದ ಕಾರಣಗಳಿಗಾಗಿ ತೆಲುಗರಿರುವುದಂತೂ ಸಾಧ್ಯವಿಲ್ಲ. ತಮಿಳಿನಲ್ಲಿ 'ಗೌಡ' ಶಬ್ದವೇ ಅಸಾಧ್ಯ; ಅಪರೂಪ. ಆದಕಾರಣ ಬಂಗಾಳಕ್ಕೆ ಗೌಡವೆಂಬ ಹೆಸರು ಕಂನಾಡ ಹಟ್ಟಿಕಾರರಿಂದಲೇ ಬಂದಿತೆಂದು ಹೇಳಬೇಕಾಗುವುದು.

---

## ೬. ಕಂನಾಡಿನ ಬೇರೆ ಕೆಲವು ಜನಗಳು

ವೇದ ಕಾಲದ ಸುಮಾರಿಗೆ ಉತ್ತರ ಭಾರತದಲ್ಲಿ ಮಾತ್ರ ಜನಗಳು ಒಕ್ಕಲಾಗಿದ್ದರು; ದಕ್ಷಿಣಾಪಥದಲ್ಲಿ ನಾಗರಿಕತೆಯಿದ್ದಿಲ್ಲ; ಅದು ಕಾಡಿನಿಂದ ತುಂಬಿದ್ದಿತು. ದಂಡಕಾರಣ್ಯದಲ್ಲಿ ಅಲೆವ ಕಾಡಾಡಿಗಳನ್ನು ಬಿಟ್ಟರೆ ಇಲ್ಲಿ ಜನವಸತಿಯೇ ಇದ್ದಿಲ್ಲ; ಕೆಲವು ಜನಗಳು ಇದ್ದರೂ ದಕ್ಷಿಣೋತ್ತರ ಭಾರತಗಳಲ್ಲಿ ಬಳಕೆಯಿದ್ದಿಲ್ಲ; ಎಂಬೀ ಬಗೆಯ ಗ್ರಹಿಕೆಗಳು ನಮ್ಮಲ್ಲಿ ಹಲವರಲ್ಲಿ ದೃಢಮೂಲವಾಗಿವೆ. ಇದರಿಂದ ಪುರಾತನ ಭಾರತದ ನಿಜವಾದ ಐತಿಹಾಸಿಕ ಸ್ಥಿತಿಯು ಆಕಲನವಾಗಲು ಬಹಳ ಅಡ್ಡಿಯುಂಟಾಗಿದೆ.

**ಪ್ರಾಗೈತಿಹಾಸಿಕ ಜನದ ಕೆಲವು ಕುರುಹುಗಳು**

ಆದರೆ, ಬಳ್ಳಾರಿ ಜಿಲ್ಹೆಯ ಕಪ್ಪಗಲ್ಲಿನ ಹತ್ತಿರದ ಶಿಲಾಯುಗದ ಅವಶೇಷಗಳು ಅಲ್ಲಿ ಅತಿಪುರಾತನ ಕಾಲದ ಜನದ ನೆಲೆಯಿದ್ದುದಕ್ಕೆ ಸಾಕ್ಷಿಯಾಗಿವೆ. ಇಂತಹ ಅವಶೇಷಗಳು ಕಂನಾಡ ಉಳಿದ ಭಾಗದಲ್ಲಿಯೂ ಇದ್ದುದು ಆಯಾ ಜಿಲ್ಹೆಯ ಗ್ಯಾಝಿಟಿಯರುಗಳಿಂದ ತಿಳಿದು ಬರುತ್ತದೆ. ಇಜಿಪ್ತಿನ ಮಾದರಿಯ ಅತಿಪುರಾತನ ಕಾಲದ ಗೋರಿಗಳು ಇಲ್ಲದ ಭಾಗಗಳೇ ಇಲ್ಲ. ವಿಜಾಪೂರ ಜಿಲ್ಹೆ ಹೆರಕಲ್ಲಿನ ಹತ್ತಿರ ನೆಲದ ಮೇಲ್ಭಾಗದಲ್ಲಿಯೆ ದೊರೆವ ಮಣ್ಣಿನ ಪಾತ್ರೆಗಳ ತುಂಡು, ಬಳೆಯ ಚೂರುಗಳು ಮೊಹೆಂಜೋದಾರೋದ ಅವಶೇಷಗಳ ನೆನಪನ್ನು ತಂದುಕೊಡುತ್ತವೆ. ಹಾಲಂಡಿನ ಕರ್ನ ಇನ್‌ಸ್ಟಿಟ್ಯೂಟದವರ ೧೯೩೩ರ ವರದಿಯಲ್ಲಿ ಕೆಳಗಿನ ಸಂಗತಿಗಳು ಪ್ರಸಿದ್ಧವಾಗಿವೆ:

ಕೊಯಿಮುತ್ತೂರು ಜಿಲ್ಹೆಯಲ್ಲಿ ಸೋಜಿಗವನ್ನುಂಟುಮಾಡು ವಂತಹ ಸಣ್ಣನೆಯ ಕರಿಕಲ್ಲುದೊರೆತಿವೆ. ಇವು ಬಹಳ ಪುರಾತನದು ವಾಗಿರಬೇಕು. ಸಿಂಧ, ಬಲುಚಿಸ್ತಾನದತ್ತ ಇಂತಹವು ಸಿಗುವುವು. ಮಾಸ್ಕಿ (ನಿಜಾಂ ಕಂನಾಡು) ಹತ್ತಿರ ತ್ರಿಕೋಣಾಕಾರದ ಕೆಲವು ಮಣಿಗಳು (lipis-lazuli) ಸಿಕ್ಕಿವೆ. ಇಂತಹವೇ ಮೊಹೆಂಜೋ ದಾರೋ ದಲ್ಲಿ ಮಾರ್ಶಲರ ಕಣ್ಣಿಗೂ ಬಿದ್ದಿವೆ ಈ ಮಣಿಗಳು ಹಿಂದೂ ದೇಶ ದಲ್ಲಿ ಸಿಕ್ಕುವುದಿಲ್ಲ. ಬಲುಚಿಸ್ತಾನದತ್ತಣಿಂದ ಬಂದಿರಬೇಕು. (ಪು ೧೬)

ಕರ್ನ ಸಂಸ್ಥೆಯುವರ ಈ ಅಭಿಪ್ರಾಯವನ್ನೆ ಪುಷ್ಟೀಕರಿಸುವಂತಹ ಬೇರೆ ಕೆಲವು ಸಂಗತಿಗಳು ಹಿಂದುಸ್ತಾನ ಸರಕಾರದ ಪುರಾಣವಸ್ತುಸಂಶೋಧನ ಇಲಾಖೆಯವರ ನೋಟದಲ್ಲಿಯೂ ಬಂದಿವೆ. ಬೆಂಗಳೂರಿನ ಸಮೀಪದ ಹುತ್ತನಹಳ್ಳಿಯಲ್ಲಿ ಕೆಲವು ಅವಶೇಷಗಳು ದೊರೆತಿವೆ. ಇವು ಸಿಂಧದ ಅಗೆತದಲ್ಲಿ ದೊರೆತ ಪಾತ್ರೆಗಳಿಗೆ ಹೋಲುವಂತಹವಿವೆಯೆಂದೂ ಇವು ಲೋಹಯುಗದ ಆರಂಭದ ವಸ್ತುಗಳು ( early Iron age ) ಆಗಿರ ಬೇಕೆಂದೂ ಆ ತಜ್ಞರು ನಿರ್ಧರಿಸಿದ್ದಾರೆ. (Explorations of Sind; p. 154)

ಮಾಸ್ಕಿ, ಹೆರಕಲ್ಲ, ಬನವಾಸಿ, ಮೊದಲಾದ ಕಡೆಗಳಲ್ಲಿ ಅಗೆತದಲ್ಲಿ ಪುರಾತನ ಪಟ್ಟಣಗಳು ಸಿಕ್ಕುವಲ್ಲಿ ಸಂದೇಹವೆ ಇಲ್ಲ. ಆದರೆ ಭಾರತದಲ್ಲಿ ಎಲ್ಲರಿಂದಲೂ ಕಡೆಗಣಿಸಲ್ಪಟ್ಟ ಕಂನಾಡಿನಲ್ಲಿ ಪುರಾಣವಸ್ತುಸಂಶೋಧನ ಇಲಾಖೆಯುವರಾದರೂ ಈ ಕೆಲಸವನ್ನು ನಡೆಯಿಸುವುದು ಸಾಧ್ಯವೆ ? ಆದರೂ, ಮೈಸೂರ ಸಂಸ್ಥಾನದಲ್ಲಿ ಡಾ. ಹಟ್ಟಿಯು ಕೃಷ್ಣ ಅವರ ಪ್ರಯತ್ನ ದಿಂದ ಚಂದ್ರವಳ್ಳಿಯಲ್ಲಿ ಈ ಬಗೆಯ ಸ್ವಲ್ಪ ಕೆಲಸವಾಗಿದೆ. ಆ ಸ್ವಲ್ಪ ಪ್ರಯತ್ನದಲ್ಲಿಯೆ ಒಂದರಕೆಳಗೊಂದು ಊರುಗಳು ಹುಗಿದು ಹೋದುದರ ನಿಶ್ಚಿತ ಕುರುಹುಗಳು ಕಂಡುಬಂದಿವೆ. ಕ್ರಿಸ್ತಾಬ್ದದ ಮುಂಚಿನ ಅವಶೇಷಗಳು ಈಗ ಹೊರಬರುತ್ತಲಿವೆ. ಈ ಕೆಲಸವು ಇನ್ನೂ ಮುಂದುವರೆ ದಲ್ಲಿ ಇನ್ನೂ ಪುರಾತನದ ನೋಟಗಳು ಕಣ್ಣಿಗೆ ಬೀಳಬಹುದೆಂದು ಬಲ್ಲಿದರ ಅಭಿಪ್ರಾಯವಾಗಿದೆ.

ಈಗ ಬೆಳಕಿಗೆ ಬಂದಿರುವ ಇಂತಹ ಕುರುಹುಗಳಿಂದ ಅತಿ ಪುರಾತನ

ಕಾಲದಿಂದಲೂ ಉತ್ತರ ಭಾರತದಂತೆ ಈ ಭಾಗದಲ್ಲಿಯೂ ಜನಗಳು ಒಕ್ಕಲಾಗಿದ್ದರೆಂದು ನಿಃಸಂದಿಗ್ಧವಾಗಿ ಗೊತ್ತಾಗುತ್ತದೆ. ಅಲ್ಲದೆ ಸಿಂಧ-ಪಂಜಾಬಗಳಲ್ಲಿ ದೊರೆತ ಪುರಾತನ ವಸ್ತುಗಳ ಹೋಲಿಕೆಯ ಅವಶೇಷಗಳೇ ಇಲ್ಲಿಯೂ ಸಿಕ್ಕುತ್ತಿರುವುದನ್ನು ತಜ್ಞರೇ ಒಪ್ಪಿಕೊಂಡಿರುವರು. ಆದುದರಿಂದ ಉತ್ತರ ಹಿಂದುಸ್ತಾನದ ಆ ಭಾಗದ ಜನದೊಡನೆ ಕಂನಾಡಿನ ಜನಗಳ ಸಂಪರ್ಕ, ಸಂಬಂಧಗಳು ಇದ್ದುವೆಂಬುದೂ ಈಗ ಸಿದ್ಧವಾದಂತೆಯೆ ಅಲ್ಲವೆ? ಕಂನಾಡಿನ ಎಡೆಗಳ ಹೆಸರುಗಳಿಂದಲೂ ಈ ಮಾತು ಇನ್ನಿಷ್ಟು ಮನದಟ್ಟಾಗುತ್ತದೆ.

**ಕೋಲರೂ ಮುಂಡರೂ**

ಭಾರತದಲ್ಲಿ ಆರ್ಯರು ಮತ್ತು ದ್ರಾವಿಡರಿಗಿಂತಲೂ ಮೊದಲು ಒಂದು ಜನ ಅಲ್ಲಿ—ಇಲ್ಲಿ ಹಬ್ಬಿಕೊಂಡಿದ್ದಿತು. ಅದು ಪೂರ್ವ ಭಾಗದಿಂದ ಎಂದರೆ ತಿಬೇಟ, ಬ್ರಹ್ಮದೇಶ, ಬಂಗಾಳದತ್ತಣಿಂದ ಬಂದು ಉಳಿದ ಕಡೆಗೂ ಹಬ್ಬಿದ್ದಿತೆಂದು ಪಾಶ್ಚಿಮಾತ್ಯ ಸಂಶೋಧಕರು ನಿರ್ಣಯಿಸಿದ್ದಾರೆ. ಇದಕ್ಕೆ ಸಾಮಾನ್ಯವಾಗಿ ಎಲ್ಲ ವಿದ್ವಾಂಸರ ಒಪ್ಪಿಗೆಯೂ ದೊರೆತಿದೆ. ಪುರಾತನದ ಈ ಜನಗಳಲ್ಲಿ ಕೋಲರು ಮತ್ತು ಮುಂಡರ ಹೆಸರಿನ ಎಡೆಗಳು ಕಂನಾಡಿನಲ್ಲಿ ವಿಶೇಷವಾಗಿವೆ. ಆದರೆ ಅವನ್ನು ಈ ವರೆಗೆ ಕೋಲ ಮತ್ತು ಮುಂಡರವೆಂದು ವಿವರಿಸಿ ಹೇಳಿದ್ದುದು ನನ್ನ ತಿಳುವಳಿಕೆಯಂತೆ ಇದೇ ಮೊದಲನೆಯ ಸಲ. ಕೊಲ್ಲೂರು, ಕೋಲಾರಗಳ ಸ್ಥಳ ಪುರಾಣ ಅಥವಾ ಗ್ಯಾಝಿಟಿಯರುಗಳ ಲೇಖಕರು ಸಹ ಇವು ಕೋಲವೆಂಬ ಜನಗಳ ಕುರುಹುಗಳೆಂದು ಬರೆದಿಲ್ಲ.

ಕೋಲರ ನೆನಹನ್ನು ಕೊಡುವ ಹಲವು ಎಡೆಗಳು ಕಂನಾಡಿನ ತುಂಬ ಇವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಟ್ಟಿದೆ.

ಕೊಲ್ಲ, ಕೊಲ್ಲಗಿರಿ, ಕೋಲಾರ, ಕೊಳ್ಳಹಾಳವಿಷಯ, ಕೊಲ್ಲೂರು, ಕೋಲ್ಹಾಪುರ, ಕೊಲ್ಲಹುಣನಾಡು, ಕೊಲ್ಲಂ, ಕೊಳ್ಳೆಗಾಲ, ಕೊಲ್ಲಿ, ಕೊಲ್ಲಿಪಾಕೆ, ಕೊಲ್ಲಾಳಿ, ಮುಂ. ಇವುಗಳಲ್ಲಿ ಕೆಲವು ದೇವಿಯ ಸ್ಥಾನಗಳೆಂದು ಸುಪ್ರಸಿದ್ಧವಾಗಿವೆ. ಇದರಂತೆ ಮುಂಡರ ಹೆಸರಿನ ಸಂಬಂಧವುಳ್ಳ ಊರುಗಳಿವು: ಮುಂಡಕೂರು, ಮುಂಡರಗಿ, ಮುಂಡಗೋಡು, ಮುಂಡೇವಾಡಿ ಮುಂ.

ಕೇವಲ ಪಾಶ್ಚಿಮಾತ್ಯ ವಿದ್ವಾಂಸರ ಹೇಳಿಕೆಯ ಮೇಲಿಂದಲೆ ಕೋಲ ಮತ್ತು ಮುಂಡರು ಪ್ರಾಚೀನ ಜನಗಳೆಂದು ನಂಬಬೇಕಾಗಿಲ್ಲ. ದುರ್ಗಾಸಪ್ತಶತಿ, ದೇವಿಪುರಾಣಗಳಲ್ಲಿ ಬಂದ ವರ್ಣನೆಗಳಿಂದಲೂ ಈ ಐತಿಹಾಸಿಕ ಅಂಶಗಳನ್ನು ಸಂಗ್ರಹಿಸಿ ತಿಳಿದುಕೊಳ್ಳಬಹುದಾಗಿದೆ.

ದುರ್ಗೆಗೆ ಚಾಮುಂಡಿ ಎಂದೂ ಹೆಸರಿದೆ. ಚಂಡ ಮತ್ತು ಮುಂಡ ಎಂಬ ರಕ್ಕಸರನ್ನು ಸಂಹರಿಸಿದ್ದರಿಂದ ಆ ದೇವಿಗೆ 'ಚಾಮುಂಡಿ' ಎಂಬ ಹೆಸರು ಬಂದಿತೆಂದು ಪುರಾಣ ಕತೆಯು ಹೇಳುತ್ತದೆ. ಚಂಡ ಅಥವಾ ಮುಂಡವೆಂಬುದು ಒಬ್ಬೊಬ್ಬ ರಕ್ಕಸನ ಹೆಸರಲ್ಲ. ಅದು ಜನವಾಚಕವಾಗಿರಬೇಕು. ಆ ಜನಗಳ ಪ್ರಾತಿನಿಧಿಕ ರೂಪದಲ್ಲಿ ರಕ್ಕಸನೆಂಬುದಾಗಿ ಪುರಾಣಗಳಲ್ಲಿ ವರ್ಣಿಸಿದ್ದಾಗಿದೆ. ಇದು ಪುರಾಣಗಳಲ್ಲಿ ಹಲವೆಡೆಗೆ ಕಂಡುಬರುವ ಒಂದು ಸಾಮಾನ್ಯ ಸಂಕೇತ. 'ಕರ್ಣಾಟ ರಾಕ್ಷಸ'ವೆಂದು ಸ್ಕಂಧ ಪುರಾಣದಲ್ಲಿ ಬಂದ ವರ್ಣನೆಯೂ ಇದೇ ತರದ ಸಂಕೇತವಿದೆ. ಮಲ್ಲಾಸುರನ ಸಂಹಾರದ ಪುರಾಣಕತೆಯ ರೀತಿಯೂ ಇದೇ ಬಗೆಯದು. ಆದ ಕಾರಣ ದುರ್ಗೆಯು ಸಂಹರಿಸಿದ್ದು ಒಬ್ಬ ಚಂಡ ಅಥವಾ ಮುಂಡನನ್ನಲ್ಲ; ಚಂಡರೆಂಬ ಹೆಸರಿನ, ಮುಂಡರೆಂಬ ಹೆಸರಿನ ಜನಗಳನ್ನು. ಮುಂಡರೆಂಬ ಹೆಸರಿನ ಜನಗಳು ನಮ್ಮ ಭಾಗದಲ್ಲಿ ಈಗ ಇಲ್ಲವಾದರೂ ಬಂಗಾಳದ ಕಡೆಗೆ ಉಂಟು. ಚಂಡರು, ಈಗ ಚಾಂಡಾಲರೆಂಬ ಹೆಸರಿನ ಜನಗಳಾಗಿರಬೇಕು. ಕರ್ನಾಡಿನಲ್ಲಿ ವಿಶೇಷವಿಲ್ಲ. ಮಹಾರಾಷ್ಟ್ರದಲ್ಲೂ ವಿಶೇಷವಾಗಿ ಬಂಗಾಳದಲ್ಲೂ ಇದ್ದಾರೆ. ಚಾಮುಂಡಿ ಬೆಟ್ಟ, ಚಂಡಿಮುಂಡಿ ತೀರ್ಥ, ಚಂಡಿವಾಡಿ ವಿಷಯ, ಎಂಬ ಎಡೆಯ ಹೆಸರುಗಳು ಈ ಪುರಾತನ ಜನಗಳ ನೆನಹನ್ನು ಕೊಡುವುವು.

ದುರ್ಗಾಸಪ್ತಶತಿಯಲ್ಲಿ ಕೋಲರ ಉಲ್ಲೇಖವೂ ಬರುವುದು. ಕೋಲರು, ಮುಂಡರು, ಚಂಡರು ಕರ್ನಾಡಿನ ಆದಿವಾಸಿಗಳು. ಅವರ ಹೆಸರಿನ ಕುರುಹುಗಳು ಸಾವಿರಾರು ವರುಷಗಳಿಂದ ಉಳಿದು ಬಂದಿರುವುದು ಕೌತುಕ ಮತ್ತು ಆಶ್ಚರ್ಯವನ್ನುಂಟುಮಾಡುವುದು.

### ಎಮ್ಮೆಗರು

ನಮ್ಮ ಹಟ್ಟಿಕಾರರು ತುರುಕಾರರು; ತುರ್ವರು; ತುರ್ವಸುಗಳು ಇವರು.

ಆದಕಾರಣ ಇವರು ಎಮ್ಮಿಗರು ಆಗಿರಲಾರರು. ಎಮ್ಮೆಗಳ ವಿಚಾರದಲ್ಲಿ ನಮ್ಮ ನಾಡವರಿಗೆ ಗೋವುಗಳಷ್ಟು ಅಕ್ಕರೆಯು ಕಾಣಬರುವುದಿಲ್ಲ. ಎಮ್ಮೆ ಕೋಣಗಳಿಗೆ ದೆವ್ವ, ರಕ್ಕಸಗಳೆಂದು ತಿರಸ್ಕಾರದಿಂದ ಹೇಳುವರು. ಆವು ಎತ್ತು ಪವಿತ್ರವೆಂದು ಭಾವಿಸುವರು. ಆದರೆ ಇಂದು ಗೋವಳರು–ಗೌಳಿಗ ಳೆಂದು ಹೆಸರಿದ್ದರೂ ಅವರೆಲ್ಲ ಸಾಮಾನ್ಯವಾಗಿ ಎಮ್ಮಿಗರೇ ಆಗಿರುವ ರಾದರೂ ಇದು ಅವರ ಪೂರ್ವಪರಂಪರೆಗೆ ಹೊಂದಿಕೆಯಾದ ಮಾತಲ್ಲವೆಂದು ಅವರ ಜಾತಿವಾಚಕ (ಗೌಳ) ಹೆಸರೇ ಹೇಳುತ್ತದೆ.

ಒಂದು ಕಾಲಕ್ಕೆ ಎಮ್ಮಿಗರು ತುರುಕಾರರ ಎದುರಾಳಿಗಳಾಗಿರಬೇಕು. ತುರುಕಾರರ—ಯದು-ತುರ್ವಸುಗಳ ಕುಲದೈವತವಾದ ಚಾಮುಂಡಿಗೆ 'ಮಹಿಷಾಸುರ ಮರ್ದಿನಿ' ಎಂದೂ ಪರ್ಯಾಯ ನಾಮವಿದೆ. ಇಲ್ಲಿ ಮಹಿಷಾ ಸುರನೆಂದರೆ ಮೇಲೆ ಸೂಚಿಸಿದಂತೆ ಮಹಿಷರೆಂದೇ ಅರ್ಥ. ಮಹಿಷಕರೆಂದು ಪುರಾಣಗಳಲ್ಲಿ ಸಂಸ್ಕೃತದಿಂದ ಹೇಳಿದ ಜನವೆ ಕಂನುಡಿಯಿಂದ ಎಮ್ಮಿಗರು. ಎಮ್ಮಿಗನೂರು, ಎಮ್ಮೆಸಂದಿ, ಮಹಿಷಪುರ, ಮೈಸೂರು, ಮೈಸವಾಡಿ ಮೈಸಾಳ, ಮೈಸವಳ್ಳಿ ಮುಂತಾದುವು ಈ ಎಮ್ಮಿಗರ ಒಂದು ಕಾಲದ ಕುರುಹುದೋರುವುವು. ನರ್ಮದಾತೀರದ ಮಾಹಿಷ್ಮತೀ ನಗರವು ಮಹಿಷರ ಮೂಲ ನೆಲೆವೀಡಾಗಿರಬೇಕು.

ಕೋಲ-ಮುಂಡರನ್ನು ಸಂಹರಿಸಿದ ದೇವಿಯೆ ಮಹಿಷರನ್ನೂ ಸಂಹರಿಸಿರುವಳು. ಆದುದರಿಂದ ಈ ಮಹಿಷರೂ ಕೋಲ-ಮುಂಡರ ಒಡ ನಾಡಿಗಳೆ ಆಗಿರುವ ಸಂಭವವಿದೆ. ಆರಿಯ (ಮರ್ಹಾಟ)ದಲ್ಲಿ ಮ್ಹಸೆ ಎಂಬ ಅಡ್ಡಹೆಸರಿನವರಿದ್ದಾರೆ. ಮಹಾಷ್ಟ್ರದಲ್ಲಿ 'ಮ್ಹಸೋಬ'ನೆಂಬ ಒಂದು ಕಿರುಕುಳ ದೈವತದ ಪೂಜೆ ಸಾಮಾನ್ಯ ಜನದಲ್ಲಿದೆ. ಬೀದಿಯ ಒಂದು ಗುಂಡ–ಬಂಡಿಗೆ ಮ್ಹಸೋಬನೆಂದು ಸೇಂದೂರ ಎಣ್ಣೆ ಹಚ್ಚಿ ಪೂಜಿಸುವುದುಂಟು.

ಕಂನಾಡಿನಲ್ಲಿರುವ ಎಮ್ಮೆ ಮತ್ತು ಮೈಸರ ಎಡೆಗಳಿಂದ ಇಲ್ಲಿ ಎಮ್ಮಿಗರ ಕುಲ ನೆಲಸಿದ್ದಿತೆಂಬಲ್ಲಿ ಸಂದೇಹವೆ ಇಲ್ಲ. 'ಎರುಮುರೈನಾಡಿ' ಉಲ್ಲೇಖವು ಶಾಸನಗಳಲ್ಲೂ ಇದೆ. (Ep. K. IX) ಹೊಯ್ಸಳ ವೀರ ಬಲ್ಲಾಳನ ಕಾಲದ ಶಾಸನವೊಂದರಲ್ಲಿ 'ಕುರುಕ್ಕಿನಾಡ ಮಾಳನ ಹಳ್ಳಿಯ

ಎಮ್ಮೆಯರ ಕೊಲದ ಚಾಕಗಾವುಂಡನ ಮಗ ಹರದಗಾವುಂಡನ' ಉಲ್ಲೇಖ ಇದೆ. ಇದರಂತೆ ಮೈಸೂರ ಸೀಮೆಯ ಕೋಡಿಹಾಳ ಶಾಸನದಲ್ಲಿ 'ಎರುವೈರೆ ನಾಟ್ಟೆಲ್ ನಾಟ್ಟವರ'ನ್ನು ಕುರಿತು ಹೇಳಿದೆ. ಇದು ವಿಜಯನಗರ ಬುಕ್ಕರಾಯನ ಕಾಲದ್ದು (೧೩೬೭).

## ಬೇಡರೂ ಬಿಲ್ಲವರೂ ಅಂಬಿಗರೂ

ಇವರೂ ನಮ್ಮ ನಾಡಿನ ಆದಿನಿವಾಸಿಗಳು. 'ಕೋಲ' ವೆಂಬುದಕ್ಕೆ ಕಂನುಡಿಯಿಂದ ಅರ್ಥ ಮಾಡಿದರೆ ಬಿಲ್ಲವರೂ, ಅಂಬಿಗರೂ, ಕೋಲರೂ, ಹತ್ತುಗೆಯುವರೆಂದು ಕಂಡುಬರುತ್ತದೆ. ಅಂಬು ಎಂದರೆ ಬಾಣ. ಬೇಟೆಯಿಂದ ಜೀವನವನ್ನು ಸಾಗಿಸುತ್ತಿದ್ದ ಕಾಲದ ಹೆಸರುಗಳಿವು. ಬೇಡರೂ ಬಿಲ್ಲವರೂ ಅಂಬಿಗರೂ ಕೋಲರೂ ಧನುರ್ವಿದ್ಯೆಯ ಬಲದಿಂದ ಬದುಕು ನಡೆಸುತ್ತಿದ್ದರೆಂದು ಅವರ ಹೆಸರುಗಳು ಸಾರ್ಥವಾಗಿವೆ. ಇವರು ತುಂಬ ಕಟ್ಟಾಳುಗಳು. ಕಂನಾಡ ಪಡೆಯಲ್ಲಿ ಇವರಿಗೊಂದು ಮಹತ್ವದ ಸ್ಥಾನವಿದ್ದಿತು. ಕಂನಾಡ ರಾಜರಿಗೆ ಹಲವು ದಿಗ್ವಿಜಯಗಳಲ್ಲಿ ಗೆಲುವನ್ನು ತಂದುಕೊಟ್ಟ ಶ್ರೇಯಸ್ಸು ಇವರಿಗಿದೆ. ಬೇಡರು, ಬಿಲ್ಲರು, ಅಂಬಿಗರ ಹೆಸರುಗಳು ಶಾಸನಗಳಲ್ಲಿ ಬರುತ್ತವೆ.

ಇವರ ಹೆಸರಿನ ಬೀಡುಗಳೂ ಉಂಟು. ೧. ಬೇಡಗೆರೆ, ಬೇಡನ ಬಯಲು, ಬೇಡನಕಟ್ಟೆ, ಬೇಡರಬಂಕಿ (ಕಾಡು), ಬೇಡರಹಳ್ಳಿ, ಬೇಡರಪುರ ಬೇಡರಿಗುಪ್ಪೆ, ಬೇಡಿಪಾಳ್ಯ. ೨. ಬಿಲ್ಲಾಡಿ, ಭಿಲವಡಿ, ಬಿಲ್ಲಟ್ಟಿ, ಬಿಲ್ಲ ಬೆಳಗುಂದ, ಬಿಲ್ಲಕೆರೆ, ಬಿಲ್ಲೂರು ಮುಂ. ೩. ಅಂಬಿನಾಡು ಎಂಬೊಂದೆ ಸ್ಥಳವು ಶಾಸನದಲ್ಲಿ (Ep. Karn. IIIMl. 112) ಸಿಕ್ಕುತ್ತದೆ. ಈ ಜನಗಳಲ್ಲಿ ಹಲವರು ರಾಜ್ಯಕಟ್ಟಿ ಅರಸುಗೈದುದೂ ಉಂಟು. ಪಾಳೆಯಗಾರ ನಾಯಕರು ಕೆಲವರಾದರು. ಸುರಪುರದ (ನಿಜಾಂ ಕಂ.) ನಾಯಕರು ಇತಿಹಾಸಪ್ರಸಿದ್ಧರಾಗಿದ್ದಾರೆ.

ಕನ್ನದೇಶ (ಖಾನದೇಶ) ದಲ್ಲೂ, ಕಂನಡ ಜಿಲ್ಹೆಯ ದಕ್ಷಿಣ ಭಾಗದಲ್ಲೂ ಬಿಲ್ಲವರು ವಿಶೇಷವಾಗಿದ್ದಾರೆ. ಕನ್ನದೇಶದಲ್ಲಿ ಇವರಿಗೆ ಭಿಲ್ಲರೆಂದು ಹೆಸರು. ಕಂನಾಡ ಉಳಿದ ಭಾಗದಲ್ಲಿ ಬೇಡರಜನ ಇದೆ. ಮಹಾರಾಷ್ಟ್ರದಲ್ಲಿ ಬೇಡರ ಹೆಸರು ಬೇರಡ ಎಂದಾಗಿದೆ. ಬೇಡರ ಶಬ್ದದ ವ್ಯುತ್ಪತ್ತಿಯನ್ನು

ಬೇ-ಡರ್ ಎಂದರೆ ಹೆದರಿಕೆ ಇಲ್ಲದವರು, ಅದಿರದ ಎದೆಯುವರು ಎಂದು ಕೆಲರು ಹೇಳಿದ್ದಾರೆ! ಇದು ಈ ಜನಗಳ ವೀರವೃತ್ತಿಯ ಸಾಕ್ಷಿಯಾಗಿದೆ.

ನಾಡಿನ ಇಳಿಗಾಲದಲ್ಲಿ ಈ ಜನಗಳ ಶೌರ್ಯ, ಧೈರ್ಯ, ಸಾಹಸಾದಿ ಗುಣಗಳಿಗೆ ಸರಿಯಾದ ಪ್ರೋತ್ಸಾಹನವಿಲ್ಲದ್ದರಿಂದ ಅವೆಲ್ಲ ಬೇರೆ ಹಾದಿ ಹಿಡಿದುದು ಕಂಡುಬರುತ್ತದೆ. ಹೋರಾಟದ ಹುಮ್ಮಸದ ಕೆಲಸಗಳಲ್ಲಿ ಹುಟ್ಟು ಪ್ರೀತಿಯಿದ್ದ ಈ ಜನಗಳು ಈಗ ಎಲ್ಲಿಯೊ ಕಿರುಗೆಲಸಗಳನ್ನು ಮಾಡಿ ಬಾಳಬೇಕಾಗಿದೆ. ಅಂಬಿಗರು ನದೀತೀರಗಳಲ್ಲಿ ನಾವಿಕರಾಗಿ ಜೀವಿಸುತ್ತಿದ್ದಾರೆ.

ಮುಂಬೈ ಕರಾವಳಿಯಲ್ಲಿ ಕೋಳಿಗಳೆಂಬ ಜನವಿದೆ. ಇವರೂ ನನ್ನ ತಿಳುವಳಿಕೆಯಂತೆ ಕೋಲ ಜನ. ಕೋಳ್ಪಡೆದು ಬಾಳುವ ಜನ. ಈ ವೃತ್ತಿಯಲ್ಲಿ ಈಗಲೂ ಹೆಸರಾಗಿದ್ದಾರೆ. ಅಂಬಿಗರಂತೆ ಮೀನ ಹಿಡಿಯುವುದು, ಹರಗೋಲು ಒಯ್ಯುವುದು ಈ ಕೆಲಸಗಳನ್ನೂ ಮಾಡುವರು. ಜಂಜೀರಾದ ಅರಸು ಕೋಳಿ ವಂಶದವನು.

ಕಂನಾಡಿನೊಳಗೂ ಪ್ರಾಚೀನ ಕಾಲದ ಕೋಳೂರುಗಳ ಉಲ್ಲೇಖವು ಹಲವು ಕಡೆಗೆ ಸಿಕ್ಕುತ್ತದೆ. ಕೋಳೂರ ವಿಷಯ ( Ep. K. VIII ) ಇದೆ. ಅಲ್ಲದೆ ಕೋಳೂರ ಗ್ರಾಮ, ಕೋಳೂರ ನಾಡು, ಕೋಳೂರ ಪನ್ನೆರಡುಗಳ ಹೆಸರು ಮೈಸೂರ ಶಾಸನಗಳಲ್ಲಿ ಬರುತ್ತವೆ. ಉತ್ತರ ಕಂನಾಡಿನಲ್ಲಿ ಕೋಳೂರು ಕೋಳಿವಾಡಗಳು ಇವೆ. ಇವು ನಮ್ಮಲ್ಲಿಯೂ ಇದ್ದ ಕೋಲ ಅಥವಾ ಕೋಳರ ಕುರುಹುಗಳೆ ಆಗಿರಬಹುದೆ?

## (ಕಿಳ್ಳೀ)ಕೇತರೂ, ದಾಸರೂ, ಡೊಂಬರೂ

ಕೇತರು ಅಥವಾ ಕಿಳ್ಳೀಕೇತರೆಂಬ ಒಂದು ಜನವಿದೆ. ಇವರು ಸೋಗು ಹಾಕುವುದರಲ್ಲಿ, ಬಹಳ ಪ್ರಸಿದ್ಧ. ಸೂತ್ರದ ಬೊಂಬೆಗಳನ್ನು ಕುಣಿಸುವ ಹಾಗೂ ಇರುಳಿನಲ್ಲಿ ತೆರೆಯ ಮೇಲೆ ಛಾಯಾ ಚಿತ್ರಗಳನ್ನು ಮೂಡಿಸಿ ಜನರಂಜನ ಮಾಡುವ ಕಲೆಯು ಇವರಿಗೆ ಸೇರಿದ್ದೆಂದು ತೋರುತ್ತದೆ. ಸೋಗು ಹಾಕಿ ರೂಪ ಬದಲಾವಣೆಗಳನ್ನು ಮಾಡುವ ಇವರ ವಿದ್ಯೆಯಿಂದ ಬಹುರೂಪಿಗಳೆಂದೂ ಇವರಿಗೆ ಪರ್ಯಾಯ ನಾಮವಿದೆ. ಇವರ

ಛಾಯಾ ಚಿತ್ರ, ಸೂತ್ರದ ಬೊಂಬೆಯಾಟಗಳ ವೈಶಿಷ್ಟ್ಯದ ಮೂಲಕ ಈ ಜನ ಜಾವಾ-ಸುಮಾತ್ರಾಗಳತ್ತಣಿಂದ ಬಂದವರಾಗಿರಬೇಕೆಂದು ತೋರುತ್ತದೆ.

ದಾಸರೆಂಬ ಒಂದು ಪಂಗಡವು ಇವರಿಗೆ ಹತ್ತಿರದ್ದಿರಬಹುದು. ವೇಷಕಟ್ಟಿ ಆಡುವಲ್ಲಿ ಇವರೂ ಹೆಸರಾದವರು. ಇವರೊಡನೆಯೇ ಡೊಂಬರ ನೆನವೂ ಆಗದೆ ಇರದು. ಪಂಪನು ಬಹುರೂಪಿಗಳೆಂದು ಡೊಂಬರಿಗೆ ಹೇಳಿದ್ದಾನೆ. ಕೃಷ್ಣನಿಂದೆಯ ಕಾಲದಲ್ಲಿ ಶಿಶುಪಾಲನ ಬಾಯಲ್ಲಿ ಈ ಮಾತು ಬಂದಿದೆ. 'ಏನಾನಾವೆ, ಪಂದೆ....ಮೊದಲಾದ ವೇಷಗಳನ್ನು ಧರಿಸುವ ಡೊಂಬ ವಿದ್ಯೆಯಲ್ಲಿ ನೀನು ನಿಪುಣನು' ಎಂದು ಕೃಷ್ಣನಿಗೆ ಶಿಶುಪಾಲನು ಆಡಿದ್ದುಂಟು. ಡೊಂಬ ವಿದ್ದೆಗೆ ಡಾಂಭಿಕ ಅಥವಾ ಡಾಂಭಿಕತನವೆಂಬ ಹೆಸರು.

ನೇಕಾರ–ಜಾಡರಿಂದ ಅಂತಹ ಕ್ರಿಯೆಯನ್ನು ಮಾಡುವ ಒಂದು ಹುಳಕ್ಕೆ ಜಾಡ (ಹುಳು) ವೆಂಬ ಹೆಸರು ಬಂದಿರುವಂತೆ ಕಾಲಕಾಲಕ್ಕೆ ಬಣ್ಣ ಬದಲಿಸುವ ಓತಿ ಅಥವಾ ಸರಟಕ್ಕೆ ಕಾಟ, ಕಾತ, ಕ್ಯಾತ ಅಥವಾ ಕೇತವೆಂಬ ಪರ್ಯಾಯ ನಾಮವೊಂದುಂಟು. ಮಾನವನ ಉದ್ಯೋಗಾದಿಗಳ ಹೋಲಿಕೆಗಳಿಂದ ಪ್ರಾಣಿಗಳಿಗೆ ಬಂದ ಹೆಸರುಗಳು ಕೆಲವು ಉಂಟು.

ಆದಕಾರಣ ಕಾತರಾಳ, ಕ್ಯಾತನ ಹಳ್ಳಿ ಮೊದಲಾದ ಊರುಗಳಲ್ಲಿ ಕಿಳ್ಳಿಕೇತರಿಂದ ಬಂದುವು ಯಾವುವು, ಓತಿಯಿಂದ ಬಂದುವು ಎಷ್ಟು ಎಂಬುದನ್ನು ನಿರ್ಧರಿಸುವ ಕೆಲಸವು ಇನ್ನೂ ಆಗಬೇಕಾಗಿದೆ. ಕಾತರು, ದಾಸರು, ಡೊಂಬರುಗಳಿಂದ ಬಂದ ಹೆಸರಿನ ಹಳ್ಳಿಗಳು ನಮ್ಮಲ್ಲಿ ಇರುವುದೇನೊ ನಿಶ್ಚಿತ. ಇವು ಕಂನಾಡ ಎಲ್ಲ ಭಾಗಗಳಲ್ಲೂ ಉಂಟು. ಡೊಂಬರ ಹಳ್ಳಿ; ಡೊಂಬರೂರುಗಳಂತೆ ದಾಸರ ಹಳ್ಳಿ, ದಾಸನೂರು, ದಾಸೇನ ಹಳ್ಳಿಗಳೆಲ್ಲ ಈ ಬಗೆಯ (ಡೊಂಬ) ದಾಸರವೇ ಎಂದು ಹೇಳುವುದು ಕಷ್ಟ. ಏಕೆಂದರೆ ದಾಸರೆಂದರೆ ಭಕ್ತರ ಕೆಲ ಹಳ್ಳಿಗಳು ಇರುವ ಸಂಭವವೂ ಇದೆ.

ಇದೆಲ್ಲವೂ ಸುಮಾರಾಗಿ ಆರ್ಯರಿಂದ ಮೊದಲು, ಇಷ್ಟೆ ಅಲ್ಲ, ಹಟ್ಟಿಕಾರರಿಂದಲೂ ಮೊದಲು ಈ ನಾಡಿನಲ್ಲಿ ಬಂದ ಜನವೆಂದು ತೋರುತ್ತದೆ. ಕೋಲ-ಮುಂಡರ ಸಂಹರಿಸಿ ಅಥವಾ ಅವರನ್ನು ತಳ್ಳಿತುರುಕಾರ-ಹಟ್ಟಿಕಾರರಿಗೆ ನೆಲಸಬೇಕಾದುದು ದೇವಿಯ ಪುರಾಣಗಳಿಂದ ತಿಳಿದು ಬರುತ್ತದೆ.

ಆದಕಾರಣ ಕೋಲ-ಮುಂಡರಿಗಿಂತಲೂ ಹಟ್ಟಿಕಾರರು ಹಿಂದುಗಡೆ ಇಲ್ಲಿ ನೆಲಸ ಬಂದವರೆಂದು ಹೇಳಬೇಕಾಗುತ್ತದೆ.

**ಪಣಿಗಳೂ ಹಳಬರೂ**

ಯದು-ತುರ್ವಶರಂತೆ ಋಗ್ವೇದದಲ್ಲಿ ಆಡಿಗಡಿಗೆ ಕಾಣಿಸಿಕೊಳ್ಳುವ ಜನ ಇನ್ನೊಂದಿದೆ. ಅವರು ಪಣಿಗಳು, ಪಣಿಗಳು ಸಂಪೂರ್ಣವಾಗಿ ಆರ್ಯ ವಿರೋಧಿಗಳೆಂದೇ ಆ ವರ್ಣನೆಗಳಿಂದ ಕಂಡುಬರುತ್ತದೆ. ಯದು-ತುರ್ವರು ಕೆಲಬಾರಿ ಆರ್ಯರ ಹಗೆಗಳಾಗಿ ಶಂಬರಾದಿಗಳೊಡನೆ ಇದ್ದ ವರ್ಣನೆಗಳು ದೊರೆಯುವಂತೆ, ಅವರು ಆರ್ಯರ ಗೆಳೆಯರಾಗಿಯೂ ಇದ್ದುದನ್ನೂ ಋಗ್ವೇದ ದಲ್ಲಿ ಕಾಣಬಹುದು. ಆದರೆ ಪಣಿಗಳು ಮಾತ್ರ ಯಾವಾಗಲೂ ಆರ್ಯರ ತುರುಗಳನ್ನು ಓಡಿಸಿಕೊಂಡು ಹೋಗುವ ಕಾಯಕದವರಾಗಿದ್ದರು.

ಆ ಪಣಿಗಳ ನೆನಹು ಕೊಡುವ ಪಣಿಯಾಡಿ, ಪಣಿಯಾಲ, ಪಣಂ-ಬೂರು ಎಂಬ ಊರುಗಳು ಕಂನಾಡಿನ ದಕ್ಷಿಣ ಕನ್ನಡ ಜಿಲ್ಹೆಯಲ್ಲಿವೆಯೆಂದು ಹೇಳಿದರೆ ಹಲವರು ಸೋಜಿಗಗೊಳ್ಳಬಹುದಾಗಿದೆ! ಋಗ್ವೇದ ಕಾಲದಲ್ಲಿ ಆರ್ಯರು ಪಂಜಾಬದತ್ತ ವಾಸವಾಗಿದ್ದರು. ಅಲ್ಲಿ ಪಣಿಗಳೆಂಬ ಜನ ಅವರ ತುರುಗಳನ್ನು ದೋಚಿಕೊಂಡೊಯ್ಯುತ್ತಿದ್ದರೆಂದು ವರ್ಣನೆಗಳಿವೆ. ಆ ಪಂಜಾಬವೆತ್ತ? ಅಂದಿನ ಪಣಿಗಳ ಕುರುಹುದೋರುವ ಎಡೆಗಳೆಂದು ಹೇಳುವ ಇಂದಿನ ಪಣಿಯಾಲ ಮೊದಲಾದ ಊರುಗಳಿರುವ ಕಂನಾಡು ಎತ್ತ? ನಂಬುವುದಕ್ಕೂ ಅಸಾಧ್ಯವಾದ ಮಾತೆಂದು ಕೆಲರಿಗೆ ಎನಿಸಿದರೆ ತಪ್ಪಲ್ಲ.

ಬೆಳಗಾವಿ ಜಿಲ್ಹೆಯ ಬೈಲಹೊಂಗಲ ತಾಲೂಕು; ಇದು ಪುರಾತನ ಕಂನಾಡ ತಿರುಳೆಂದು ಹೆಸರಾದ ಒಂಕುಂದದ ನಾಡು. ಇಲ್ಲಿ ಹಣಬರೆಂಬ ಜನವಿದೆ. ಹಣಬರ ಹಟ್ಟಿ ಎಂಬ ಊರು ಇದೆ. 'ಹಟ್ಟಿ' ಎನ್ನುವುದರಿಂದ ಇದು ಬಹಳ ಹಳೆಯ ಊರು ಇರುವ ಸಂಭವವಿದೆ. ಹಣಬರ ಹಟ್ಟಿ ಎಂಬುವುದರಿಂದ ಹಣಬರು ತುರುಗಳನ್ನು ಸಾಕಿಕೊಂಡಿದ್ದವರೆಂದೂ ಊಹಿ ಸಲು ಎಡೆಯಿದೆ. ಬೆಳಗಾವಿ ಜಿಲ್ಹೆಯಂತೆ ಕಂನಡ ಜಿಲ್ಹೆಯಲ್ಲೂ ಹಣಬ ರುಂಟು. ಇವರು ಕಲ್ಯಾಣದತ್ತಣಿಂದ ಬಂದರೆಂದು ಇವರಲ್ಲಿ ಒಂದು ಗ್ರಹಿಕೆಯುಂಟಂತೆ. ಅಡವಿಯಲ್ಲಿದ್ದು ತುರುಕಾಯು, ಹಾಲು ಬೆಣ್ಣೆಮಾರಿ

ಜೀವಿಸಬೇಕೆಂದೂ ಇದುವೆ ಇವರ ಜಾತಿಯು ಕಾಯಕವೆಂದೂ ಇದು ಈ ಜನದ ಜಾತಿಧರ್ಮದ ಕಟ್ಟಳೆಯೆಂದೂ ನಂಬುಗೆಯಿದೆ. ( Tribes and Castes of Bombay Presidency Vol. II, p. 57) ಬೈಲಹೊಂಗಲ ತಾಲೂಕಿನಲ್ಲಿ ಇನ್ನೂ ಒಂದು ವಿಶೇಷವಿದೆ. ತುರುಕಾರರೆಂಬ ಜನವೂ ಅಲ್ಲಿ ವಿಶೇಷವಿದೆ. ಅಲ್ಲಿಯ ಸಮೀಪದ ದೇಸಾಯಿಗಳು ತುರುಕಾರ ಬಗೆಯವರು. ಯದು-ತುರುವರೂ ಪಣಿಗಳೂ ಪಂಜಾಬಿನಲ್ಲಿ ಋಗ್ವೇದ ಕಾಲದಲ್ಲಿ ಒಂದೆಡೆಗೆ ನೆಲಸಿದ್ದುದು ಋಗ್ವೇದದಲ್ಲಿ ಕಾಣುವುದು. ಬೈಲಹೊಂಗಲ ತಾಲೂಕಿನಲ್ಲಿ—ಪುರಾತನ ಒಂಕುದದ ನಾಡಿನಲ್ಲಿ ತುರುವರೂ ಹಣಬರೂ ಒಬ್ಬರೊಬ್ಬರ ನೆರೆಯಲ್ಲಿ ಬಾಳುತ್ತಿದ್ದಾರೆ ಇಂದಿಗೂ! ಪಣಿಯಾಡಿ, ಪಣಿಯೂಲ, ಪಣಂಬೂರುಗಳಿರುವ ನಾಡಾದರೂ ಯಾರದು? ತುರು (ತುಳು) ವರದೇ; ತುಳು ನಾಡು, ಕಂನಡ ಜಿಲ್ಹೆ ಎಂದರೆ ಗೋಪರ ರಾಷ್ಟ್ರ; ಗೋಪ-ರಾಷ್ಟ್ರ! ಇಂತಿದು ತರುವರ ಹಾಗೂ ಪಣಿಗಳ, ಹಣಬರ ಸಾಮೀಪ್ಯ ಸಂಬಂಧವು ವೇದಕಾಲದಲ್ಲಿ ಪಂಜಾಬಿನಲ್ಲಿ ಕಾಣಿಸಿಕೊಳ್ಳುತ್ತಿದ್ದುದನ್ನು ಕಂನಾಡಿನಲ್ಲಿ ಈಗಲೂ ಕಂಡುಕೊಂಡು ಮನಗಾಣಿಸಿಕೊಳ್ಳಬಹುದಾಗಿದೆ.

ಹಣಬರ ಹಟ್ಟಿ ಎಂಬುದು ಹಣಬರ ಊರಾಯ್ತು; ಹಣಬರೆಂಬ ಜನವಿದ್ದುದೂ ನಿಜ. ಅವರು ಅಡವಿಯಲ್ಲಿಯೆ ಇದ್ದು ಬಾಳಬೇಕೆಂಬ ಅವರ ಜಾತಿಯ ಕಟ್ಟಳೆಯೂ ಮಹತ್ವದ್ದಿರಬಹುದು. ಆದರೆ ಪಣಿಗಳೇ ಹಣಬರೆಂದು ಬಗೆಯುವುದಕ್ಕೆ ಕೆಲರಿಗೆ ಸ್ವಲ್ಪ ಸಂಕೋಚವೆನಿಸುತ್ತಿದ್ದರೆ, ಪಣಿಗಳೆಂಬ ಹೆಸರಿನಲ್ಲಿಯೇ ನಮ್ಮ ನಾಡಿನಲ್ಲಿ ಕೆಲವು ಜನರುಂಟೆಂದು ಹೇಳಿದ ಮೇಲಾದರೂ ಇದರಲ್ಲಿ ನಂಬುಗೆದೋರಬಹುದೆ? ಕೊಡಗಿನ ಕಾಡಿನಲ್ಲಿ ಪಣಿಗಳೆಂಬ ಹೆಸರಿನ ಜನಗಳುಂಟು. Wild Tribes ಕಾಡಿನಲ್ಲಿರುವ ಜನಗಳೊಡನೆ ಕೊಡಗಿನ ಗ್ಯಾಝಿಟಿಯರಿನಲ್ಲಿ ಅವರನ್ನು ಕುರಿತು ನಾಲ್ಕು ಮಾತುಗಳು ಬಂದಿವೆ.

They are distinguished as Mailas and Achalas. They are labourers along the Ghats from Tulu country. They have Hindu features, are of middle stature, and have black

strait hair, which is wavy with women. Some dress like Coorgs, and some in the low country fashion. They have no idols but like the Tulus call upon their gods Guliga, Khorti and Kalurti when eating. Their diet is like coorgs, the Achala Paleyas personate demoniacs in honour of their Bhutas or demons p. 215

ಈ ಪಣಿಗಳು ತಳುವರ ನಾಡಿಗೆ ಸಂಬಂಧವಿದ್ದವರೆಂದೂ ತುಳುವರಂತೆ ಕೆಲಕೆಲವು ನಡೆವಳಿಗಳಿದ್ದವರೆಂದೂ ಮೇಲಿನ ವರ್ಣನೆಯಿಂದ ಕಂಡು ಬಾರದೆ ಇರದು. ಇದು ಮಹತ್ವದ ಸಂಗತಿಯಾಗಿದ್ದು ಅನಾದಿಕಾಲದಿಂದ ಇರುವ ತುರುವರ ಹಾಗೂ ಪಣಿಗಳ ಸಂಬಂಧದ ಸೂಚಕವಾಗಿದೆಯೆಂದು ಹೇಳಬೇಕಾಗುತ್ತದೆ.

ಇನ್ನು ಕಂನಾಡಿನಲ್ಲಿ ಇರುವ ಈ ಪಣಿಗಳು ವೇದಕಾಲದ ಆ ಪಣಿಗಳ ತಳಿಯೆಂದು ನಿರ್ಧರಿಸಲು ಕೊಡಗಿನ ಗ್ಯಾಝಿಟಿಯರು ತುಂಬ ಸಹಾಯಕವಾಗಿದೆ. ವೇದ ಶಾಸ್ತ್ರಜ್ಞರೂ ವೇದಕ್ಕೆ ಟೀಕೆ ಟಿಪ್ಪಣಿಗಳನ್ನು ಬರೆದವರೂ 'ಪಣಿ' ಶಬ್ದಾರ್ಥವನ್ನು ಹೇಳಲು ಇನ್ನೂ ಯಾರೂ ಸಮರ್ಥರಾಗಿಲ್ಲ. ಯದು-ತುರ್ವಸು, ಅಜಾಃ, ಶಿಗ್ರುಃ ಮೊದಲಾದವುಗಳಂತೆ 'ಪಣಿ' ಎಂಬುದೂ ಸಾರ್ಥಪದವಾಗಿರಬೇಕೆಂದು ನನ್ನ ನಂಬುಗೆ. ಆದರೆ ಅದಕ್ಕೆ ಅರ್ಥವಾಗದೆ ಹಾಗೆಯೆ ಉಳಿದಿತ್ತು. ಪಣಿಗಳು ಇಂದಿನ ಬಣಂಜುಗಳ ಮೊದಲಿಗರಾಗಿರಬಹುದೆ? ಎಂಬ ಒಂದು ವಿಚಾರವು ಬಂದುಹೋಯ್ತು. ಆದರೆ ಕೊಡಗಿನ ಗ್ಯಾಝಿಟಿಯರಿನಲ್ಲಿ ಪಣಿಗಳಿಗೆ ಇರುವ ಇನ್ನೂ ಒಂದು ಪರ್ಯಾಯ ನಾಮವನ್ನೂ ಅವರ ಹೆಸರಿನ ಮುಂದೆಯೆ ಕಾಣಿಸಲಾಗಿದೆ. ಪಣಿಗಳು ಅಥವಾ ಪಳೆಯರೆಂದು ಅವರಿಗೆ ಹೆಸರಿದ್ದುದು ಆ ಗ್ಯಾಝಿಟಿಯರಿನಲ್ಲಿ ಕಾಣಿಸಿದೆ ನಿಜವಾಗಿಯೂ ಇದು ಅತ್ಯಂತ ಮಹತ್ವದ ಉಲ್ಲೇಖವಾಗಿದೆ. ಪಳೆಯುವೆಂಬುದು ವೇದಕಾಲದ ಜನಾಂಗದ ವಿಚಾರವಾಗಿ ತುಂಬ ಬೆಳಕನ್ನೀವ ಅಮೌಲಿಕವಾದ ಪರ್ಯಾಯಪದವಾಗಿದೆ.

ಪಣಿಗಳು ಎಂಹಕೆ ಪಳೆಯರು; ಪಳೆಯರು ಎಂದರೇನು? ಪಳೆಯರು ಎಂದರೆ ಹಳೆಯರು, ಪುರಾತನರು. ಆರ್ಯರಿಗಿಂತಲೂ ಮುಂಚಿನ ಜನವಿದು

ಎಂದರ್ಥ! ಪೌರ್ವಾತ್ಯ, ಪಾಶ್ಚಿಮಾತ್ಯ ಸಂಶೋಧಕರು ಆಜನ್ಮ ಕಷ್ಟ ಪಟ್ಟು ಕಂಡು ಹಿಡಿದ ಸಿದ್ಧಾಂತವನ್ನು ಅವರು ಕಂನಾಡಿನ ಪೂರ್ವಪರಂಪರೆ ಹಾಗೂ ಕಂನುಡಿಯ ತಿರುಳು ತಿಳಿದುಕೊಳ್ಳಲು ಪ್ರಯತ್ನಿಸಿದ್ದರೆ ಸ್ವಲ್ಪ ಶ್ರಮದಲ್ಲಿಯೆ ಅವರಿಗೆ ಇನ್ನೂ ಒಂದು ಬಗೆಯಿಂದ ಆ ಸಿದ್ಧಾಂತಕ್ಕೆ ಪುಷ್ಟಿಯು ಇಲ್ಲಿ ದೊರೆಯುತ್ತಲಿದ್ದಿತು. ಕಂನಾಡಿನ ಪರಂಪರೆ ಮತ್ತು ಇತಿಹಾಸದ ಹಾಗೂ ಕಂನುಡಿಯ ತಿರುಳಿನ ಸಶಾಸ್ತ್ರೀಯವಾದ ಅಭ್ಯಾಸವು ನಡೆಯದೆ ಇದ್ದುದರಿಂದ—ಸಂಶೋಧಕರು ಈ ಕಂನಾಡನ್ನು ಈ ವರೆಗೆ ಎಣಿಕೆಗೆ ಹಿಡಿಯದೆ, ಬರಿ 'ದ್ರಾವಿಡ'ವೆಂದು ದ್ರಾವಿಡೀ ಪ್ರಾಣಾಯಾಮವನ್ನು ನಡಸಿದ್ದರಿಂದ, ಭಾರತದ ಸಾಂಸ್ಕೃತಿಕ ಇತಿಹಾಸದೊಳಗಿನ ಒಂದು ಮಹತ್ವದ ಅಧ್ಯಾಯವು ಈ ವರೆಗೆ ಕಗ್ಗತ್ತಲೆಯಲ್ಲಿಯೆ ಉಳಿದಿತು; ಕೆಲವೊಂದು ಬೆಳಕಿಗೆ ಲೋಕವು ಎರವಾಯ್ತು.

ಬೈಲಹೊಂಗಲ ತಾಲ್ಲೂಕಿನ ಹಳೆಯರೂ ಬಹಳ ಪ್ರಸಿದ್ಧರು. ಹಣಬರಂತೆ ಹಳಬರೆಂಬ ಜನವೂ ಅಲ್ಲಿದೆ. ೧೮೫೭ ರ ಸ್ವಾತಂತ್ರ್ಯ ಯುದ್ಧದಲ್ಲಿ ಕಂನಾಡಿನ ಕ್ರಾಂತಿವೀರನೆಂದು ಖ್ಯಾತಿವೆತ್ತ ಸಂಗೊಳ್ಳಿ ರಾಯಣ್ಣನು ಬೈಲಹೊಂಗಲ ತಾಲೂಕಿನವನು, ಎಂದರೆ ಒಂಕುಂದ ನಾಡಿನವನು.

ಹಳಿಯ, ಹಳಬನೆಂಬ ಹೆಸರು ಅರ್ಥಪೂರ್ಣವಾಗಿದೆ. ಳಕಾರವು ಣಕಾರವಾಗುವ ವಾಡಿಕೆಯಿದೆ. ಹುಳಿ–ಹುಣಿ(ಸೆ); ನೊಳ–ನೊಣ; ಕುಳಿ–ಕುಣಿ; ಹಾಗೆ ಪಳಿ–ಪಣಿ ಎಂದಾಗಿರುವುದು ಸಹಜವಾಗಿದೆ. ಹಳಿಯ ಅಥವಾ ಪಳಿಯರು ಕೊಡಗಿನಲ್ಲಿದ್ದುದು ಅಲ್ಲಿಯ ಗ್ಯಾಝೆಟಿಯರಿನ ಮೇಲಿಂದ ಗೊತ್ತಾಗುತ್ತದೆ. ಕ್ರಿ. ಶ. ೧೮೭೬ ರಲ್ಲಿ ಪ್ರಕಟವಾದ ಆವೃತ್ತಿಯಲ್ಲಿ ಆಗ ಪಳಿಯರು ೩೧೮ ಗಂಡಸರೂ, ೩೧೪ ಹೆಂಗಸರೂ ಇದ್ದುದಾಗಿ ಕಾಣಿಸಿದೆ.

ಮೈಸೂರ ಸೀಮೆಯಲ್ಲಿ ಹಳಿಕಾರರೆಂದು ಈ ಜನಗಳಿಗೆ ಹೆಸರಿದ್ದುದೂ ಶಾಸನಗಳಿಂದ ತಿಳಿಯುತ್ತದೆ. 'ಸೀರೆ ನಾಡ ಹಳಿಕಾರ ನಾಯಕರು ಬಂದು ತುರುವಂ ಪರಿಯಿಸಲು....ಕಾದು, ಮುಗುಳ್ಚಿ ಸುರಲೋಕ ಪ್ರಾಪ್ತನಾದ'ವನ ಕುರಿತು ಹೊಯ್ಸಳ ವಿಷ್ಣುವರ್ಧನನ ಕಾಲದ ಕ್ರಿ. ಶ. ೧೧೧೪ ರ ಸುಮಾರಿನದು, ಇದರಂತೆ 'ಬಯಲ ಹುಲಿ ಹಳಿಕಾರ ಲಕ್ಕಣ್ಣನಾಯಕರ

ಮಕ್ಕಳು ಚಿಕ್ಕ ಅಲ್ಲಪನಾಯಕರು, ವೈಷ್ಣವರಾದ ಕೋನೇರಿ ಅಯ್ಯನವರಿಗೆ ಕೊಟ್ಟ ದತ್ತಿಯ' ಶಾಸನವಿದೆ. ಇದು ಕ್ರಿ. ಶ. ೧೪೭೧ ರ ಸುಮಾರಿನದು. ಇದೇ ಮೇರೆಗೆ ವಿಜಯನಗರದ ಸಾಳ್ವ ನರಸಿಂಹನ ಕಾಲದ ಒಂದು ಶಾಸನ ದಲ್ಲಿ 'ಹಳಿಕಾರ ಲಚ್ಚಿನಾಯ್ಕರ ಮಕ್ಕಳು ಚಿಕ್ಕ ಅಲ್ಲಪ್ಪನಾಯ್ಕರು' ಕೊಟ್ಟ ದಾನದ ಉಲ್ಲೇಖವಿದೆ. ಈ ಹಳಿಕಾರರ ಹೆಸರಿನ ಮುಂದೆ 'ನಾಯ ಕರು' ಎಂದು ಇರುವ ಪದವಿಯು ಅವರ ಬಲ್ಲಾಳ್ತನದ ಸೂಚಕವಾಗಿದೆ. ಹಳಬರೂ ಹಳಕಾರರೂ ಗಂಡುಗಲಿಗಳೆಂದು ಎಂದಿನಿಂದಲೂ ಹೆಸರು ಪಡೆ ದವರು. ಕಂನಾಡ ಪಡೆಯಾಳುಗಳು ಇವರೆ.

ಕೊಡಗಿನಲ್ಲಿ ಪಳೆಯ (ಹಳೆಯ); ಮೈಸೂರಲ್ಲಿ ಹಳಿಕಾರ ಎಂಬಂತೆ ಉತ್ತರ ಕಂನಾಡಿನಲ್ಲಿ ಹಳಬರೆಂಬ ಹೆಸರು ವಾಡಿಕೆಯಾಗಿದೆ. ಉತ್ತರ ಕಂನಡ ಜಿಲ್ಹೆಯಲ್ಲಿ ಹಳಪೈಕರೆಂಬ ಹೆಸರಿನ ಜನಗಳೂ ಈ ಹಳಕಾರ ಬಗೆಯವರೆಂದೇ ನನ್ನ ನಂಬುಗೆ. ಹಳಪೈಕರೂ 'ತುರುವಂ ಕೊಂಡೊಯ್ವ ಕಾಯಕ'ದಲ್ಲಿ ನಿಪುಣರೆಂದು ಹೆಸರಾಗಿದ್ದಾರೆ. ಇವರೂ ಒಳ್ಳೆಯ ದಂಡಾಳು ಗಳೆಂದು ಪ್ರಶಂಸೆಹೊಂದಿದ್ದಾರೆ.

ಋಗ್ವೇದ ಕಾಲದ ನಂತರ ಪಣಿಗಳ ಹೆಸರು ಕಾಣೆಯಾಗುತ್ತದೆ. ಇದಕ್ಕೆ ಏನು ಕಾರಣವೊ ತಿಳಿಯದು. ಹಿಂದೂ ದೇಶದ ಬೇರೆ ಯಾವ ಭಾಗ ದಲ್ಲೂ ಪಣಿಗಳೆಂಬ ಹೆಸರಿನ ಜನವಿದ್ದುದು ನನ್ನ ಓದಿನಲ್ಲಿ ಬಂದಿಲ್ಲ. ಪಣಿ ಗಳ ಕುರುಹುದೋರುವ ಪಣಿಯಾಲದಂತಹ ಹೆಸರಿನ ಎಡೆಗಳು ಇದ್ದುದೂ ಗೊತ್ತಾಗುವುದಿಲ್ಲ. ಇನ್ನೂ ಹೆಚ್ಚಿನ ಓದು ಅಭ್ಯಾಸವಿದ್ದವರು ಇದು ಕಂನಾಡ ಪಡೆಮಾತೊ ಎಂಬುದನ್ನು ನಿರ್ಧರಿಸಿ ಹೇಳಬೇಕಾಗಿ ಬಿನ್ನಹ ಈಗ ನನ್ನ ಮಟ್ಟಿಗಂತೂ ಹಾಗೆ ತೋರುತ್ತಲಿದೆ.

ಹಳಬ ಅಥವಾ ಹಳಿಕಾರ ಇಲ್ಲವೆ ಹಳಿಯವೆಂಬ ಹೆಸರಂತೂ ಕಂನಾಡ ವೈಶಿಷ್ಟ್ಯವೆಂದೇ ಹೇಳಲು ಅಡ್ಡಿಯಿಲ್ಲ. ಈ ಹೆಸರಿನ ಜನ ನಮ್ಮ ನಾಡಿನಲ್ಲಿ ಹಳ್ಳಿಹಳ್ಳಿಗೂ ಇದ್ದಾರೆ. ಗ್ರಾಮ ಸಂರಕ್ಷಕ ಬಲವು ಎಂದಿನಿಂದಲೂ ಇವರದೇ. ಬಸ್ತರಾ ಮತ್ತು ಕನ್‌ಕೇರ ಎಂಬುವು ಮಧ್ಯಪ್ರಾಂತದಲ್ಲಿರುವ ಎರಡು ಸಂಸ್ಥಾನಗಳು. ಇವುಗಳಲ್ಲಿ 'ಹಳಬೀ' ಜನಗಳು ಪ್ರಾಮುಖ್ಯ ರಾಗಿದ್ದರೆಂದು ಅಲ್ಲಿಯ ಗ್ಯಾಝಿಟಿಯರು ಮತ್ತು ಜಾತಿ ಜನಾಂಗದ ವಿವರ

ಣೆಯ ಪುಸ್ತಕಗಳಲ್ಲಿ ಹೇಳಿದ್ದಾಗಿದೆ. ಮಧ್ಯಪ್ರಾಂತದಲ್ಲಿ ೧ ಲಕ್ಷಕ್ಕಿಂತ ಹೆಚ್ಚು ಜನ ಹಳಬರಿದ್ದಾರಂತೆ! ಆದರೆ ಈ 'ಹಳಬ' ಶಬ್ದದ ಅರ್ಥವೇ ತಿಳಿಯದೆ ಹೋದುದರಿಂದ ಅವರ ವಿಚಾರವಾಗಿ ಹೆಚ್ಚಿಗೆ ಏನನ್ನೂ ಹೇಳುವುದಕ್ಕೆ ಆ ಲೇಖಕರಿಗೆ ಸಾಧ್ಯವಾಗಿಲ್ಲ. 'ಹಳಬ' ಶಬ್ದವೇ ತನ್ನ ಕತೆ ಹೇಳಲು ಸಿದ್ಧವಿದ್ದರೂ ಕಂನುಡಿಯ ನೆರವಿಲ್ಲದೆ ಅದು ಅವರಿಗೆ ತಿಳಿವ ಬಗೆ ಹೇಗೆ?

ಹಬಳರೆಂಬ ಹೆಸರು ಕಾಲಸೂಚಕವಾಗಿದೆಯೆ ಹೊರತು ಅದರಿಂದ ಜಾತಿಯು ತಿಳಿಯುವುದಿಲ್ಲ. ನಮ್ಮ ಭಾಗದ ಹಳಬರ ಕುಳಗಳನ್ನು ವಿಚಾರಿಸಿದಲ್ಲಿ ಅವರು ಕುರುಬ ಬಗೆಯುವರೆಂದು ಕಂಡುಬಂದಿದೆ. ಈ ಕಾರಣದಿಂದ ಹಳಬರು ಕುರುವರ ಒಂದು ಪಂಗಡ. ಕುರುವರೆಂದರೆ ಇವರೂ ದನಗಾರರೇ. ಮಹಾರಾಷ್ಟ್ರದಲ್ಲಿ ದನಗಾರರಿಗೇ ಧನಗರ (ಕುರುಬ) ರೆಂದು ಹೆಸರಿದೆ.

ಮಹಾಭಾರತದ ಅಂಧಕ–ವೃಷ್ಣಿಗಳು ದನಗಾರರು. ಇವರು ಕುರುವಂಶಕ್ಕೆ ಸಂಬಂಧಿಸಿದವರೆಂಬ ಮಾತನ್ನು ನೆನಪಿಗೆ ತಂದುಕೊಂಡಲ್ಲಿ ಇವರೆಲ್ಲ 'ಕುರುವಃ' ಎಂದರೇನು ಎಂಬುದು ಸ್ಪಷ್ಟವಾಗುತ್ತದೆ. ಸಂಸ್ಕೃತ ಭಾಷೆಯಿಂದ 'ಕುರವಃ' ಇದರ ಗುಟ್ಟು ತಿಳಿಯುವುದಿಲ್ಲ. 'ಕುರವಃ' ಎಂದರೆ ಇವರೆಲ್ಲ ಕುರುವರು–ಕುರಿಗಾರರೆಂದು ಅರ್ಥ. ಶಾತವಾಹನರು, ವಿಜಯನಗರದ ರಾಜರು ಮೊದಲಾದವರೆಲ್ಲ ಕುರುಂಬರಾಯರೆಂದೂ, ತಮ್ಮ ವಂಶಕ್ಕೆ ಸಂಬಂಧಪಟ್ಟವರೆಂದೂ ನಮ್ಮ ನಾಡಿನ ಕುರುಬರ ಜನಾಂಗದಲ್ಲಿ ತಲೆತಲಾಂತರಗಳಿಂದಲೂ ದೃಢವಾದ ನಂಬುಗೆಯಿದೆ. ಕೆಳದಿನೃಪವಿಜಯದಲ್ಲಿ ಹರಿಹರ-ಬುಕ್ಕರು ಕುರುಬರೆಂದು ಹೇಳಿದೆ. ವಿದ್ಯಾರಣ್ಯರ ಕಾಲಜ್ಞಾನದಲ್ಲಿ 'ಕುರುವಂಶ ಪ್ರಸೂತಿಜೌ' ಎಂದು ವರ್ಣಿಸಿದೆ. ಮೇಲಣ ಸಂಗತಿಗಳನ್ನು ಸರಿಹೊಂದಿಸಿ ನೋಡಿದಲ್ಲಿ ಕುರುಬರಲ್ಲಿರುವ ಪರಂಪರಾಗತವಾದ ಆ ನಂಬುಗೆಯು ಅರ್ಥವಿಹೀನವೆಂದು ಹೇಳುವುದಕ್ಕಾಗುವುದಿಲ್ಲ. ಯದು-ತುರ್ವರ ಸಂತತಿ, ಕುರುವಂಶ ಎಂಬೀ ಬಗೆಯ ಪ್ರೌಢ ಗಂಭೀರ ಪದಗಳ ಅರ್ಥವು ಕುರಿಗಾರ ಹಟ್ಟಿಕಾರ ಅಥವಾ ದನಗಾರರ ವಂಶದ, ಗೋಪರ ಕುಲವೆಂದಲ್ಲದೆ ಬೇರೆ ಆಗದು.

ಹಳಬರು, ಕುರುವರ ಅಥವಾ ಹಟ್ಟಿಕಾರರ ಹತ್ತುಗಡೆಯವರೆಂಬು ದನ್ನು ತಿಳಿದುಕೊಂಡರೆ ವೇದಕಾಲದ ಮುಂದೆ ಈ ಜನಗಳು ಒಮ್ಮೆಲೆ ಮಾಯವಾದಂತೆ ಮುಂದಿನ ಸಾಹಿತ್ಯದಲ್ಲಿ ಎಲ್ಲಿಯೂ ಉಲ್ಲೇಖಗಳು ಬಾರ ದುದರ ಕಾರಣವು ಲಕ್ಷದಲ್ಲಿ ಬರುವುದು. ಕುರುಗಳು, ಯದು-ತುರ್ವರು ಅಂಧಕ-ವೃಷ್ಣಿಗಳೆಂಬ ಗುಂಪುಗಳಲ್ಲಿ ಹಳಬರು ಎಂದರೆ ಪಣಿಗಳೂ ಒಳ ಗೊಂಡಿರುವುದು ಶಕ್ಯವಿದೆ. ಹಳಬರೂ, ಹಣಬರೂ, ತುರುಕಾರರೂ ಬೆಳ ಗಾವಿ ಜಿಲ್ಹೆಯಲ್ಲಿ ಸಮೀಪ ಸಮೀಪದಲ್ಲಿದ್ದುದನ್ನು ಈ ಮೊದಲು ಸೂಚಿ ಸಿದೆ. ತುಳುನಾಡು–ಕಂನಡ ಜಿಲ್ಹೆಯಲ್ಲಿ ಎಂದರೆ ಗೋಪರಾಷ್ಟ್ರದಲ್ಲಿ ಪಣಿಗಳ ಹೆಸರಿನ ಎಡೆಗಳು ಉಳಿದಿರುವುದೂ ಪಣಿಗಳೆಂಬ ಹೆಸರಿನಲ್ಲಿಯೆ ಈಗಲೂ ಸ್ವಲ್ಪವಾದರೂ ಜನ ದೊರೆಯುತ್ತಿರುವುದೂ, ಅಲ್ಲಿಯೆ ಇನ್ನೊಂದೆ ಡೆಗೆ ಹಳಪೈಕರು ನೆಲೆಯಾಗಿರುವುದೂ ಕೇವಲ ಕಾಕತಾಲ ನ್ಯಾಯವೆನ ಬಹುದೆ?

ಮಧ್ಯಪ್ರಾಂತದಲ್ಲಿ ಹಳಬರ ಸಂಸ್ಥಾನಗಳು ಬಸ್ತರಾ ಮತ್ತು ಕನ್ ಕೇರಗಳೆಂಬುವು ಉಂಟೆಂದು ಹೇಳಿತಷ್ಟೆ. ಅಲ್ಲಿಯ ಅವರ ಭಾಷೆಯ ಪಾಡನ್ನು ಕುರಿತು ಡಾ. ಗ್ರಿಯರಸನ್‌ರು ಬರೆಯುವುದೇನೆಂದರೆ:

> It (Halbi) was nobody's child for a long time.... it is a corrupt mixture of several languages; both Aryan and Dravidian.—Linguistic Survey of India Vol. I, part I, p. 144.

ಹಳಬರ ಮೂಲ ಭಾಷೆ ಆರ್ಯವರ್ಗದ್ದಲ್ಲವಾದುದರಿಂದ ಅವರಿಗೆ ಪರಿಸ್ಥಿತಿಯ ಪ್ರವಾಹದಲ್ಲಿ ಯಾವ ಯಾವ ಜನಗಳೊಡನೆ ಕೂಡಬೇಕಾ ಯಿತೊ ಬೆರೆಯಬೇಕಾಯಿತೊ ಆ ಎಲ್ಲ ಭಾಷೆಗಳ ಮಿಶ್ರಣವೂ ಅವರ ನುಡಿ ಯಲ್ಲಿ ಆಗಿದ್ದರೆ ಸೋಜಿಗವೇನು? ಹಳಬವೆಂಬ ಹೆಸರು ಇವರು ತೆಲುಗು ಅಥವಾ ತಮಿಳ ನಾಡವರಲ್ಲವೆಂದು ನಿಶ್ಚಿತವಾಗಿ ಹೇಳುತ್ತದೆ. ಮಧ್ಯಪ್ರಾಂತ ದಲ್ಲಿ ಹಳಬರು ಹೇಗೆ? ಎಂಬ ಪ್ರಶ್ನೆ ದಿಗಿಲುಗೊಳಿಸುತ್ತದೆ. ಆದರೆ ಅಲ್ಲಿಯ ಜಾತಿಜನಾಂಗದ ಸೂಕ್ಷ್ಮವಾದ ವಿಮರ್ಶೆಯಲ್ಲಿ ಆ ಭಾಗದಲ್ಲಿ ಹಳಬರು ಮಾತ್ರವಲ್ಲ, ಇವರೊಡನೆ, ಕುರುಬರೂ ಉಂಟೆಂಬುದು ನಿದರ್ಶನಕ್ಕೆ

ಬರುತ್ತದೆ. ಮಧ್ಯಪ್ರಾಂತದ ಹಳ್ಳಿಯ ಆಳುಗಳನ್ನು (village menials) ಹೇಳುವಾಗ ರಸೆಲ್ಲರು ವಿವರಿಸಿದ ಕೆಲವು ಜಾತಿಗಳು ಹೀಗಿವೆ :

Halba—House-servant and farm servant; Kurumwars and Dhangars ಕೂಡಿ ಇಲ್ಲಿಯೆ ಹೇಳಿದ್ದಾನೆ. Tribes and Castes of C. P. I. p. 51

Halbi— Synonym of Halba p. 366

Kotwals— A sect of Halba (keeper of a castle or a village watchman) p. 379 oldest recident in the country; p. 380

ಮಹಾರಾಷ್ಟ್ರ ಶಬ್ದಕೋಶದಲ್ಲಿ ಗ್ರಾಮಸೇವಕರಾದ 'ಬಾರಾ ಬಲೂತೇದಾರ' ರನ್ನು ಕುರಿತು ಕೆಲವು ವಿವರಣೆ ದೊರೆಯುತ್ತದೆ. ಅದರಲ್ಲಿ 'ಕೊರಬು' ಎಂಬವರುಂಟಂತೆ. ಇವರೂ ಹಳ್ಳಿಯ ಆಳುಗಳು.

ಕೊರಬು: ಊರೊಳಗಿನ ಒಬ್ಬ 'ಬಲೂತೇದಾರ': ಇವನು ಧನಗರ ಜಾತಿಯವನು. ಕೊರಬುನ ಕೆಲಸುಗಳು ಹಲವು ಬಗೆಯವಿವೆ. ಅವುಗಳಲ್ಲಿ ಗ್ರಾಮಕ್ಕೆ ಬಂದ ಪ್ರವಾಸಿ (ಅಧಿಕಾರಿ) ಗಳ ಸೇವೆಗೆಯ್ಯುವುದು· ಅವರ ಗಂಟು ಮೂಟೆ ಹೊರುವುದು. ರೈತರಿಂದ ಹೊಲದ ತೆಂಗೆ ವಸೂಲ ಮಾಡುವುದು ಮುಂ. ಇದು ದ್ರಾವಿಡ ಕುರಬ, 'ಕುರುಂಬ' ದಿಂದ ನಿಷ್ಪನ್ನವಾದ ಶಬ್ದ. 'ಕೊರಬು' ಇದರಿಂದ ಕುರುಬಗಿರಿ ಎಂಬುದು ಸಾಧಿತ ರೂಪ, ಕುರುಬಗಿರಿಯೆಂದರೆ ಕೊರಬೂನ ಕೆಲಸ ಮತ್ತು ಅಧಿಕಾರ.

ಮಹಾರಾಷ್ಟ್ರದ ಹಳ್ಳಿಪಳ್ಳಿಗಳಲ್ಲಿ ರೂಢವಾಗಿರುವ ಗ್ರಾಮಪದ್ಧತಿಯನ್ನು ಮಹಾರಾಷ್ಟ್ರ ಶಬ್ದಕೋಶದಲ್ಲಿ ಕೊಟ್ಟಿದೆ. ಹಳ್ಳಿಯ ಆಯಗಾರರಲ್ಲಿ ಕೊರಬು ಇವನೂ ಒಬ್ಬನು. ಈ ಕೊರಬು ಅಥವಾ ಕುರುಬನ ಕೆಲಸವನ್ನು ಗಮನಿಸಿದರೆ ಹಳಬನೆಂಬ ಹೆಸರಿನವನು ನಮ್ಮ ಭಾಗದಲ್ಲಿ

ಮಾಡುವ ಕೆಲಸಗಳು ಇವುಗಳಿಂದ ಭಿನ್ನವಿಲ್ಲ. ನಮ್ಮಲ್ಲಿ ಹಳಬರು ಕುರುವರಾಗಿರುವಂತೆ ಮಹಾರಾಷ್ಟ್ರದಲ್ಲಿ ಕೊರಬುಗಳು ಹಳಬರಾಗಿದ್ದಾರೆ.

ಇವೆಲ್ಲ ಸಂಗತಿಗಳಿಂದ ಮಧ್ಯಪ್ರಾಂತದಲ್ಲಿ ಹಳಬರೊಡನೆ ಕುರುವರೂ ಉಂಟೆಂಬುದು ಗೊತ್ತಾಗದೆ ಇರದು. ಅಲ್ಲದೆ ಹಟ್ಟಿಕಾರರ ಬೀಡು ವರ್ಹಾಟ-ಮಧ್ಯಪ್ರಾಂತವು. ಮಧ್ಯಪ್ರಾಂತದ Tribes and Castes I. ಪು. ೬೭ ರಲ್ಲಿ ರಸೆಲ್ಲನು ಹಟಗಾರರನ್ನು ಕುರಿತು ಹೇಳಿದ್ದಾನೆ. ನಿಜಾಂ ರಾಜ್ಯದ ವರ್ಹಾಟದ ಕಡೆಯ ಭಾಗದಲ್ಲೂ ಈ ಜನಗಳಿದ್ದುದನ್ನು ಆ ಸಂಸ್ಥಾನದ ಜಾತಿಗಳ ವಿವರಣೆಯ ಪುಸ್ತಕದಲ್ಲಿ ಬಂದಿದೆ. Hatkar, Bargi-Dhangar a cultivating caste, they are immigrants and settled in the country in very early times (Tribes and Castes of Nizams Dominion Vol. I, p. 248-255)

ಇನ್ನೊಂದೆಡೆಗೆ ಇವರನ್ನು ಕುರಿತು ಹೀಗೆ ಬರೆದಿದೆ: Hatkars are all Bargi Dhangars or shepherds with spears. ಹಿಂಗೋಲಿ, ವರ್ಹಾಟಗಳ ನಾಯಕರೆಲ್ಲ ಹಟ್ಟಿಕಾರರೇ ಇರುವರಂತೆ ಇವರೆಲ್ಲ ವಿಲಾಸಿ ಪ್ರಿಯರಂತೆ. ಪೈನಗಂಗೆಯ ಉತ್ತರಕ್ಕೂ ಇವರು ಉಂಟು. In occupation the Halkars are cultivators and hold land tenures of different grades. They are Patels of villages, Deshmukhas, occupancy and non-occupancy rayats and landless day laboures The men do not wear the secred thread.

ಈ ಕಾರಣದಿಂದ ಮಧ್ಯಪ್ರಾಂತದಲ್ಲಿ ಲಕ್ಷಾವಧಿ ಹಳಬರಿದ್ದುದೂ, ಬಸ್ತರಾ, ಕನ್‌ಕೇರ ಸಂಸ್ಥಾನಗಳಿದ್ದುದೂ ಸೋಜಿಗದ ಮಾತಲ್ಲ. ಹಟ್ಟಿಕಾರ-ದನಗಾರರೊಡನೆ ಹಳಬರೂ ಎಲ್ಲೆಡೆಗೆ ಇರುವುದನ್ನು ಈ ಮೇಲಣ ವಿವರಣೆಯಿಂದ ಮನಗಾಣಬಹುದಾಗಿದೆ.

ಆದುದರಿಂದ, ವೇದದ ಯದು-ತುರ್ವಶರು ಮತ್ತು ಪತ್ತಿಗಳೊಡನೆ ಪಣಿಗಳೂ ಇದ್ದುದರ ರಹಸ್ಯವು ಇಲ್ಲಿ ಸ್ಪಷ್ಟವಾಗುವುದು. ಕಂನಾಡ ಹಳೆಯ ಜನಗಳ ಅಭ್ಯಾಸದಿಂದ ಈ ಮಾತು ವಿಶದವಾಗುವುದು.

## ಟಕ್ಕರು, ತಸ್ಕರರು? ತಕ್ಷಕರು?

ಟಾಕಳಿ (ಬೆಳಗಾವ ಜಿಲ್ಹೆ), ಟಕ್ಕಳಕಿಯಂತೂ ಹಲವು ಕಡೆಗೆ ಇದೆ. 'ಟಕ್ಕ' ಎಂಬ ಒಂದು ಪ್ರಾಚೀನ ಜನದ ಹೆಸರಿಗೆ ಈ ಊರ ಸಂಬಂಧ ವೇನಾದರೂ ಇರಬಹುದೊ ತಿಳಿಯದು. ಟಕ್ಕರು ಪಂಜಾಬದತ್ತಣಿನ ಜನ. ಈ ಹೆಸರಿನವರು ಅಲ್ಲಿ ಉಂಟೆಂತೆ. ರುದ್ರಾಧ್ಯಾಯದ 'ನಮೋ ನಿಷಂಗಿಣ ಇಷುಧಿ ಮತೇ ತಸ್ಕರಾಣಾಂ ಪತಯೇ ನಮಃ' ಎಂಬ ಮಂತ್ರ ದಲ್ಲಿ ಕೇಳಬರುವ 'ತಸ್ಕರ' ವೆಂಬ ಜನವೆ ಈ 'ಟಕ್ಕರ' ರಾಗಿರಬಹುದೆ? ಠಾಕರ, ಠಕ್ಕರ, ಥಕ್ಕರ ಎಂಬ ಅಡ್ಡ ಹೆಸರಿನಲ್ಲಿ ಆ ಪುರಾತನ ಜನದ ಹೆಸ ರಿನ ಹೋಲಿಕೆಯೇನೊ ಉಂಟು. ಇದನ್ನು ಕುರಿತು ಹೆಚ್ಚಿನ ವಿಮರ್ಶೆ ಯಾಗಬೇಕಾದುದು ಅವಶ್ಯ. ತಕ್ಷಕ ಶಬ್ದವೂ ಟಕ್ಕವೆಂಬ ರೂಪತಾಳ ಬಹುದಾಗಿದೆ. ತಕ್ಷಶಿಲಾ ವೊದಲಾದುವು ತಕ್ಷಕರೆಂಬ ನಾಗರ ಅವಶೇಷ ಗಳಂತೆ. ಆ ಕುಲದವರು ಕಂನಾಡಿಗೆ ಬಂದಿದ್ದರೆ ಟಾಕಳಿ, ಟಕ್ಕಳಿಕೆಗಳು ಅವರ. ಕುರುಹುಗಳಾಗಿರುವ ಸಂಭವವೂ ಉಂಟು.

ಈ ವರೆಗೆ ವಿವರಿಸಿದ ಜನಗಳೆಲ್ಲ ಅತಿಪುರಾತನ ಕಾಲದವರು; ವೇದ ಕಾಲದಷ್ಟು ಪ್ರಾಚೀನರು; ಅದಕ್ಕೂ ಹಿಂದಿನವರೆಂದೂ ಹೇಳಬಹುದಾ ದವರು. ಆ ಪಣಿಗಳಂತೂ ಹಟ್ಟಿಕಾರರ ಒಡನಾಡಿಗಳೇ; ಹತ್ತಿರದ ಬಳಗ ದವರೇ. ಆದರೆ ಕೋಲ, ಮುಂಡ, ಚಂಡ ವೊದಲಾದವರು ಹಟ್ಟಿಕಾರರಿ ಗಿಂತಲೂ ವೊದಲಿನವರೆಂದು ಹೇಳುವುದಕ್ಕೆ ಇಂಬಿದೆ.

ಇದರ ಮುಂದಿನ ಕಾಲದಲ್ಲಿ ನಾನಾ ಬಗೆಯ ತಂಡಗಳು ಭಾರತಕ್ಕೆ ನುಗ್ಗಿ ಬಂದುವು. ಅವುಗಳಲ್ಲಿ ಕಂನಾಡಿನ ವರೆಗೂ ಬಂದು ತಾಗಿದ ಕೆಲ ವನ್ನು ಇಲ್ಲಿ ಹೇಳಿದೆ.

## ಹೈಹಯರು

ಕಾರ್ತವೀರ್ಯಾರ್ಜುನನು ಹೈಹಯ ವಂಶದವನೆಂದು ಹೇಳುವರು. ಮಾಹಿಷ್ಮತಿಯು ಕಾರ್ತವೀರ್ಯನ ರಾಜಧಾನಿ. ಪರಶುರಾಮನು ಈತನ ವಿರೋಧಿ. ಹೈಹಯರು ಭಾರತದ ಹೊರಗಿನ ಜನವೆಂದು ಸಂಶೋಧಕರ ಮತವಿದೆ. ಅಪಕಾರಣ ಈ ಪರಕೀಯ ದಾಳಿಗಾರರನ್ನು ಎದುರಿಸುವುದೇ

ಪರಶುರಾಮನ ಹಿರಿಗುರಿಯಾಗಿದ್ದಿತೆಂದು ಹೇಳಬೇಕಾಗುತ್ತದೆ. ಈ ದೃಷ್ಟಿಯಿಂದ ಪರಶುರಾಮನ ಕಾರ್ಯ ದೇಶಾಭಿಮಾನ, ಧರ್ಮಾಭಿಮಾನಗಳ ಹಿನ್ನೆಲೆಯಲ್ಲಿ ಅತಂತ್ಯ ಪ್ರಶಂಸನೀಯವೆಂದು ಕಂಡುಬಾರದೆ ಇರದು. ಪರಕೀಯರ ದಾಳಿಗಳಿಂದ ತಮ್ಮನ್ನು ಕಾಪಾಡಿದುದಕ್ಕಾಗಿಯೆ ಭಾರತೀಯರು ಪರಶುರಾಮನನ್ನು ಪರಮಾತ್ಮನ ಅವತಾರವೆಂದು ಎಣಿಸಿದರು. ಆತನಿಗೆ ತಮ್ಮ ಕೃತಜ್ಞತೆಯನ್ನು ಸಲ್ಲಿಸಿದರು. ಪರಶುರಾಮನು ಹೈಹಯರನ್ನು ೨೧ ಬಾರಿ ಸಮೂಲ ನಾಶಮಾಡಿದರೂ ಅವರ ಪೀಳಿಗೆ ಮತ್ತೆ ಉಳಿಯದೆ ಹೋಗಲಿಲ್ಲ.

ತ್ರಿಪುರಿಯ ಚೇದಿವಂಶದ ರಾಜರು ಹೈಹಯರೆಂದು ವಾಡಿಕೆಯಿದೆ. ಬಾದಾಮಿಯ ಮಂಗಳೀಶನು ಹೈಹಯ ವಂಶದ ಬುದ್ಧರಾಜನನ್ನು ಗೆದ್ದು ತಂದ ಸಂಪತ್ತಿನಿಂದ ಮಹಾಕೂಟದ ಹತ್ತಿರ ವಿಜಯಸ್ತಂಭವನ್ನು ನಿಲ್ಲಿಸಿದನು (ಕ್ರಿ. ಶ. ೬೯೭). ಚೇದಿಯರ ಮನೆತನದ ಕನ್ನೆಯರನ್ನು ಮಳಖೇಡಿನ ರಾಷ್ಟ್ರಕೂಟರು ಮದುವೆಯಾಗುತ್ತಿದ್ದರು.

ಕಂನಾಡಿನಲ್ಲಿ ಹೈಹಯರು ಬಂದು ಕಂನಾಡವರೇ ಆಗಿಬಿಟ್ಟದ್ದೂ ಉಂಟು. ಇಲ್ಲಿ ಆಳಿದ ಬಿಜ್ಜಳಾದಿ ಕಲಚೂರಿಗಳು ಹೈಹಯರು. ಕಾರ್ತವೀರ್ಯಾರ್ಜುನನ ವಂಶದವರೆಂದುಕೊಳ್ಳುವ ಕೆಲವು ಕ್ಷತ್ರಿಯರು ಈಗ ಈ ನಾಡಿನಲ್ಲಿದ್ದಾರೆ.

## ನಾಗರು

ನಾಗರು ಕಂನಾಡಿನಲ್ಲಿ ಆಗಿಹೋದ ಬಗೆಗೆ ಸಂದೇಹಕ್ಕೆ ಎಡೆಯೆ ಇಲ್ಲ. ನಾಗರಹಳ್ಳಿ, ಕಟ್ಟೆ, ಬಾವಿ, ಊರು, ಪುರ, ಹಾಳ, ನಗರ ಮೊದಲಾದುವು ಇವರ ಕುರುಹುಗಳು. ಬನವಾಸಿ ದೇಶದ ಒಂದು ಭಾಗಕ್ಕೆ ನಾಗರಖಂಡವೆಂದು ಹೆಸರಿದ್ದಿತು.

ಕಂನಾಡಿಗೆ ಬಂದ ನಾಗರು ಎಲ್ಲಿಯವರು? ಎಂದು ಬಂದರು? ಎಂಬುದರ ವಿಚಾರವು ಇನ್ನೂ ಆಗಿಲ್ಲ. ಆಸಾಮದಲ್ಲಿ ನಾಗರೆಂಬ ಕಾಡಾಡಿಗಳಿದ್ದಾರೆ. ಆದರೆ ಕಂನಾಡು, ಗುಜರಾತ, ಮಹಾರಾಷ್ಟ್ರಗಳಲ್ಲಿ ಬಂದು ನೆಲಸಿದ ನಾಗರು ಆಸಾಮದ ಕಾಡಿನವರೆಂದು ಹೇಳುವುದಕ್ಕೆ ಒಂದು ಸಂಗತಿಯು ಅಡ್ಡಬರುತ್ತದೆ. ಪಟ್ಟೆಗಳಿಂದ ಎಂದರೆ ಹಟ್ಟಿಕಾರರಿಂದ

ಪಟ್ಟಣ, ಹಟ್ಟಿಗಳು ತಲೆದೋರಿದಂತೆ ನಾಗರಿಂದ ನಗರಗಳು ಉಂಟಾದು ವೆಂದು ಬಲ್ಲವರು ಹೇಳುತ್ತಾರೆ. ನಗರದಿಂದ ನಾಗರಿಕತೆಯೆಂಬ ಮಾತು ಬಳಕೆಯಲ್ಲಿ ಬಂದಿದೆ. ನಗರಗಳ ನಾಗರಿಕತೆಯು ಆರಂಭದಲ್ಲಿ ಇಂದಿನ ದಕ್ಕಿಂತ ಬೇರೆಯಿರಬಹುದು; ಆದರೆ 'ನಾಗರಿಕ'ನೆಂಬುದು ಹಳ್ಳಿಗರಿಗಿಂತ ಸುಸಂಸ್ಕೃತನೆಂದು ಅರ್ಥವನ್ನು ಸೂಚಿಸುವುದರಿಂದ ಈ ನಗರಗಳ ನಿರ್ಮಾಣಕ್ಕೆ ಕಾರಣರು ಆಸಾಮುದ ನಾಗರಾಗಿರಬಹುದೆಂಬುದು ಒಪ್ಪಿಗೆಯಾಗದು.

ಕಂನಾಡಿನಲ್ಲಿ ಆಳಿದ ಸಿಂದರು ನಾಗವಂಶದವರೆಂದು ನಿಶ್ಚಿತವಾಗಿ ತಿಳಿದಿದೆ. ಈ ಸಿಂದರ ನೆನಹುದೋರುವ ಊರುಗಳು ವಿಜಾಪುರ, ಬೆಳಗಾವಿ, ಬಳ್ಳಾರಿ, ಮೈಸೂರು, ರಾಯಚೂರು ಮೊದಲಾದ ಕಂನಾಡಿನಲ್ಲಿ ಎಲ್ಲ ಭಾಗದಲ್ಲಿಯೂ ಇವೆ. ಸಿಂಧನೂರು, ಸಿಂದಿಗೆ, ಸಿಂದಘಟ್ಟ, ಸಿಂದೆಮುನವಳ್ಳಿ ಮುಂತಾದುವು ಇದಕ್ಕೆ ದೃಷ್ಟಾಂತ. ಬಾಗಿಲುಕೋಟೆ ತಾಲ್ಲೂಕಿನ ಭೈರನಮಟ್ಟಿಯ ಶಾಸನದಲ್ಲಿ ಪುಲಿಕಾಲಸಿಂದನೆಂಬ ಅರಸನ ವರ್ಣನೆಯಿದೆ. (ಕ್ರಿ. ಶ. ೯೯೦). ಪುಲಿಕಾಲ ಸಿಂದನು ನಾಗವಂಶದವನೆಂದೂ ಅವರ ಧ್ವಜದ ಮೇಲೆ ಹೆಡೆ ತೆಗೆದ ನಾಗರ ಚಿಹ್ನವಿದ್ದಿತೆಂದೂ ಆ ಶಾಸನದಿಂದ ಗೊತ್ತಾಗುತ್ತದೆ. (Ep. Ind. III) ಸಿಂಧೂ ತೀರದಿಂದ ಬಂದವರಾದುದರಿಂದ ಇವರಿಗೆ ಸಿಂದರೆಂಬ ಹೆಸರು ಬಂದಿದೆ.

ಪ್ರಾಗೈತಿಹಾಸಿಕ ಕಾಲದ ಸಿಂಧದ ಅವಶೇಷಗಳಿಗೆ ಹೋಲುವ ಬಳೆಯ ಚೂರು, ಪಾತ್ರೆಗಳ ತುಂಡು, ಮತ್ತು ಹರಳು, ಮಣಿಗಳು ಕಂನಾಡಿನಲ್ಲಿ ದೊರೆಯುತ್ತಿರುವುದರಿಂದ ಸಿಂಧದೊಡನೆ ಕಂನಾಡ ಸಂಬಂಧವು ಆ ಕಾಲದಲ್ಲಿಯೂ ಇದ್ದಿತೆಂದು ಈ ಮೊದಲು ಒಮ್ಮೆ ಸೂಚಿಸಿದೆ. ಸಿಂಧ–ಬಲೂಚಿಸ್ತಾನದ ನೆರೆಯಲ್ಲಿರುವ ಬ್ರಾಹೂಯಿ ಭಾಷೆಯು ಕಂನುಡಿಗೆ ಹತ್ತಿರದ್ದೆಂಬ ಜುಲೇಸ ಬ್ಲಾಚ್ ಎಂಬ ಫ್ರೆಂಚ ವಿದ್ವಾಂಸನ ಅಭಿಪ್ರಾಯವೂ ಈ ಮಾತಿಗೆ ಬೆಂಬಲವನ್ನೀಯುತ್ತಿದೆ. ವೇದದೊಳಗಿನ ಪತ್ತಿಗಳೂ ಯದು-ತುರ್ವರೂ ಕಂನಾಡವರೆಂಬ ವಿಚಾರವನ್ನು ಇದರೊಡನೆ ಲೆಕ್ಕಕ್ಕೆ ಹಿಡಿದರೆ ಸಿಂಧ ಕಂನಾಡುಗಳಲ್ಲಿ ನಿಕಟ ವ್ಯವಹಾರವು ಎಂದಿನಿಂದಲೂ ಇದ್ದಿತೆಂದು ಕಂಡಬರುವುದು.

ಸಿಂದರು, ಸಿಂಧೂ ತೀರದಿಂದ ಬಂದವರೆಂಬ ಮಾತು ಅವರ

ಮನೆತನದ ಹೆಸರಿನಿಂದಲೆ ತಿಳಿದು ಬರುವುದಾದರೂ ಸಿಂಧೂ ತೀರದ ಯಾವ ನಾಡಿನಿಂದ ಎಂಬ ಮಾತು ಸಂದಿಗ್ಧವಾಗಿಯೆ ಉಳಿಯುತ್ತದೆ. ಇವರು ಅಹಿಚ್ಛತ್ರದಿಂದ ಕಂನಾಡಿಗೆ ಬಂದಿರಬೇಕೆಂದು ಡಾ. ದೇವದತ್ತ ಬಂಡಾರಕರರ ಅಭಿಪ್ರಾಯ. ಇದು ಸರಿಯಿದ್ದರೂ ಇರಬಹುದು. ಆದರೆ ಅಹಿಚ್ಛತ್ರದ ನಿಶ್ಚಿತ ಸ್ಥಾನವನ್ನು ಕುರಿತು ಭಿನ್ನಾಭಿಪ್ರಾಯಗಳಿದ್ದುದು ಕಂಡುಬರುತ್ತದೆ. ಆದರೂ ಇದು ಸಿಂಧೂ ನದಿಯು ಹರಿವ ಹಿಮಾಲಯದ ಅಂಚಿನಲ್ಲಿರಬೇಕೆಂದು ಹೇಳಲಾಗುತ್ತದೆ.

ನಾಗರು ಕಂನಾಡಿನಲ್ಲಿ ಬಂದು ನೆಲಸಿದ ಬಳಿಕ ಇಲ್ಲಿಯ ಜನಗಳಲ್ಲಿ ಬೆರೆತು ಒಂದಾದರೆಂದು ತೋರುತ್ತದೆ. ನಾಗರ ಕನ್ಯೆಯರು ತುಂಬ ಚೆಲುವೆಯರೆಂದು ಪೂರ್ವಕಾಲದಲ್ಲಿ ಖ್ಯಾತಿಯಿದ್ದಿತು. ಕದಂಬ ರಾಜರು ನಾಗಕನ್ಯೆಯರನ್ನು ಮದುವೆಯಾದರು. ಸಿಂದರೊಡನೆ ಚಲುಕ್ಯರಾಜರ ಬೀಗತನವಿದ್ದುದು ತಿಳಿದುಬರುತ್ತದೆ. ಈಗ ಸಿಂದಗಿಯವರೆಂಬ ಕೆಲವು (ಸಿರಿವಂತರ) ಮನೆತನಗಳುಂಟು. ಅವರೆಲ್ಲ ಸಿಂದರ ಬಳಗವೆಂದೇ ನಿಶ್ಚಿತವಾಗಿ ಹೇಳಲಿಕ್ಕಾಗದೆ ಇದ್ದರೂ ಅವು ಐತಿಹಾಸಿಕ ಮಹತ್ವದ ಕುಳಗಳೆಂಬಲ್ಲಿ ಸಂದೇಹವಿಲ್ಲ.

ಬನವಾಸಿ ನಾಡಿನಲ್ಲಿ ನಾಗರಖಂಡದ ಭಾಗಕ್ಕೆ ಹತ್ತಿ ಸುಮಾರಾಗಿ ಹೈವೆ ಅಥವಾ ಹೈಗವೆಂಬ ಹೆಸರುಂಟು. ಅಲ್ಲಿಯ ಬ್ರಾಹ್ಮಣರಿಗೆ ಹವಿಕರೆಂದು ಕರೆವ ವಾಡಿಕೆಯಿದೆ. ಇವರನ್ನು ಕದಂಬ ಮಯೂರ ಶರ್ಮನು ಅಹಿಚ್ಛತ್ರದಿಂದ ತಂದನೆಂದು ಒಂದು ಕತೆಯಿದೆ. ಅಹಿಚ್ಛತ್ರದಿಂದ ಬಂದು ನೆಲಸಿದ ಈ ಜನರಿರುವ ಪ್ರದೇಶವೆಂದೇ ಇದಕ್ಕೆ (ಅಹಿವೆ?=) ಹೈವೆ ಎಂದು ಹೆಸರು ಬಂದಿರಬಹುದೆ?

ಕಂನಾಡಿನಲ್ಲಿ ಹವಿಕರದೊಂದೇ ಸ್ವತಂತ್ರ ಗುಂಪು ಇದ್ದಂತಿದೆ. ಇವರು ಅಹಿಚ್ಛತ್ರದಿಂದ ಬಂದುದನ್ನೂ ನಾಗರೂ ಅತ್ತಣವರೆ ಆಗಿರುವುದನ್ನೂ ನೋಡಿದರೆ ಗುಜರಾತಿನಲ್ಲಿರುವಂತೆ ಇವರೂ ನಾಗರ ಬ್ರಾಹ್ಮಣರಾಗಿರಬಹುದೆ? ಎಂಬ ಒಂದು ವಿಚಾರವು ತಲೆದೋರುತ್ತದೆ. ಆದರೆ ನಾಗರ ಬ್ರಾಹ್ಮಣರ ಮತ್ತು ಹವಿಕರ ಗೋತ್ರಸೂತ್ರಗಳ ವಿಚಾರವನ್ನೂ ಮಾಡಬೇಕಲ್ಲದೆ ಆಧುನಿಕ ಶಾಸ್ತ್ರೀಯ ಪದ್ಧತಿಯಿಂದ ರೂಪ ಆಕಾರಾದಿಗಳ

ಅಳತೆ (Anthropometrical measurments) ಮಾಡಿದ್ದಲ್ಲದೆ ಯಾವ ಕೊನೆಯ ನಿರ್ಣಯವನ್ನೂ ಹೇಳಲಿಕ್ಕಾಗುವುದಿಲ್ಲ.

ಮೈಸೂರ ಶಾಸನಗಳಲ್ಲಿ ಅಹಿಚ್ಛತ್ರಪುರ (ವಿಜಯಪುರ), ಅಹಿಚ್ಛತ್ರ ಅಗ್ರಹಾರ ಎಂಬ ಹೆಸರುಗಳು ಆಗಾಗ ಬಂದಿವೆ. ಆದುದರಿಂದ ಅಲ್ಲಿಂದ ಕಂನಾಡಿಗೆ ಬ್ರಾಹ್ಮಣರೂ ಬೇರೆ ಜನಗಳೂ ಬಂದ ಬಗೆಗೆ ಸಂದೇಹವಿಲ್ಲ.

ಕ್ರಿಸ್ತಾಬ್ದದ ಮುಂಚೆ ೩೦೦ ವರುಷಗಳ ಸುಮಾರಿಗೆ ಆಭೀರರೆಂಬ ಜನಗಳು ವಾಯುವ್ಯ ಕಣಿಗಳಿಂದ ಭಾರತದಲ್ಲಿ ನುಗ್ಗಿದರು. ಗುಜರಾತ ಮಹಾರಾಷ್ಟ್ರಗಳಲ್ಲಿ ಇವರ ಅಸ್ತಿತ್ವವನ್ನು ಈಗಲೂ ಕಾಣಬಹುದು. ಖಾನದೇಶದಲ್ಲಿ ಅಹಿರಾಣಿ ಎಂಬ ಒಂದು ಸಮ್ಮಿಶ್ರಭಾಷೆಯು ಉಂಟಾಗಿದೆ. ಅದು ಮರ್ಹಾಟಿಯಲ್ಲ; ಗುಜರಾತಿಯೆಂದು ಹೇಳುವುದಕ್ಕಾಗುವುದಿಲ್ಲ. ಕಂನಾಡಿನಲ್ಲಿ ಬಂದು ಇವರ ತಮ್ಮ ಸ್ವತಂತ್ರ ಅಸ್ತಿತ್ವವನ್ನು ಬಹು ತರವಾಗಿ ಕಳೆದುಕೊಂಡರು. ಅಹಿರಸಂಗ, ಅಹಿರವಾಡಗಳಂತಹ ಕೆಲವು ಎಡೆಗಳ ಹೆಸರುಗಳಿದ್ದು ಅವು ಆ ಜನಗಳ ನೆನಪನ್ನು ಈಗಲೂ ತಂದು ಕೊಡುತ್ತವೆ. ಧಾರವಾಡದ ಸಮೀಪದಲ್ಲಿ ದಂಡಿನ ಗೌಳಿಗಳೆಂಬ ಹೆಸರಿನ ಆಹಿರ ಜನದ ಒಂದು ತಂಡವಿದೆ.

ಹಳೆಯ ಶಾಸನಗಳಲ್ಲಿ ಆಹಿರರ ಹೆಸರು ಕಂನಾಡಿನಲ್ಲೂ ಕೇಳಬರುತ್ತದೆ. ಚಲುಕ್ಯಾದಿ ರಾಜರು ಆಭಿರರ ಹಗೆಗಳಾಗಿದ್ದುದು ಅವರ ಬಿರುದಾವಳಿಗಳಿಂದ ತಿಳಿಯುತ್ತದೆ. 'ಆಭೀರಕುಲಗಹನ ದಾವಾನಲ' ಮೊದಲಾದ ಬಿರುದಾವಳಿಗಳನ್ನು ಹೆಮ್ಮೆಯಿಂದ ಹೇಳಿಕೊಳ್ಳುತ್ತಿದ್ದರು. (Ep. Kar. VII. I, p. 20, 23). ಹೀಗಿದ್ದರೂ ಈ ನಾಡಿನಲ್ಲಿ ಸಣ್ಣಪುಟ್ಟ ಮಾಂಡಲಿಕರಾಗಿ, ಮನ್ನೆಯರಾಗಿ ಆಳಿದ ಆಭೀರರೂ ಇಲ್ಲದಿಲ್ಲ. 'ಆಹಿರ ಜೈತುಗಂ ಹಿರಿಯಬಳ್ಳಿಗಾವೆಯ ನೆಲವೀಡಿನೊಳ್ ಇರ್ದು (ರಾಜ್ಯಮಂ) ಪಾಲಿಸುತಿರ್ದಂ' ಎಂದು (ಕ್ರಿ. ಶ. ೧೨೧೫) ಸೊರಬ ತಾಲೂಕಿನ ಒಂದು ಶಾಸನದಲ್ಲಿದೆ.

## ಬ್ರಾಹ್ಮಣರ ಆಗಮನ

ಸಾಮಾನ್ಯವಾಗಿ ಬ್ರಾಹ್ಮಣರೆಲ್ಲ ದಕ್ಷಿಣಾಪಥಕ್ಕೆ ಹೊರಗಣಿಂದ ಬಂದವರೇ. ಈ ವರ್ಗದ ಪರಂಪರೆ ಮತ್ತು ನಡೆವಳಿಗಳಲ್ಲಿ ಆರ್ಯಾವರ್ತದ

ವಿಷಯಕ್ಕೆ ಕಂಡುಬರುವ ಆದರ ಆತ್ಮೀಯತೆಗಳು ದಕ್ಷಿಣಾಪದದ ವಿಷಯಕ್ಕೆ ಇಲ್ಲ. ಆರ್ಯಾವರ್ತದಿಂದ ಗಡಿಪಾರು ಮಾಡಿದ ಬಹಿಷ್ಕೃತರು ದಕ್ಷಿಣಾಪಥಕ್ಕೆ ಬರುವುದು ಅಂದಿನ ವಾಡಿಕೆ. ಇದು ಅಯಜ್ಞೀಯ ಭೂಮಿಯೆಂದು ಗ್ರಹಿಕೆಯಿದ್ದಿತು. ಅದರಿಂದ ಇದು ಅಪವಿತ್ರ, ಆರ್ಯರ ವಾಸಕ್ಕೆ ಅಯೋಗ್ಯವೆಂದೇ ಭಾವನೆ. ಕಾಶಿ, ಬಿಹಾರ, ಒರಿಸಾ, ಬಂಗಾಲಗಳ ವಿಷಯಕ್ಕೂ ಇದೇ ಬಗೆಯ ತಿಳುವಳಿಕೆಯಿದ್ದಿತು. 'ಅಸೂರ್ಯಾಃ ಪ್ರಾಚ್ಯಾಃ' (ಶತಪಥಬ್ರಾ. XIII. ೮. ೧. ೫). ಆರ್ಯಾವರ್ತದಿಂದ ಹೊರಗೆ ಹೋಗಿ ಬಂದವರು ಶುದ್ಧರಾಗುವುದಕ್ಕೆ ಪ್ರಾಯಶ್ಚಿತ್ತ ಪಡೆಯಬೇಕೆಂಬ ನಿರ್ಬಂಧವಿದ್ದಿತು.

ಹೀಗೆಲ್ಲ ಭಾವನೆಗಳಿದ್ದರೂ ಅನೇಕ ಬ್ರಾಹ್ಮಣರು ಈ ಭಾಗಗಳಿಗೆ ಬಂದು ಆಶ್ರಮ ಕಟ್ಟಿಕೊಂಡು ನೆಲಸುತ್ತಿದ್ದರು. ರಾಮನು ವನವಾಸಕ್ಕಾಗಿ ಪಂಚವಟಿಗೆ ಬಂದಾಗ ಗೋದಾತೀರದಲ್ಲಿ ಹಲಕೆಲವು ಋಷಿಗಳ ಆಶ್ರಮಗಳಿದ್ದುವೆಂದು ವರ್ಣನೆಯಿದೆ. ವೈದಿಕ ಋಷಿ ಅಗಸ್ತ್ಯನೇ ಮೊದಲು ದಕ್ಷಿಣಕ್ಕೆ ಬಂದ ಬ್ರಾಹ್ಮಣನೆಂದು ಒಂದು ಆಖ್ಯಾಯಿಕೆಯುಂಟು. ಈತನು ವಿದರ್ಭಕನ್ಯೆ ಲೋಪಾಮುದ್ರೆಯನ್ನು ಮದುವೆಯಾದನು. ಆದರೆ ಇನ್ನು ಕೆಲವು ವಿದ್ವಾಂಸರ ಅಭಿಪ್ರಾಯದಂತೆ ಕ್ರಿ. ಶ. ದ ೬೦೦ ವರುಷಗಳಿಗೆ ಮೊದಲು ದಕ್ಷಿಣಾಪಥವು ಆರ್ಯರಿಗೆ ತಿಳಿದಿರಲಿಲ್ಲ, ಎಂದು ಪಾಣಿನಿ ಮೊದಲಾದವರ ಗ್ರಂಥಗಳ ಆಧಾರದಿಂದ ಊಹಿಸುತ್ತಾರೆ.

ಅದೇನೆ ಇರಲಿ; ಮನಸಿಲ್ಲದ ಮನಸಿನವರಾಗಿ ಪರಿಸ್ಥಿತಿಯ ಒತ್ತಾಯದಿಂದ ಬ್ರಾಹ್ಮಣರು ದಕ್ಷಿಣಾಪಥಕ್ಕೆ ಬಂದುದು ನಿಜ. ಆರ್ಯಸಂಸ್ಕೃತಿಯ ಪ್ರಸಾರಕ್ಕೂ ಕೆಲರು ಬಂದಿರುವ ಸಂಭವವಿದೆ. ಮುಸಲ್ಮಾನರ ಕಾಟಕ್ಕಾಗಿ ಸರಸ್ವತೀ ತೀರದಿಂದ ಸಾರಸ್ವತ (ಬ್ರಾಹ್ಮಣ)ರೂ ಗೌಡದೇಶದಿಂದ ಗೌಡ (ಬ್ರಾಹ್ಮಣ)ರೂ ಬಂದರು. ಇದೇ ಮೇರೆ ಹಿಂದಕ್ಕೂ ಇತ್ತಕಡೆಗೆ ಬ್ರಾಹ್ಮಣರ ಹಲವು ಶಾಖೆಗಳು ಬಂದುವು

ನದಿ ಮತ್ತು ಪರ್ವತ ಪ್ರದೇಶಗಳಲ್ಲಿ ಬ್ರಾಹ್ಮರ ಮೊದಲಿನ ಬಿಡಾರಗಳು ಇದ್ದುವು. ಇವಕ್ಕೆಲ್ಲ ಸಂಸ್ಕೃತ ಹೆಸರುಗಳೇ ಮುಖ್ಯವಾಗಿ ಇರುವುದಕ್ಕೆ ಇದೂ ಒಂದು ಕಾರಣ. ಅಲ್ಲದೆ ಆ ಹೆಸರುಗಳಲ್ಲಿ ಅಗಸ್ತ್ಯ ಗೌತಮಾದಿಗಳ ನೆನಹು ಅಡಕವಾಗಿದೆ.

ಇವರ ತಪೋನಿಷ್ಠೆ, ಜ್ಞಾನಶಕ್ತಿಗಳಿಗಾಗಿ ರಾಜಾಶ್ರಯವು ದೊರೆಯ ಲಾರಂಭಿಸಿದ ಬಳಿಕ ಅಗ್ರಹಾರಗಳು ತಲೆದೋರಿದುವು. ಈ ಬಗೆಯಾಗಿ ಬ್ರಾಹ್ಮಣರು ಊರಲ್ಲಿ ಬಂದರು .ಹಾರುವರ ಹಳ್ಳಿ, ಬೀಡುಗಳು ತಲೆಯೆತ್ತಿ ದುವು. ಬ್ರಾಹ್ಮಣಪುರಿ, ಬಮ್ಮನಹಳ್ಳಿ, ಬ್ರಹ್ಮನಾಳಗಳು ಹುಟ್ಟಿದುವು.

ಅಗ್ರಹಾರವೆಂಬುದು ಕಂನಾಡಿನಲ್ಲಿಯೆ ಮೊದಲು ಅಸ್ತಿತ್ವದಲ್ಲಿ ಬಂದಿರ ಬೇಕೆಂದು ನನ್ನ ಎಣಿಕೆ. ಏಕೆಂದರೆ ಕೇವಲ ಸಂಸ್ಕೃತದಿಂದ ಇದರ ಅರ್ಥವು ಪೂರ್ಣವಾಗಿ ಹೊರಡುವುದಿಲ್ಲ. ಅಗ್ರ+ಹಾರ ಎಂಬ ಎರಡು ಪದ ಗಳು ಇದರಲ್ಲಿ ಇದ್ದುದರ ಬಗೆಗೆ ಭಿನ್ನಾಭಿಪ್ರಾಯವಿಲ್ಲ. ಆದರೆ ಅಗ್ರ ಮತ್ತು ಹಾರ ಎಂಬ ಪದಗಳಿಗೆ ಏನು ಅರ್ಥವೆಂಬುದೆ ಮುಖ್ಯ ಪ್ರಶ್ನೆ ಯಾಗಿದೆ. ಇದನ್ನು ಕುರಿತು 'ಅಗ್ರಂ ಬ್ರಾಹ್ಮಣಭೋಜನಂ ತದರ್ಥಂ ಹ್ರಿಯಂತೇ, ರಾಜಧನಾತ್ ಪ್ರಥಕ್ ಕ್ರಿಯಂತೇ ಕಿ ಕ್ಷೇತ್ರಾದಯಃ' ಎಂದು ಶ್ರೀ ನೀಲಕಂಠ ಭಟ್ಟರು ಬರೆಯುತ್ತಾರೆ; ವಾಚಸ್ಪತ್ಯಕೋಶದಲ್ಲಿ ಹೀಗಿದೆ: 'ಕ್ಷೇತ್ರೋತ್ಪನ್ನ ಶಸ್ಯಾದುಧೃತ್ಯ ಬ್ರಾಹ್ಮಣೋದ್ದೇಶೇನ ಸ್ಥಾಪ್ಯಂ ಧಾನ್ಯಾದಿ ಗುರುಕುಲಾದಾವೃತ್ತ ಬ್ರಹ್ಮಚಾರಿಣೇ ದೇಯಂ ಕ್ಷೇತ್ರಾದಿ ಗ್ರಾಮಭೇದಶ್ಚ;' 'ಅಗ್ರಂ ಪ್ರಥಮಂ ಹ್ರಿಯತೇ ಉತ್ಪನ್ನ ಶಸ್ಯಾದುಧೃತ್ಯ ಸ್ಥಾಪ್ಯತೇ;' 'ಅಗ್ರಂ ಹರತಿ';

ಆದರೆ, 'ಅಗ್ರಂ' ಇದಕ್ಕೆ ಬ್ರಾಹ್ಮಣಭೋಜನಂ ಎಂದು ಏಕೆ ಮತ್ತು ಹೇಗೆ ಅರ್ಥವಾಗುವುದೊ ತಿಳಿಯದು. ಅಗ್ರಹಾರಗಳು ಬ್ರಾಹ್ಮಣರಿಗೆ ಉಂಬಳಿ-ಉಂಬುವುದಕ್ಕೆ ಕೊಟ್ಟುವು ನಿಜ. ಆದರೆ ಭೋಜನವೆಂಬ ಅರ್ಥ ಕೊಡುವ ಪದವು ಅಲ್ಲಿ ಆವುದು? 'ಅಗ್ರಂ' ಎಂದರೆ ಮೊದಲು ಎಂದು ಅರ್ಥ ವಾಗುವುದು. ಬಳಿಕ 'ಹಾರ' ಎಂಬುದಕ್ಕೆ ಅರ್ಥವೇನು? (ಬ್ರಾಹ್ಮಣನು) 'ಅಗ್ರಂ' ಎಂದರೆ ಮೊದಲು (ಅಲ್ಲಿಯ ಬೆಳೆಯನ್ನು) ಹರತಿ ಒಯ್ಯುತ್ತಾನೆ; ಅಥವಾ ಅವನಿಂದ ಒಯ್ಯಲಾಗುತ್ತದೆ, (ಹ್ರಿಯತೇ) ಎಂದು ಅರ್ಥವೆ? ಇದರಿಂದ ಹಾರವೆಂಬುದು ಹೃ ಧಾತುವಿನಿಂದ ಬಂದುದೆಂದ ಹಾಗಾಯಿತು.

ಹಾಗಾದರೆ ಅಗ್ರಖೇಟ (ಅಗರ ಖೇಡ)ಕ್ಕೆ ಅರ್ಥವೇನು? 'ಅಗ್ರ' ಎಂದರೆ ಮೊದಲು ಎಂಬ ಅರ್ಥವಂತೂ ಇಲ್ಲಿ ಹೊಂದುವುದೇ ಇಲ್ಲ.'ಅಗ್ರ' ಎಂದರೆ (ಚಾತುರ್ವರ್ಣ್ಯದಲ್ಲಿ) ಮೊದಲು ಹುಟ್ಟಿದವ—ಬ್ರಾಹ್ಮಣ ಎಂದು

ಅರ್ಥ ಮಾಡಬಹುದು. ಹಾಗಾದಲ್ಲಿ ಅಗ್ರಖೇಟವೆಂದರೆ ಬ್ರಾಹ್ಮಣ(ರ) ಹಳ್ಳಿ ಎಂದು ಅರ್ಥವಾಗುವುದು. ಬ್ರಾಹ್ಮಣರ (ಭೋಜನಕ್ಕಾಗಿರುವ) ಹಳ್ಳಿ ಎಂದೂ ಅಧ್ಯಾಹೃತ ಪದವನ್ನು ಸ್ವೀಕರಿಸಿ ಸ್ಪಷ್ಟೀಕರಿಸಿಕೊಳ್ಳಬಹುದಾದಲ್ಲಿ 'ಅಗ್ರಂ' ಎಂದರೆ 'ಬ್ರಾಹ್ಮಣ ಭೋಜನಂ' ಎಂಬುದು ಇಲ್ಲಿ ಸರಿಹೋಗುವುದು. ಆದರೆ ಮೇಲೆ 'ಹಾರ' ಎಂದರೆ 'ಹರತಿ' ಅಥವಾ 'ಹ್ರಿಯತೇ' ಎಂದು ಹೇಳಿದಂತೆ ಖೇಟಕ್ಕೆ ಹೇಗೆ ಅರ್ಥ ಮಾಡುವುದು ಸಾಧ್ಯ?

'ಹಾರ' ಇದಕ್ಕೆ 'ಹ್ರಿಯತೆ' ಅಥವಾ 'ಹರತಿ' ಎಂದು ಸ್ಪಷ್ಟೀಕರಿಸುವುದಾದರೆ, 'ಪ್ರೇಹಾರ' 'ಶಿಲಾಹಾರ' ಎಂಬುವು ಪ್ರದೇಶದ ಹೆಸರೆಂದು ತಿಳಿದುಬರುತ್ತದೆ. (ಮೈಸೂರ ಶಾಸನ ಇಲಾಖೆಯ ವರದಿ ೧೯೩೫). ಶಾತವಾಹನಿ ಹಾರ ಎಂಬ ಹೆಸರೂ ಶಾಸನಗಳಲ್ಲಿ ದೊರೆತಿದೆ. (E I. XIV p. 155). ಇಲ್ಲಿ 'ಹಾರ' ಶಬ್ದಕ್ಕೆ ಏನು ನಿರುಕ್ತ? ನನ್ನ ತಿಳುವಳಿಕೆಯಂತೆ ಅಗ್ರಹಾರ, ಪ್ರೇಹಾರ, ಶಾತವಾಹನಿ ಹಾರ ಇಲ್ಲಿ ಹಾರ ಎಂಬುದು ಎಡೆಯನ್ನು ಹೇಳುವ ಶಬ್ದವಾಗಿದೆ. ಪಾಡಿ–ಪಾರಾ–ಹಾರಾ ಎಂಬೀ ಬಗೆಯಾಗಿ ಕಂನುಡಿಯಿಂದ ಇದರ ಹುಟ್ಟನ್ನು ಅರಿತುಕೊಳ್ಳಬಹುದಾಗಿದೆ. ಕಂನಾಡಿನಲ್ಲಿ ಎಡೆಗಳ ಹೆಸರಿನ ಕೊನೆಗೆ ಹಾರ ಎಂಬ ಪದವಿದ್ದುದನ್ನು ಕೋಲ್ಹಾರ, ಎಂಬ ಗ್ರಾಮಗಳಲ್ಲಿ ಮನಗಾಣಬಹುದು. ಅಗ್ರಹಾರ ಕೊಲ್ಹಾರ, ವೆಂಬುದಕ್ಕೆ ಕಂನುಡಿಯ ಪಾಡಿಯೆ ಮೂಲ. ಆದಕಾರಣ ಕೇವಲ ಸಂಸ್ಕೃತದಿಂದ ಇದರ ವ್ಯುತ್ಪತ್ತಿಯು ತಿಳಿಯಲಾರದು. ಅಗ್ರಹಾರ ಎಂಬುದು ಆರ್ಯರು ಹಟ್ಟಿಕಾರರ ನಾಡಿನಲ್ಲಿ ನೆಲಸಿ, ನಾಡಿನೊಡನೆ ಬೆರೆಯಲಾರಂಭಿಸಿದುದರ ಕುರುಹಾಗಿದೆ. ಸಂಸ್ಕೃತ ಮತ್ತು ಕಂನುಡಿಗಳ ಬೆರಕೆಯಿಂದ ಈ ಪದವು ಸಿದ್ಧವಾಗಿದೆ.

### ಬ್ರಾಹ್ಮಣರು ದೇಶಸ್ಥರಾಗಲಾರಂಭಿಸಿದುದು

ಮೊದಲು ಬ್ರಾಹ್ಮಣರಲ್ಲಿ ಗೋತ್ರಗಳಂತೆ ಗುಂಪುಗಳಾಗಿದ್ದುವೆಂದು ತೋರುತ್ತದೆ. ಗೋತ್ರವೆಂದರೆ ಒಂದು ಗೋಷ್ಠಿಯವರು ಒಂದು ಮತಕ್ಕೆ ಹೊಂದಿದವರು ಎಂದು ಕೆಲರ ಅಭಿಪ್ರಾಯವಿದೆ. ವಾಸಿಷ್ಠ ಗೋತ್ರದವರೆಂದರೆ ವಸಿಷ್ಠನ ಮತವನ್ನು ಅನುಸರಿಸುವವರು ಎಂದು ಅರ್ಥ. ಆದರೆ ಇನ್ನು ಕೆಲರು, ಆ ಮನೆತನದ ಮೂಲಪುರುಷನ ಹೆಸರೆ ಗೋತ್ರ

ವೆಂಬ ಅಭಿಪ್ರಾಯದವರಾಗಿದ್ದಾರೆ. ಇದರಲ್ಲಿ ಮೊದಲನೆಯ ಮತವೆ ಹೆಚ್ಚು ಸಮಂಜಸವೆಂದು ತೋರುತ್ತದೆ. ಏಕೆಂದರೆ ಗೋತ್ರ ಶಬ್ದದಲ್ಲಿ ವಂಶವೆಂಬುದಕ್ಕಿಂತಲೂ ಗೋಷ್ಠ, ಗೋಷ್ಠಿ ಎಂಬ ಧ್ವನಿಯೆ ನಿಶ್ಚಿತವಾಗಿದೆ.

ಗೋತ್ರಗಳಂತೆ ಇನ್ನೊಂದು ಬಗೆಯ ಪಂಗಡಗಳು ಮುಂದೆ ಬಂದುವು. ಅವು ವೇದ, ಶಾಖೆ, ಸೂತ್ರಗಳಿಂದಾದುವು. ಋಗ್ವೇದಿಗಳು, ಯಜುರ್ವೇದಿಗಳು, ಎಂಬಂತೆ ಕಾಣ್ವಶಾಖೆಯವರು, ಆಪಸ್ತಂಭರು, ಹಿರಣ್ಯಕೇಶಿಗಳು, ಬೌದ್ಧಾಯನರು ಎಂದು ಮುಂತಾದ ಹೆಸರಿನ ಗುಂಪುಗಳಿದ್ದುವು.

ಆದರೆ ಊರ ಅಡ್ಡಹೆಸರಿನ ಪರಂಪರೆ ಬ್ರಾಹ್ಮಣರಲ್ಲಿ ತೀರ ಹೊಸತು. ಅಗ್ರಹಾರಾದಿಗಳನ್ನು ಸ್ವೀಕರಿಸಿ ಅಲ್ಲಲ್ಲಿ ಬೇರೂರಿ ನಿಲ್ಲಲಾರಂಭಿಸಿದ ಬಳಿಕ ದೇಶವಿಭಾಗದಂತೆ ಬ್ರಾಹ್ಮಣರಲ್ಲೂ ಹೊಸ ಪಂಗಡಗಳು ತಲೆದೋರಿದುವು. ಮನೆತನಗಳಿಗೆ ಊರ ಹೆಸರಿನಿಂದ ಕರೆವ ವಾಡಿಕೆಯುಂಟಾಯಿತು.

ಕರ, ವಾಲಾ ಎಂದು ಮೊದಲಾಗಿ ಹಚ್ಚಿಕೊಳ್ಳದೆ ಕೇವಲ ಊರ ಹೆಸರಿನ (ಅಡ್ಡಹೆಸರಿನ) ಪದ್ಧತಿಯು ಮೊದಲು ಕಂನಾಡಿನಲ್ಲಿಯೆ ಆರಂಭವಾಗಿರಬೇಕೆಂದು ಡಾ. ದೇವದತ್ತ ಭಂಡಾರಕರರ ಅಭಿಪ್ರಾಯವಿದೆ. ೨ನೆಯ ಪುಲಿಕೇಶಿಯ ಒಂದು ದಾನಪತ್ರದಲ್ಲಿ (Ep. Ind. Vol. IV, p.73-74) ಹೀಗೆ ಒಂದು ಉಲ್ಲೇಖವು ಬಂದಿದೆ.

> ವಾಸಿಷ್ಠ ಗೋತ್ರಾಯ ತೈತ್ತಿರೀಯಾಯ ತಗರಾಧಿವಾಸಿನೇ, ಚತುರ್ವೇದಾಯೋಽಂಬರಖೇಡ ಕುಲನಾಮ ಧೇಯಾಯ ಜ್ಯೇಷ್ಠಶರ್ಮಣೇ........

ಈ ರೀತಿಯಿಂದ ಊರ ಹೆಸರಿನಿಂದ ಕುಲನಾಮವನ್ನು ಹೇಳುವ ವಾಡಿಕೆ ಇದಕ್ಕೂ ಮೊದಲು ಕಂಡುಬರುತ್ತಿದ್ದಿಲ್ಲ. ಆದುದರಿಂದ ಇದನ್ನು ಕುರಿತು ಡಾ. ಭಂಡಾರಕರರು ಬರೆಯುವುದೇನೆಂದರೆ:

This reminds me of the practice of the Kanarese Brahmins of adopting, as family names, the names of villages and towns, without the addition of any termination

such as 'kar', or 'wall', which is employed in Maharashtra or Gujarat which signifies '(originally) residing in'. This is highly important, for we can now definately say that this practice which is prevelent to this day in the Kanarese speaking districts can be traced back to the beginning of the 7th century A. D.

ಏಳನೆಯ ಶತಕದ ಸುಮಾರಿಗೆ ಈ ರೂಢಿಯು ಆರಂಭವಾಯಿತು. ಬ್ರಾಹ್ಮಣರಲ್ಲಿ ಊರುಗಳ ಹೆಸರಿನ ಗುಂಪುಗಳಾದುವು. ನಾಡಿನ ಬೇರೆ ಬೇರೆ ಭಾಗದ ಹೆಸರಿನಲ್ಲಿ ಗುಂಪುಗಳಾದುವು. ಶಿವಳ್ಳಿಯುವರು, ಹೈಗರು, ಒಳ ಒಕ್ಕಲು, ಮುಲುಕನಾಡು, ಕಮ್ಮೆ; ಕಮ್ಮೆಯಲ್ಲಿಯೆ ಮತ್ತೆ ಉಲೂಚಿ ಕಮ್ಮೆ, ಬೊಬ್ಬೂರು ಕಮ್ಮೆ; ಬಡಗರು, ತೆಂಗಲೆಯುವರು, ಕೋಟರು ಎಂದು ಮುಂತಾದ ಸಣ್ಣ ಸಣ್ಣ ನಾಡ ಪಂಗಡಗಳಲ್ಲದೆ ದೇಶಸ್ಥವೆಂಬ ದೊಡ್ಡ ಸಮೂಹವು ಉತ್ತರ ಕಂನಾಡಿನಲ್ಲಿದೆ. ಇದು ಹಳೆಯ ಬೃಹತ್ತ ಕರ್ಣಾಟವೆಂಬ ಹೆಸರಿನ ಇಂದಿನ ಮಹಾರಾಷ್ಟ್ರದ ವರೆಗೂ ಹಬ್ಬಿರುವುದು. ದೇಶದಲ್ಲಿ ನೆಲಸಿರುವವರು ದೇಶಸ್ಥರು, ಎಂದು ಅರ್ಥವಾದುದರಿಂದ ಈ ಬ್ರಾಹ್ಮಣರ ನೆಲಸಿದ ವಿಸ್ತಾರವು ಹಿಂದಿನ ಕಾಲದ 'ದೇಶ ವೆಂಬ ಹೆಸರಿನ ಪ್ರದೇಶವನ್ನು ಸೂಚಿಸುವುದು. ಅಲ್ಲದೆ ಕರ್ಹಾಟ ಬ್ರಾಹ್ಮಣರುಂಟು; ಕೊಂಕಣಸ್ಥ ಅಥವಾ ಚಿತ್ಪಾವನರುಂಟು.

ಕಾಶ್ಮಿರ–ಸರಸ್ವತೀರದಿಂದ ಸಾರಸ್ವತರೂ ಮತ್ತು ಸಹವಾಸಿಗಳೂ ಗೌಡದೇಶದಿಂದ ಗೌಡರೂ ಇಲ್ಲಿ ಬರುವ ಮೊದಲೆ ಕಂನಾಡಿನಲ್ಲಿ ನಾಡಿನ ಮೇಲಿಂದ ಬ್ರಾಹ್ಮಣರ ಪಂಗಡಗಳು ಆಗಿಬಿಟ್ಟಿರಲಿಕ್ಕೆ ಬೇಕು. ಆದುದರಿಂದಲೆ ಆವರಿಗೆ ಮೊದಲೆ ನೆಲೆಯಾಗಿದ್ದ ಇಲ್ಲಿಯುವರೊಡನೆ ಒಂದಾಗಲು ಹೊಸದಾಗಿ ಬಂದವರಾದುದರಿಂದ ತೊಂದರೆಯಾಯಿತು. ಹಲಕಾಲದಿಂದ ಇಲ್ಲಿ ಮೊದಲು ನೆಲಸಿದವರ ನಡೆವಳಿಗಳು ಇಲ್ಲಿಯುವರಂತೆ ಮಾರ್ಪಟ್ಟಿದ್ದುವು; ಉತ್ತರದಿಂದ ಬಂದವರ ರೂಢಿ ಸಂಪ್ರದಾಯಗಳು ಕೆಲವೊಂದು ಭಿನ್ನವಾಗಿರುವುದೂ, ಇಲ್ಲಿಯ ದೇಶಸ್ಥರು ಅವರಿಂದ ಸ್ವಲ್ಪ ದೂರವಾಗುವುದಕ್ಕೆ ಕಾರಣವಾಗಿರಬೇಕು. ಈ ಕಾರಣದಿಂದ ಬ್ರಾಹ್ಮಣರ ಈ ಪಂಗಡಗಳು

೧೨ನೆಯ ಶತಮಾನದ ಸುಮಾರಿಗೆ ಬಂದಿರಬಹುದೆಂದು ತೋರುತ್ತದೆ. ಚಾಲುಕ್ಯ ವಿಕ್ರಮಾಂಕ ದೇವನ ಓಲಗದ ವಿದ್ವಾಂಸನಾದ ಬಿಲ್ಹಣನು ಕಾಶ್ಮೀರದ ಪಂಡಿತನು. ೧೧–೧೨ನೆಯ ಶತಮಾನದಲ್ಲಿ ಮಲೆಯಾಳ ಪಂಡಿತರೂ ಕಂನಾಡಿನಲ್ಲಿ ಬಂದು ಶಿಷ್ಯಕೋಟಿಯಿಂದ ಸನ್ಮಾನಹೊಂದುತ್ತಿದ್ದರೆಂದು ಕೆಲವು ಶಾಸನಗಳ ಮೇಲಿಂದ ತಿಳಿದುಬರುತ್ತದೆ. ಗದುಗು ತಾಲೂಕಿನ ಎಲೆಯ ಪಸುಂಡಿ (ಅಸುಂಡಿ) ಗ್ರಾಮದ ಶಾಸನದಲ್ಲಿ ಇಂತಹ ಒಂದು ಉಲ್ಲೇಖವಿದೆ. ಅಣ್ಣಿಗೆರೆಯ ನಕರೇಶ್ವರ ದೇವಾಲಯದ ಮಲೆಯಾಳ ಪಂಡಿತರು ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಮೋನಾನುಷ್ಠಾನ ಪರಾಯಣರೆಂದು ಹೆಸರಾಗಿದ್ದರಂತೆ. ಇದರಂತೆ ದ್ರಾವಿಡ ಬ್ರಾಹ್ಮಣರೂ ಬಂದುದುಂಟು.

ರಾಜರಲ್ಲಿ ಆಶ್ರಯ ಹೊಂದಲು ನಾನಾದೇಶದ ಬ್ರಾಹ್ಮಣರು ಕಂನಾಡಿಗೆ ಬಂದಿರುವುದು ಸ್ವಾಭಾವಿಕವಾಗಿದೆ. ಶಾತವಾಹನ, ಕದಂಬ, ಗಂಗ, ಚಾಲುಕ್ಯ, ರಾಷ್ಟ್ರಕೂಟ, ಯಾದವ, ವಿಜಯನಗರ ಮೊದಲಾದ ಅರಸರ ಕಾಲದಲ್ಲಿ ಅನೇಕ ಶಾಸ್ತ್ರ, ಸಾಹಿತ್ಯ, ವಿದ್ಯೆಗಳಲ್ಲಿ ನಿಷ್ಣಾತರಾದ ಜನರು ಇಲ್ಲಿಗೆ ಹೊರನಾಡುಗಳಿಂದ ಬಂದಿರುವುದು ಸೋಜಿಗವಲ್ಲ. ಒಂದೊಂದು ಅಗ್ರಹಾರಾದಿಗಳಲ್ಲಿ ಸಾವಿರಾರು ಬ್ರಾಹ್ಮಣರಿದ್ದ ಉಲ್ಲೇಖಗಳೂ ದೊರೆಯುತ್ತವೆ.

## ಇನ್ನುಳಿದ ಕೆಲ ಜನ

ಅರ್ವಾಚೀನ ಕಾಲದಲ್ಲಿ ಇನ್ನೂ ಹಲವು ಜಾತಿಯ ಜನಗಳು ಕಂನಾಡಿಗೆ ಬಂದಿವೆ. ಅವರೆಲ್ಲರನ್ನೂ ಸೂಚಿಸುವ ಸ್ವತಂತ್ರ ಎಡೆಯ ಹೆಸರುಗಳು ಸಿಕ್ಕುವುದು ದುರ್ಲಭ. ಊರ ಓಣಿಕೇರಿಗಳ ಹೆಸರಿನಲ್ಲಿ ಅವು ಕೆಲವೆಡೆಗೆ ದೊರೆಯುತ್ತವೆ. ಆದರೂ ಮುಸಲ್ಮಾನರ ಹೆಸರಿನ ಊರುಗಳ ಸಂಖ್ಯೆಗೆ ಕೊರತೆಯಿಲ್ಲ. ಫಿರಂಗಿ ಪೇಟೆ, ಫ್ರೆಂಚರಾಕ್ ಎಂಬವು ಯುರೋಪೀಯರು ಬಂದು ನೆಲಸಿದ ಕುರುಹುಗಳು. ವ್ಹೈಟಫೀಲ್ಡ, ಬ್ರೌನಿಂಗಪೇಟೆ, ಫ್ರೇಸರ ಪೇಟೆಗಳಂತಹ ವೈಯಕ್ತಿಕ ಹೆಸರಿನ ಸ್ಮಾರಕಗಳ ಊರುಗಳೂ ಹಲಕೆಲವು ತಲೆದೋರಿವೆ.

## ೭. ಕುಡುವರು: ನಾಡವರು: ರಡ್ಡಿಗಳು

### ಕುಡುವರು ಯಾರು?

'ಪಟ್ಟಿ'–ಪಾಡಿಯು ನಮ್ಮ ನಾಡಿನ ಮೊದಲಿಗರ ಆರಂಭದ ಪಾಡು ಸೂಚಿಸುವ ಪದವಾಗಿರುವಂತೆ 'ಕುಡಿ' ಅಥವಾ 'ಕುಡು' ಎಂಬುದು ಅದರ ಮುಂದಿನ ಮಟ್ಟವನ್ನು ನಿರ್ದೇಶಿಸುವ ಶಬ್ದವಾಗಿದೆ. 'ಪಟ್ಟಿ' (ಹಟ್ಟಿ) ಯಲ್ಲಿ ದನಗಾರಿಕೆಯ ಪಾಡಿನ ಧ್ವನಿಯಿದ್ದರೆ, 'ಕುಡಿ' ಅಥವಾ 'ಕುಡು' ಎಂಬಲ್ಲಿ 'ಒಕ್ಕಲ'ತನದ ಆರಂಭವನ್ನು ಹೇಳುವ ಅರ್ಥವು ಅಡಕವಾಗಿದೆ. ಒಕ್ಕಲಿಕ್ಕು ಎಂದರೆ ಕಡಿ, ಕತ್ತರಿಸು; ಕುಟುಕಿ, ಕುಟ್ಟಿ, ತುಂಡರಿಸಿ, ಉಳಿಯಲಿಕ್ಕೂ ಬೆಳೆಯಲಿಕ್ಕೂ ಇಂಬನ್ನು ಮಾಡಿಕೊಂಡ ಸೂಚನೆಯು ಕುಡು ಅಥವಾ ಒಕ್ಕಲು ಎಂಬ ಮಾತಿನಲ್ಲಿ ದೊರೆಯುತ್ತಲಿದೆ. ಆದುದರಿಂದಲೆ ಕುಡುವ ಎಂದರೆ ಒಕ್ಕಲು; ಒಕ್ಕಲು ಎಂದರೆ ಕುಡುವ. ಕುಡುವರೆ ನಮ್ಮ ನಾಡಿನ 'ಕುಳಗಳು'. ಕುಟುಂಬಿ ಎಂಬ ಸಂಸ್ಕೃತ ರೂಪದ ಮೂಲವು ಕುಡು ಎಂಬುದರಲ್ಲಿದೆ. ಕುಣಬಿ, ಕುಳಬಿ ಎಂದು ಮರ್ಹಾಟಿಯಲ್ಲಿ ಒಕ್ಕಲರ ಹೆಸರು. ಗುಜರಾತಿಯಲ್ಲಿ ಇದುವೆ ಕಣಬಿ ಎಂದಾಗಿದೆ. 'ಕೃಷೀವಳಂ, ಕರ್ಷಕಂ ಕುಟುಂಬಿ ಎನಿಕ್ಕುಂ' ಎಂದು ಅಭಿಧಾನ ವಸ್ತುಕೋಶದಲ್ಲಿ ಹೇಳಿದೆ. ಆದಕಾರಣ ಕುಟುಂಬಿ ಎಂಬುದರ ಮೂಲ ರೂಪವು ಕುಡು–ಒಕ್ಕಲು ಎಂಬುದೇ ಆಗಿದೆ.

### ಕುಡುವರು ತಲೆದೋರಿದ ಬಗೆ

ಸಸ್ಯಾದಿಗಳಿಂದ ಆಹಾರವನ್ನು ಪಡೆದುಕೊಳ್ಳುವ ವಿಚಾರದಲ್ಲಿ ಪ್ರಗತಿಯಾದಂತೆ ಪಟ್ಟಿಕಾರರು ಹಲವರು ಅಲೆಯುವುದನ್ನು ತೊರೆದು ಕಾಡು ಕಡಿದು, ಅಲ್ಲಲ್ಲಿ ಒಕ್ಕಲಾಗಿ ನಿಲ್ಲಲಾರಂಭಿಸಿದರು. ಈ ಕಾಲದಲ್ಲಿ ಕಟ್ಟಿಕೊಂಡ ಬೀಡುಗಳೆ ಕುಡಿ(ಗುಡಿ)ಗಳು. 'ಪಟ್ಟಿ'ಯಂತೆ 'ಕುಡಿ'ಯೂ ನಮ್ಮ ನಾಡಿನ ಪ್ರಾಚೀನ ಇತಿಹಾಸವನ್ನು ಹೇಳುವ ಅತ್ಯಂತ ಮಹತ್ವದ ಪದವಾಗಿದೆ.

ಕುಡಿ (ಗುಡಿ-ಗುಡಿಸಲು) ವಾಸಕ್ಕೆ ಯೋಗ್ಯವಾದ ಪ್ರಾಥಮಿಕ ಸ್ಥಿತಿಯ ಗುಡಾರ–ಅದುವೆ ಬಿಡಾರ; ಇಲ್, ಕೋಣೆ, ಮನೆ ಎಂಬಿವೆ

ಮೊದಲಾದುವು ಕುಡಿ-ಗುಡಿಗಿಂತಲೂ ಮುಂದಿನ ಕಾಲದ ವಿಶೇಷ ಪ್ರಕಾರದ ಪ್ರಶಸ್ತವಾದ ಬಿಡಾರಗಳೆಂದು ಆ ಪದಗಳೆ ಹೇಳುತ್ತವೆ. ಪಟ್ಟಿ-ಪಾಡಿ ಎಂದರೆ ಪಟ್ಟುಕೊಂಡಿರುವ ಎಡೆ, ದನದ ಹಕ್ಕಿ ಎಂದು ಇಷ್ಟೆ ಒಮ್ಮೆ ಆರಂಭದಲ್ಲಿ ಅರ್ಥವಿದ್ದರೂ ಅದುವೆ ವಾಡಿ, ವಾಡಾ, ವಾಡೆ ಎಂಬ ರೂಪದಲ್ಲಿ ಕಂನಾಡ ಉತ್ತರ ಮೆರೆಯಲ್ಲಿಯೂ ಮಹಾರಾಷ್ಟ್ರದಲ್ಲೂ ವಿಶಾಲವಾದ ವಾಸಸ್ಥಾನ, ಮಹ(ಡಿ) ಮನೆ–ವಠಾರು ( ಪಟಾರಃ=ವಾಡಿ ) ಓಣಿ ಎಂಬರ್ಥದಲ್ಲಿ ರೂಢವಾಗಿದೆ. ಅದರಂತೆ ಗುಡಿಸಲೆಂಬಲ್ಲಿ ಪ್ರಾಥಮಿಕ ರೂಪದಲ್ಲಿ ಕಾಣಿಸಿಕೊಳ್ಳುವ ಕುಡಿಯೇ ಮುಂದೆ ಕಾಲಕ್ರಮದಲ್ಲಿ 'ಗುಡಿ' ಎಂಬಲ್ಲಿ (ದೇವಾಲಯದ) ಹೆಚ್ಚಿನ ಪ್ರಾಶಸ್ತ್ಯ, ಪಾವಿತ್ರ್ಯಗಳನ್ನು ಪಡೆದುದನ್ನು ಕಾಣಬಹುದು.

ನಮ್ಮ ನಾಡಿನ ಊರುಗಳಲ್ಲಿ ಪಾಡಿಯು ಅತಿ ಪುರಾತನದ್ದು. ಅದರ ತರುವಾಯದ್ದು ಕುಡಿ–ಗುಡಿ; ಆದರೆ ಪಾಡಿ ಮತ್ತು ಕುಡಿ ಎಂಬ ಎಲ್ಲ ಊರುಗಳೂ ಒಂದೇ ಕಾಲಕ್ಕೆ ತಲೆಯೆತ್ತಿದುವು, ಎಲ್ಲವೂ ಅಷ್ಟೇ ಪ್ರಾಚೀನವೆಂದು ಮಾತ್ರ ಭಾವಿಸಲಾಗದು.

ಕುಡಿ–ಕುಡು ಎಂಬುದರ ಕೋಡು ಎಂದರೆ ಪರ್ವತದ ಶಿಖರ, ಕೊಂಬು ಎಂಬರ್ಥದ ಊರುಗಳನ್ನು ಬಿಟ್ಟರೆ ಉಳಿದುವು–ಕುಡಿ, ಗುಡಿ, ಕೊಡು. ಗೊಡು, ಕೋಡು, ಗೋಡು ಎಂಬುವೆಲ್ಲವು ಒಂದೇ ಬಳಗದುವು ಎಂದು ಹೇಳಲು ಅಡ್ಡಿಯಿಲ್ಲ. ಇಂತಹ ಊರುಗಳು ನಮ್ಮ ನಾಡಿನ ಎಲ್ಲ ಭಾಗದಲ್ಲೂ ಇವೆ. ಕುಡಚಿ, ಗೊಡಚಿ, (ಪಟ್ಟಣ) ಕುಡಿ, (ಚಿಕ್ಕ ಮತ್ತು ಹಿರಿಯ) ಕೋಡಿ, ಗುಡಿ—ಗೇರಿ, —ಬಂಡಿ, —ಸಾಗರ, —ಊರ, —ಪಾಡಿ, ಮೊದಲಾದುವು ಇದಕ್ಕೆ ನಿದರ್ಶನ.

ಪಾಡಿಗಳು, ನಂದಗ್ರಾಮಗಳು, ಗೋಪಾಡಿಗಳು, ಕುರಿಗ್ರಾಮಗಳು ಮೊದಲಾದುವು ನಮ್ಮ ನಾಡಿಗರ ಹಟ್ಟಿಕಾರ–ದನಗಾರಿಕೆಯ ಸೂಚಕವಾಗಿರುವಂತೆ ಕುಡಿ, ಗುಡಿಗಳು ನಮ್ಮ ಕುಡು–ಒಕ್ಕಲರ ಆರಂಬವನ್ನು ಹೇಳುವ ಊರುಗಳಾಗಿವೆ. ಹಟ್ಟಿಕಾರರು ಒಕ್ಕಲರಾದ ಬಳಿಕ ನೇಗಿಲಯೋಗಿಗಳಾದ ಈ ಕುಡುವರಿಂದಲೇ ನಮ್ಮ ನಾಡಿನ ಮುಂದಿನ ಏಳ್ಗೆಗೆ ಆರಂಭವಾಯಿತು.

ಕುಡಿಯು ಬಳಿಕ ಪೊಲ, ಪೊಟಿಲುಗಳು ಬೆಳೆದುಬಂದುವು. ಪೊಳಲು ಗಳ ಪ್ರಾಚೀನತೆಗೆ ಮುದಿಪೊಳಲು=ಮುದುವೊಳಲು (ಮುಧೋಳ) ಎಂಬ ಊರುಗಳೇ ಸಾಕ್ಷಿ. ನಿಜಾಂ ಕಂನಾಡು, ಉತ್ತರ ಕಂನಾಡುಗಳಲ್ಲ ಕೂಡಿ ಮುದಿವೊಳಲುಗಳು ಮೂರು–ನಾಲ್ಕು ಇವೆ. ಪೊಲ (ಹೊಲ), ಪೊಳಲು (ಹೊಳಲು) ಗಳಂತೆ ತೋಟ, ಪಟ್ಟಿ, ಗದ್ದೆ, ಊರುಗಳೂ, ಇವೆಲ್ಲ ಕುಡಿಯ ಮುಂದಿನ ವಿಕಾಸದ ಎಡೆಗಳು. ಹೊಲ ಎಂಬುದರ ಮೂಲ ರೂಪವು ಪುಲ; ಪುಲ ಎಂದರೆ ಪುಲ್–ಹುಲ್ಲು ಬೆಳೆವ ಭೂಮಿ. ನೀರಿನ ಎಡೆಯ ಪ್ರದೇಶವೆಂದರ್ಥವಾಗುವುದು. ಪೊಳಲು ಎಂದರೂ ಹೀಗೆಯೆ; ಅದರಲ್ಲೂ ಔಚಿತ್ಯವುಂಟು. 'ಪೊಟಿಲ್' ಎಂದರೆ ತಮಿಳಿನಲ್ಲಿ ತೋಟ, ಒಸವೆಂದರ್ಥ ವಿದೆ.

ಕೆರೆ, ಕಟ್ಟೆ, ಕುಂಟೆ, ಗುಂಟೆ, ಕೊಳ, ಹೊಳೆ, ಹಳ್ಳ, ಕೆರೆ, ತೊರೆ, ಝರಿ, ಬಾವಿ, ಹೊಂಡ, ಮೊದಲಾದುವು, ಒಕ್ಕಲತನಕ್ಕೂ ಇರುವುದಕ್ಕೂ ಅನುಕೂಲವಾದ ಜಲಾಶಯಗಳ ಗುಂಟ ಊರುಗಳು ಹೇಗೆ ಬೆಳೆದುವೆಂಬು ದನ್ನು ತೋರಿಸುತ್ತವೆ. ಗುಡಿಗೆರೆ (ಕುಡಿಕೆರೆ) ಗುಡಿಗುಂಟೆ (ಕುಡಿಕುಂಟೆ), ಗುಡಿಸಾಗರಗಳು ಇದಕ್ಕೆ ನಿದರ್ಶನ. ಪಟ್ಟಿ ಎಂಬುದಕ್ಕೆ ತೋಟವೆಂಬರ್ಥವೂ ದೊರೆಕೊಂಡುದು ಈ ಕಾಲದಲ್ಲಿಯೆ. ಪೊಳಲು ಎಂಬುದೂ ಈ ಮಾತನ್ನು ಪುಷ್ಟೀಕರಿಸುತ್ತದೆ.

ಕುಡುವರ ಏಳ್ಗೆಯಾದಂತೆ ನಾಡಿನಲ್ಲಿ ಧಾನ್ಯಾದಿಗಳ ಸಮೃದ್ಧಿಯಾಗು ವುದು ಸಹಜ. ಬೆಳೆದ ಮೇಟಿಯ ಒಕ್ಕಲು ಕ್ರಮವಾಗಿ ವ್ಯಾಪಾರಕ್ಕೆ ಕೈ ಯಿಕ್ಕಿರುವುದು ಸ್ವಾಭಾವಿಕ. ಬಳಿಕ ಪಟ್ಟ (ಹಟ್ಟಿ) ಯು ಪೇಟೆಯಾಯಿತು. 'ಹಟ್ಟ' ಶಬ್ದಕ್ಕಿರುವ 'ಪೇಟೆ'ಯೆಂಬರ್ಥವು ಮನನೀಯವಾಗಿದೆ.

ಖೇಟ ಅಥವಾ ಖೇಡವೆಂಬ ಸಂಸ್ಕೃತ ಜನ್ಯ ಶಬ್ದದಲ್ಲೂ ಒಕ್ಕಲತನದ ಊರೆಂಬ ಧ್ವನಿಯಿದೆ. ಇದು ಮೂಲ ಸಂಸ್ಕೃತ ಪದವಲ್ಲ. ಪ್ರಾಕೃತದಿಂದ ಸಂಸ್ಕೃತದಲ್ಲೂ ದೇಶಭಾಷೆಗಳಲ್ಲೂ ಸೇರಿದೆ. ಕುಡಿ ಎಂದರೆ ಒಕ್ಕಲರ ಊರು, ಎಂಬಂತೆ ಖೇಡ ಅಥವಾ ಖೇಟವೆಂದರೂ ಅದೇ ಅರ್ಥವೆ ಇದೆ. ಖೇಟ ಅಥವಾ ಖೇಡವನ್ನು ಕ್ಷೇತ್ರ, ಖೇತಗಳೊಡನೆ ಹೋಲಿಸಿ ನೋಡ ಬಹುದು. ಖೇಡ ಧಾತುವಿಗೆ ಪ್ರಾಕೃತದಲ್ಲಿ ಕೃಷ್, ಒಕ್ಕಲತನ ಮಾಡು

ಎಂದರ್ಥವಿದೆ. ಆದಕಾರಣ ಖೇಡ (ಹಳ್ಳಿ) ಎಂಬ ನಾಮಪದವು ಖೇಡ (ಒಕ್ಕಲತನ ಮಾಡು) ಧಾತುವಿನಿಂದ ಬಂದಿತೆಂದು ಊಹಿಸಿದರೆ ತಪ್ಪಾಗಲಾರದು. ಮರ್ಹಾಟಿಯಲ್ಲಿ ಖೇಡೆಗಾವ ಎಂದು ಹಳ್ಳಿಗೆ ಹೆಸರು. ಖೇಟ, ಖೇಡಗಳಿಗೆ ಕೆಲವು ಕೋಶಗಳಲ್ಲಿ ಮಣ್ಣಿನಗೋಡೆಯ ಪ್ರಾಕಾರವಿದ್ದ ಪಟ್ಟಣ, ನದಿ ಅಥವಾ ಪರ್ವತದ ನೆರೆಯ ದೊಡ್ಡ ಊರು ಎಂಬ ಅರ್ಥ ಕೊಟ್ಟಿದೆ. ಆದರೆ ಇದು ಆರಂಭದ ಮೂಲಾರ್ಥವಲ್ಲ. ಮುಂದಿನ ಕಾಲದಲ್ಲಿ ಪ್ರಾಪ್ತವಾದ ವಿಶೇಷಾರ್ಥ. ಮೂಲದಲ್ಲಿ ಖೇಟವು ಕೃಷಿವಳರ ಊರೆಂದೇ ಅರ್ಥವುಳ್ಳದ್ದಾಗಿದೆ. ಈಗ ಕೆಲವು ಊರುಗಳ ಕೊನೆಗೆ ಖೇಟವೆಂಬಂತೆ ಶೇತವೆಂದಿರುವುದೂ ಇಲ್ಲಿ ವಿಚಾರಾರ್ಹವಾಗಿದೆ.

## ಕುಡುವರು ನಾಡವರಾದರು

ಇಂತೀ ಬಗೆಯಾಗಿ ಹಟ್ಟಿಕಾರರು ಅಲ್ಲಲ್ಲಿ ನಟ್ಟುಕೊಂಡು ನಾಟಿಕೊಂಡು ನೆಲೆಯಾದರು. ಆಗ ನಾಡುಗಳು ಉಂಟಾದುವು. ದೇಶವಾಚಕವಾಗಿ ಇದ್ದ ಪಾಡಿ, ಹಟ್ಟಿ ಎಂಬ ಪದಗಳನ್ನು ಹಿಂದಿಕ್ಕಿ ನಾಡು ಎಂಬುದು ಮುಂದು ಬರಲಾರಂಭಿಸಿತು. 'ಹೊಲ', 'ಹೊಳಲಿನಂತೆಯೆ' ನಾಡು ಇದರ ಮೂಲವೂ ಒಕ್ಕಲತನದಲ್ಲಿಯೆ ಇದೆ. ಊರು, ವಾಸಸ್ಥಾನವೆಂದಿದ್ದ ಮೊದಲಿನ ಅರ್ಥವು ಬಳಿಕ ವಿಸ್ತೃತವಾಗಿ ಪ್ರದೇಶವೆಂದು ಬದಲಾಯಿತು. ಪಾಡಿಯ ಜನಗಳು ಪಟ್ಟಿ(ಪತ್ತಿ)ಗಳು ಎನೆಸಿದಂತೆ ನಾಡಿನಜನಗಳು ನಾಡವ (ನಾಟ್ಟುವ)ರು ಎಂದು ಕರೆಯಲ್ಪಟ್ಟರು. ಪತ್ತಿಗಳ ಉಲ್ಲೇಖವು ಯಜುರ್ವೇದದಲ್ಲಿ ದೊರೆತರೆ, ಮನುಸ್ಮೃತಿಯಲ್ಲಿ ನಟ (ನಾಡವ)ರ ಹೆಸರು ಸಿಕ್ಕುತ್ತದೆ. (ಮನು. ೧೦. ೨೨). ಆದುದರಿಂದ ಮನುಸ್ಮೃತಿಯ ಕಾಲದ ಸುಮಾರಿಗೆ ನಮ್ಮ ನಾಡುಗಳು ತಲೆಯೆತ್ತಿಕೊಂಡಿದ್ದುವೆಂದು ಊಹಿಸಬಹುದಾಗಿದೆ. ಮನುಸ್ಮೃತಿಯ ರಚನಾ ಕಾಲವು ಮಹಾಮಹೋಪಾಧ್ಯಾಯ ಕಾಣೆ ಪಾಂಡುರಂಗರಾಯರ ಅಭಿಪ್ರಾಯದಂತೆ ಕ್ರಿ. ಶ. ದ ಮೊದಲು ೨೦೦ ರಿಂದ ಕ್ರಿ. ಶ. ದ ತರುವಾಯ ೨೦೦ ವರೆಗೆ ಇದೆ. ಆದಕಾರಣ ಕ್ರಿಸ್ತಾಬ್ದದ ಆರಂಭದ ಸುಮಾರಿಗೆ ಕಂನಾಡ ಮೊದಲಿಗರು ಹಟ್ಟಿಕಾರಿಕೆಯಿಂದ ಕುಡುವರು, ನಾಡವರಾಗಿ ಬಾಳುತ್ತಿದ್ದರೆಂದು ಗೊತ್ತುಪಡಿಸಬಹುದಾಗಿದೆ.

ಪಾಡು (ಬಾಡು), ಕುಡು ಮತ್ತು ನಾಡು ಎಂಬಿವು ನಮ್ಮ ನಾಡವರ ಬಾಳಿನ ಬೆಳವಿಯ ಮೂರು ಮಹತ್ವದ ಘಟ್ಟಗಳಾಗಿವೆ. ಆರಂಭದಲ್ಲಿ ಪಾಡಿ, ಕುಡಿ, ಊರು ಅಥವಾ ನಾಡು ಎಂದು ಮುಂತಾಗಿ ಬರಿ ಈ ಸ್ಥಳ ವಾಚಕಗಳೇ ತಲೆದೋರಿರಬೇಕು. ಆದರೆ ಇಂತಹವು ಅಲ್ಲಲ್ಲಿ ಹಲವು ಬೆಳೆದುಕೊಂಡು ಬಂದಂತೆ ಇವುಗಳನ್ನು ವಿಂಗಡಿಸಿ ತೋರುವ ಒಂದು ವಿಶೇಷ ಪದದ ಅವಶ್ಯಕತೆಯು ಉಂಟಾಗಿರುವುದು ಸಹಜ. ಆಗ ಅವುಗಳ ಮೊದಲು, ಇಂತಹ ಪಾಡಿ, ಇಂತಹ ಕುಡಿ, ಇಂತಹ ನಾಡು ಎಂದು ಸೂಚಿಸುವ ವಿಶೇಷ ಪದವೊಂದು ಸೇರಿಕೊಂಡಿತು. ಆದಕಾರಣ ಬರಿ ಪಾಡಿ, ಪಟ್ಟಿ (ಹಟ್ಟಿ) ಕುಡಿ(ಚಿ), ನಾಡು ಎಂದಿರುವ ಎಡೆಗಳು ಉಳಿದುವುಗಳಿಗಿಂತ ಹೆಚ್ಚು ಪುರಾತನವಾಗಿರಬೇಕೆಂದು ನನ್ನ ತಿಳುವಳಿಕೆ. ಈ ದೃಷ್ಟಿಯಿಂದ ಕುಡಿಚಿಯಲ್ಲಿ ಪುರಾತನದ ಕುರುಹುಗಳು ಈ ವರೆಗೆ ಏನೂ ಕಾಣಿಸಿಕೊಂಡಿಲ್ಲವಾದರೂ ಗೊಡಚಿಯಲ್ಲಿ ಏನೊ ಸ್ವಲ್ಪ ಪ್ರಾಚೀನತೆಯು ಅವಶೇಷಗಳಿವೆ. ಇದು ಒಂದು ಪ್ರಾಚೀನ ಕ್ಷೇತ್ರಸ್ಥಾನವಾಗಿದೆ. ಆದರೆ ಇವೆಲ್ಲಕ್ಕಿಂತ ಹಟ್ಟಿ (ನಿಜಾಂ) ಯಲ್ಲಿ ಈ ಮೊದಲು ಹೇಳಿರುವಂತೆ, ಇರುವ ಹೊನ್ನಗಣಿಗಳು ಭರತಖಂಡಲ್ಲಿಯೇ ಅತಿ ಪುರಾತನದುವೆಂದು ಸಂಶೋಧಕರು ನಿರ್ಣಯಿಸಿದ್ದಾರೆ.

ಒಕ್ಕಲ(ಕುಡುವ)ರು ನಾಡವರು ಬೇರೆ ಬೇರೆಯಾಗಿ ಬೆಳೆದುಕೊಂಡು ಅವರಲ್ಲಿ ಹತ್ತುಗೆಯಿಲ್ಲವೆನಿಸುವಷ್ಟು ಇಂದು ದೂರವಾಗಿದ್ದಾರೆ. ಆದರೂ ಒಕ್ಕಲುತನವು ಇವರಿಗೆ ದೂರವಾಗಿಲ್ಲ. 'ಒಕ್ಕಲ್ಮೆ' One of the Cultivating Class called Bants; a Bant ಎಂದು ತುಳು ಕೋಶದಲ್ಲಿದೆ. ಇದು ಗಮನಾರ್ಹವಾದ ಸಂಗತಿ. ತಮಿಳಿನಲ್ಲಿ ನಾಟ್ಟವನ್ ಎಂದರೆ ಒಕ್ಕಲ, ಕುಡುವನೆಂದು ಅರ್ಥವಿದೆ.

## ನಾಡವರು ಯಾರು?

ಕರ್ಣಾಟವೆಂದು ಸಂಸ್ಕೃತದಲ್ಲಿ ರೂಢವಾಗಿರುವ ಮಾತು ಮೂಲದಲ್ಲಿ ಸಂಸ್ಕೃತವಾಗಿರಲಾರದೆಂದು ಕಾಲ್ಡವೆಲ್ಲ ಪ್ರಭೃತಿಗಳು ಊಹಿಸಿ ಹೇಳಿದರು. ಆ ಊಹೆಗೆ ಇಂದು ಶಾಸನಾದಿಗಳ ಆಧಾರವೂ ದೊರೆತಿದೆ. 'ಕಂನಾಡು' ಎಂಬ ಪದವನ್ನು ಸಂಸ್ಕೃತಕ್ಕೆ ತಿರುಗಿಸಿಕೊಂಡಾಗ ಅದು

'ಕರ್ಣಾಟ' ವಾಗಿದೆಯೆಂದು ತಜ್ಞರು ಈಗ ನಿರ್ಧರಿಸಿದ್ದಾರೆ. 'ಕಂನಾಡು' ಎಂಬ ಉಲ್ಲೇಖವಿರುವ ಹಲವು ಶಾಸನಗಳು ಕರ್ನೂಲ ಜಿಲ್ಹೆಯಲ್ಲಿ ದೊರೆತಿವೆ. ತಮಿಳ ಶಾಸನಗಳಲ್ಲಿಯೂ, ಸಾಹಿತ್ಯದಲ್ಲಿಯೂ ಈ ಪದವು ಹಲವೆಡೆಗಳಲ್ಲಿ ಬಂದಿದೆ. ಅಲ್ಲದೆ 'ಕನ್ನಡ' ವೆಂದು ಬಳಿಕೆಯಲ್ಲಿರುವ ಶಬ್ದದ ಮೂಲರೂಪವು ಕಂನಾಡು ಎಂದೇ ಇದೆ. ಇದನ್ನು ಕುರಿತು ಬಲ್ಲಿದರಲ್ಲಿ ಒಮ್ಮತವಿದೆ.

ರೂಢಿಯ ಒತ್ತಾಯಕ್ಕೆ ಸೋತುದರಿಂದ 'ಕನ್ನಡ' ವೆಂಬ ಅಶುದ್ಧ ಪದವು ಇಂದು ನಮ್ಮ ನಾಲಗೆಯ ಮೇಲೆ ಕುಣಿಯುತ್ತಿದ್ದರೂ ಅದರ ನಿಜವಾದ ರೂಪವು 'ಕಂನಾಡು' ಎಂಬಲ್ಲಿ ಸಂದೇಹಕ್ಕೆ ಎಡೆಯೆ ಇಲ್ಲ. ಕಂನಾಡು ಎಂಬುದು ಒಂದು ಕೂಡು-ನುಡಿ. ಇದರಲ್ಲಿ ಎರಡು ಪದಗಳಿವೆ. 'ಕಂ' ಮತ್ತು 'ನಾಡು' ಎಂದು. 'ಕಂ' ಎಂಬಲ್ಲಿರುವ ಅನುಸ್ವಾರವನ್ನು ಕನ್ ಅಥವಾ ಕಣ್ ಎಂದು ಎರಡು ಬಗೆಯಾಗಿಯೂ ಹೇಳಲು ಅವಕಾಶವಿದೆ. ಆದಕಾರಣ ಇದನ್ನು ಕನ್ ನಾಡು ಅಥವಾ ಕಣ್ ನಾಡು ಎಂದು ಕರೆಯಬಹುದಾಗಿದೆ.

'ಕನ್' ಅಥವಾ 'ಕಣ್' ಎಂದರೆ, ಏನೆಂಬುದನ್ನು ನಿರ್ಧರಿಸಲು ಇಲ್ಲದ ಯಾವ ವಾದದಲ್ಲಿ ಸೇರುವ ಕಾರಣವೆ ಇಲ್ಲ. ಏಕೆಂದರೆ ಈ ಹೆಸರಿನ ಸ್ಥಳಗಳಲ್ಲಿರುವ ಪೂರ್ವಪದವು ಜನಾಂಗವಾಚಕವಲ್ಲದೆ ಅದಕ್ಕೆ ಬೇರೆ ಅರ್ಥವೆ ಇಲ್ಲ. ಈ 'ಕನ್' ಅಥವಾ 'ಕಣ್' ಎಂಬ 'ನಾಡು' ಇರುವಂತೆ ನೂರಾರು ಊರುಗಳು ಇವೆ. 'ಕನ್' ಅಥವಾ 'ಕಣ್' ವೆಂದು ಒಂದು ಜನದ ಹೆಸರಾಗಿದೆ. ಈ ಹೆಸರಿನ ಜನಗಳೂ ಸಿಕ್ಕುತ್ತಾರೆ. 'ಕನ್' ಜನಗಳಂತೆ ಕಮ್ಮರೆಂಬ ಜನಗಳು ಉಂಟು.

ಆದರೆ ನಮ್ಮ ನಾಡವರು ತಮ್ಮ ಪೂರ್ವಪರಂಪರೆಗಳನ್ನು ಸಂಪೂರ್ಣವಾಗಿ ದುರ್ಲಕ್ಷಿಸಿದುದರಿಂದ ಅಥವಾ ಮರೆತುಬಿಟ್ಟುದರಿಂದ ಅವರಿಗೆ ತಾವು ಯಾರು ? ತಮ್ಮ ಮೊದಲಿಗರ ಹೆಸರೇನು? ತಮ್ಮ ನಾಡಿನ ವಿಸ್ತಾರವು ಎಷ್ಟಿದ್ದಿತು? ಎಂಬಿವೆ ಮೊದಲಾದ ಯಾವ ಸಂಗತಿಗಳ ಅರಿವೂ ಸ್ಪಷ್ಟವಾಗಿ ಉಳಿಯಲಿಲ್ಲ. 'ಕನ್ನಡ' ವೆಂಬುದು ಭಾಷೆಯ ಹೆಸರೊ ದೇಶದ ಹೆಸರೊ ಮೂಲದಲ್ಲಿ, ಎಂಬುದು ನಿನ್ನೆ ಮೊನ್ನೆಯ ವರೆಗೆ ಕಂನಾಡ ಬಲ್ಲಿದರಿಗೂ

ಗೊತ್ತಿದ್ದಿಲ್ಲ! ತಪ್ಪನ್ನೆ ಒಪ್ಪವೆಂದು ಸಾಧಿಸುವ ಪ್ರಯತ್ನಗಳೂ ನಡೆದಿವೆ! ತಪ್ಪು ಪದಪ್ರಯೋಗಗಳಿಂದ ತಿಳುವಳಿಕೆ ಕಡಿಮೆಯಾಗುತ್ತದೆ. ನಾಡಿನಲ್ಲಿ ಬುದ್ಧಿಮಾಂದ್ಯವು ನೆಲೆಗೊಳ್ಳುತ್ತದೆ. ಹಟ್ಟಿಕಾರವೆಂಬುದನ್ನು ಹಟಗಾರವೆಂದು ಬಳಸುವುದರಿಂದ ಕರ್ಣಾಟ–ಮಹಾರಾಷ್ಟ್ರಗಳಲ್ಲಿ ಯಾರಿಗೂ ಈ ವರೆಗೆ ಈ ಪದದ ಅರ್ಥವಿಶೇಷವೇ ತಿಳಿಯದೆ ಹೋಯಿತು. ನಮ್ಮ ನಾಡಿನ ಅಷ್ಟೊಂದು ಇತಿಹಾಸವು ಕಗ್ಗತ್ತಲೆಯಲ್ಲಿ ಉಳಿಯಿತು.'ಕಂನಡ' 'ಕರ್ಣಾಟ'ವೆಂಬುದರಿಂದಲೂ ಇದೇ ಹಾಡು. ನಮ್ಮ ನಾಡ ಮೊದಲಿಗರ ಕತೆಯೆ ಮುಗ್ಗಿಹೋಗಿದೆ. ಕಂನಾಡು ಎನ್ನುವುದರಿಂದ ಇದು ಕನ್ ಅಥವಾ ಕಣ್ ಎಂಬ ಜನದ ನಾಡೆಂಬ ಮಾತು ಸ್ಪಷ್ಟವಾಗಿ ಹೊಳೆಯುತ್ತದೆ. ಈ ತಿಳುವಳಿಕೆ, ಈ ವಿಚಾರದ ಬೆಳಕು ಬೇಕಾಗಿದ್ದರೆ ಕಂನಡ, ಕರ್ಣಾಟವೆಂಬುದಕ್ಕಿಂತಲೂ 'ಕಂನಾಡು' ಎಂದು ಬಳಸುವುದೇ ಲೇಸಲ್ಲವೆ ?

'ಕಂನ್'ರ ಹೆಸರಿನ ಊರುಗಳು ದಕ್ಷಿಣಾಪಥದಲ್ಲಿ ಎಲ್ಲೆಡೆಗೂ ಹರಡಿವೆ. ಅದರಲ್ಲೂ ಇವು ವಿಂಧ್ಯ ನೀಲಗಿರಿಯ ನಡುವಣ ನಾಡಿನಲ್ಲಿ ವಿಶೇಷವಾಗಿವೆ. 'ಕಂನ್'ರೊಡನೆ ಕಮ್ಮರ ಕೆಲವು ಊರುಗಳೂ ಕಮ್ಮಗಾವ (ಖಾಮಗಾವ); ಕಮ್ಮಸಾಂದ್ರ; ಕಮ್ಮೂರು, ಕಮ್ಮವಾರಿಪಲ್ಲೆ ಇಂತಹವು ಕೆಲವು ಅಲ್ಲಿ ಇಲ್ಲಿ ದೊರೆಯುತ್ತವೆ.

**'ಕಂನ್‌ರ' ಊರುಗಳು:**

ಖಾನದೇಶ: ಈ ಹೆಸರೆ ಮೂಲದಲ್ಲಿ 'ಕಂನ್'ದೇಶವೆಂದಿದೆಯೆಂಬುದನ್ನು 'ಕಣ್ಮರೆಯಾದ ಕಂನಡ' ಮತ್ತು 'ಕಂನಡದ ನೆಲೆ' ಗಳಲ್ಲಿ ವಿವರಿಸಿದ್ದಾಗಿದೆ. ಅಲ್ಲಿ ದೊರೆವ ಈ ಹೆಸರಿನ ಹಲವು ಊರುಗಳು ಮೇಲಣ ನಿರ್ಣಯವನ್ನು ದೃಢಪಡಿಸುತ್ತವೆ.

ಕಾನ್ಹೇರಿ, ಕಾನ್ಹೇರೆ; ಕಣ್ಹೇರವಾಡ; ಕನ್ಹೇರವಾಡಿ; ಖಾನಾಪೂರ (ಕನ್ನಪುರ); ಕನ್ಹಾಳೆ; ಕಾನರಖೇಡೆ; ಕಾನ್ಹೆಗಾವ; ಕನಗಾವ; ಖಾನಗಾವ; ಕಾನಡಿ, ಕನದ್ಲಿ.

ನಾಸೀಕ ಜಿಲ್ಹಾ : ಕಾನಡಗಾವ, ಕಾನ್ಹೇರವಾಡಿ;

ಪುಣೆ ಜಿಲ್ಹಾ: ಕನೆಗಾಂವ; ಕಾನ್ಹೇರಿ; ಖಾನಾಪೂರ (ಕನ್ನಪುರ); ಕನ್ಹೇಶ್ವರ, ಕನ್ಹೇವಾಡಿ; ಕನ್ಹೆ; ಕನ್ಹೋರ;

ರತ್ನಾಗಿರಿ ಜಿಲ್ಹಾ: ಕನ್ಹೆ; ಕಾನೇರಿ; ಖನವಳಿ (ಕನ್ನವಳ್ಳಿ); ಖನವಲೆ (ಕನ್ನವಳ್ಳಿ);

ಠಾಣೆ ಜಿಲ್ಹಾ: ಕಾನ್ಹೇರಿ; ಕನಕೂರ (ಕನ್ನೂರ); ಕನಹೋಳ- (ಕನ್ನಹಳ್ಳಿ ಅಥವಾ ಕನ್ನಹಾಳ), ಕನಹರೆ;

ಸಾತಾರಾ ಜಿಲ್ಹಾ: ಖಾನಾಪೂರ ೨; ಕನ್ಹರವಾಡಿ; ಕನ್ಹೇರವಾಡಿ; ಕನ್ಹೇರ; ಕಾನ್ಹೇರ; ಕನ್ಹವಾಡಿ; ಕನೂರ; ಕರ್ಣ ವಾಡಿ (ಕಣ್ಣವಾಡಿ); ಕನೆಗಾವ;

ಕೊಲ್ಹಾಪೂರ ಸಂಸ್ಥಾನ: ಕನವಾಡ; ಕಣೇರಿ ೨, ಕಣ್ಣೇರಿ ೨;

ಸಾಂಗ್ಲಿ ಸಂಸ್ಥಾನ: ಕಾನವಾಡಿ; ಖನಗಾವ ೨;

ಮಿರಜಿ ಸಂಸ್ಥಾನ: ಕಾನಡವಾಡಿ.

ಸೊಲ್ಲಾಪುರ ಜಿಲ್ಹಾ: ಕನ್ಹೆರಗಾವ; ಕನ್ಹಪುರಿ. ಖಾನಾಪೂರ ೨; ಕನ್ಹರವಾಡಿ; ಕನ್ಹೇರಖೇಡೆ;

ವಿಜಾಪೂರ ಜಿಲ್ಹೆ: ಖಾನಾಪೂರ ೩; ಖಾನಕೇರಿ (ಕನ್ನಕೇರಿ) ಕನ್ನಾಳ ೨; ಕನಮುಡಿ; ಕನ್ನೊಳ್ಳಿ; ಕನ್ನಡ; ಕನ್ನಡಗಿ (ಕೊನೆಯವೆರಡೂ ಹಳೆಯ ಶಾಸನ ಗಳಲ್ಲಿ ದೊರೆಯುತ್ತವೆ). ಕನ್ನಡಿಗೆಯ ಇಂದಿನ ಹೆಸರು ಬಾಬಾನಗರ.

ಬೆಳಗಾವಿ: ಕಣಬರಿಗೆ ಖಾನಾಪೂರ ೪; ಕಸದಿ; ಕನೂರ ೨; ಖನ ಗಾವಿ (ಕನ್ನಗ್ರಾಮ); ಖನಹಟ್ಟಿ (ಕನ್ನಹಟ್ಟಿ);

ಧಾರವಾಡ ಜಿಲ್ಹಾ: ಖಾನಾಪೂರ ೩; ಕನ್ನೇಶ್ವರ; ಕನವಳ್ಳಿ; ಖನ್ನೂರ; ಹಿರೇಕಣಗಿ; ಚಿಕ್ಕ ಕಣಗಿ.

ನಿಜಾಂ ಇಲಾಖೆ- ಬೀದರ ಜಿಲ್ಹಾ: ಕನ್ಹಳ್ಳಿ; ಖಾನಾಪೂರ ೨; ಕನ್‌ಸಟವಾಡಿ;

ನಿಜಾಮಾಬಾದ (ಪ್ರಾಚೀನ ಇಂದೂರ) ಜಿಲ್ಹೆ: ಕನ್‌ಚಲರ್; ಕನ್ನಾಪೂರ ೨; ಕನ್‌ಕಲ್ಲ;

ಔರಂಗಾಬಾದ ಜಿಲ್ಹೆ: ಕನ್ನಡ (ಊರು ಮತ್ತು ತಾಲ್ಲೂಕು).

ಪರಭಣಿ ಜಿಲ್ಹೆ: ಕಾನಪೂರ, ಕಾನ್ಹೋಳ; ಕನ್ಹೇರಗಾವ; ಕಾನ್ಹಡ ಖೇಡ; ಕಾನಡಿ; ಕರ್ಣಹೋಲ್, ಕಾನ್ಹೆ; ಕಾನ್ಹೆಗಾವ.

ಬೀಡ ಜಿಲ್ಹಾ: ಕಾನಡಿ ೨; ಕನ್ಹೇರವಾಡಿ; ಖಾನಾಪೂರ ೨; ಕಾನಾಪೂರ;

ಗುಲಬುರ್ಗಾ ಜಿಲ್ಹಾ: ಕಾನಡಿ; ಕಣ್ಣೂರ; ಕೆನ್ನೆಕೋಲೂರು; ಖಾನಾಪೂರ ೨; ಕನ್ನೆಹಳ್ಳಿ; ಕಾನಾಗಡ್ಡಾ.

ರಾಯಚೂರ ಜಿಲ್ಹೆ: ಖಾನಾಪೂರ; ಕ್ಯಾನೂರ, ಕಣ್ಣೂರು; ಕನ್ನಾಸರಿ; ಕಾನ್ಹಾಳ; ಕನ್ನೆಕೊಪ್ಪ; ಕನ್ಗಲ್ ಕಾನೇಪಳ್ಳಿ;

ಅನಂತಪೂರ ಜಿಲ್ಹೆ: ಕನ್ನೆಪಳ್ಳಿ; ಕನ್ನಂಪಳ್ಳಿ.

ಬಳ್ಳಾರಿ: ಕನ್ನೆಹಳ್ಳಿ.

ಕರ್ನೂಲು ಜಿಲ್ಹೆ: ಈ ಜಿಲ್ಹೆಯಲ್ಲಿ ಸಿಕ್ಕುವ ಕಂನಾಡ ಮತ್ತು ಕನ್ನೆನಾಡ ಹೆಸರಿನ ಹಲವು ಶಾಸನಗಳು; ಕಣ್ಣವಿಷಯ, ಕರ್ಣಾಟಸೀಮಾ ಎಂಬ ಶ್ರೀಶೈಲದ ಹತ್ತರಿನ ಒಂದೇ ಸ್ಥಳಕ್ಕಿರುವ ಎರಡೂ ಹೆಸರು; ಶ್ರೀಶೈಲೇಶ್ವರಸಿಗೆ ಇರುವ ಹಾಟಕೇಶ್ವರನೆಂಬ ವಿಶೇಷ ನಾಮ. ಇಂತಿವೆಲ್ಲ ಸಂಗತಿಗಳನ್ನು ಒಂದೆಡೆಯಲ್ಲಿ ತಂದು ವಿಚಾರಿಸಿದರೆ ಕರ್ನೂಲು ಎಂಬುದು ಕಣ್ಣನೂರು ಎಂಬುದರ ಅಪಭ್ರಂಶ ವಿರಬೇಕೆಂದು ಹೇಳಬೇಕಾಗುತ್ತದೆ.

ಕೊಳ್ಳೆಗಾಲ ತಾಲ್ಲೂಕು: ಕಣ್ಣೂರು; ಕನ್ನಂಪಾಳ್ಯ.

ಕೃಷ್ಣಗಿರಿ: ಕನ್ನಾಂಡಹಳ್ಳಿ; ಕಣ್ಣೂರಪಟ್ಟಿ.

ದಕ್ಷಿಣ ಕನ್ನಡ: ಕಣ್ಣೂರ ೨; ಕನ್ಯಾಸ, ಕನ್ಯಾಡಿ, ಕಾಣ್ಯೂರ, ಕನ್ಯ, ಕಾನ್ನಂ ಗಾಡು.

ಉತ್ತರ ಕನ್ನಡ: ಕನ್ನೂರು; ಕಾನಗೋಡ ೪; ಕನ್ನೂರ ಹಗ್ಗರಣಿಗೆ, ಕನ್ನಿಗೆರೆ; ಕನ್ನಾಡಗಾಲ; ಕಾನಳ್ಳಿ; ಕಾಸಗೋಡು. ಕಣಕೊಪ್ಪ; ಕಾನಮುಸುಕಿ; ಕಾನಸೂರ; ಕನಗೊಂಡ;

ಮೈಸೂರ ಸೀಮೆ: ಕನ್ನಮಂಗಲ ೧೮; ಕನ್ನಸವದಿ; ಕನ್ನೂರು ೩; ಕನ್ನಸಾಂದ್ರ ೨; ಕನ್ನಂಪಳ್ಳಿ: ಕಣ್ಣಂಬಾಡಿ; ಕನ್ನಸಮುದ್ರ; ಕನ್ನಪುರ; ಕನನ ಕಟ್ಟೆ; ಕನ್ನೆನಹಳ್ಳಿ; ಕನಕುಪ್ಪ; ಕನ್ನಗೋಡು; ಕನ್ನಗಿ; ಕನಡಹಳ್ಳಿ; ಕನ್ನೇನೂರು; ಕನ್ನಗೆರೆ; ಕನ್ನೆಕೊಪ್ಪ:

ಇಷ್ಟೊಂದು ವಿಸ್ತೃತವಾದ ನಾಡನ್ನು ಕಟ್ಟಿ ನರ್ಮದೆಯಿಂದ ನೀಲಗಿರಿಯ ವರೆಗೆ ಕನ್ನರು ತಮ್ಮ ಹೆಸರಿನ ನೂರಾರು ಊರುಗಳನ್ನೂ ಕನ್ನವಾಡ, ಕನ್ನನಾಡು ಕನ್ನದೇಶ ಎಂಬ ಹೆಸರಿನ ದೇಶವಿಭಾಗಗಳನ್ನೂ ರಚಿಸಿಕೊಂಡರು. ಈ ಭಾಗಕ್ಕೆಲ್ಲ ಅವರ ಹೆಸರು ಆಯ್ತು. ಕಂನಾಡು, ಕರ್ಣಾಟವೆಂದು ರೂಪತಾಳಿ ಸಂಸ್ಕೃತದಲ್ಲಿ ಸ್ಥಾನ ಪಡೆದಿತು.

ಆದರೆ ಮುಂದೆ ನಾಡಿನಲ್ಲಿ ನೆಲಸಿದ ಜನಗಳು, ಇದನ್ನು ಮೊದಲು ಒಕ್ಕಲಾಗಲು ಹದಗೊಳಿಸಿ ಪಾಡಿ, ಬೀಡು, ಊರುಗಳನ್ನು ಕಟ್ಟಿ ಊರ್ಜಿತ ಸ್ಥಿತಿಗೆ ತಂದ ಆ ಕನ್ನರನ್ನು ಕೃತಜ್ಞತೆಯಿಂದ ನೆನೆಯುವುದು, ಅವರ ಹೆಸರು ಮುಂದೆ ಉಳಿಯುವಂತೆ ಮಾಡುವದು ಕರ್ತವ್ಯವಾಗಿಲ್ಲವೆ? ಕಂನಡ ಅಥವಾ ಕರ್ಣಾಟವೆಂಬುದರಿಂದ ಇವರ ಮೊದಲಿನ ನೆನಹು ಉಳಿದಿರುವುದಿಲ್ಲ. **ಕಂನಾಡು** ಎಂದು ಬಳಸುವದರಿಂದಲೇ ಅದು ಉಳಿಯಬಲ್ಲದು. ಯಾವ ನಾಡಿನಲ್ಲಿ ನೆಲಸಿರುವೆವೊ ಅದರ ಮೊದಲಿಗರ ನೆನಹನ್ನು ಮರೆಯಿಸಿಬಿಡುವುದು ಆ ನಾಡಿಗರ ಸಂಸ್ಕೃತಿಗೇ ಒಂದು ಕುಂದು!

**ಕಣ್ಣರು ಯಾರು:**

ಸಂಸ್ಕೃತ ಸಾಹಿತ್ಯದಲ್ಲಿ 'ಕಣ್ಣ'ವೆಂಬುದು 'ಕರ್ಣ'ವೆಂದು ವ್ಯವಹರಿಸುತ್ತದೆ. ಕರ್ಣರ ಉಲ್ಲೇಖವು ಮತ್ಸ್ಯಪುರಾಣದಲ್ಲಿ ಬರುತ್ತದೆ. ಅಲ್ಲಿ ಇವರು ತುರ್ವಸುವಿನ ಪೀಳಗೆಯವರೆಂದು ಹೇಳಿದೆ(ಮತ್ಸ್ಯ ೪೮-೫). ಕರ್ಣರು

ಚೋಳ, ಪಾಂಡ್ಯ ಕೇರಳರ ನೆರೆಯಲ್ಲಿ ನೆಲಸಿದವರೆಂದೂ ವರ್ಣಿಸಿದ್ದುಂಟು. ಕೇರಳದವರೆಗೂ ಕಣ್ಣರ ಊರು (ಕಣ್ಣಾನೂರು) ಉಂಟು. ಕರ್ಣಾಟರು (ಯದು) ತುರ್ವಶರ ರಕ್ತ ಸಂಬಂಧಿಗಳೆಂದು ಇಲ್ಲಿ ಮತ್ತೆ ಇನ್ನೂ ಒಂದು ಬೇರೆ ಬಗೆಯಿಂದ ಹೊರವಡುತ್ತಲಿದೆ.

ಮನುಸ್ಮೃತಿಯಲ್ಲಿ ಉಲ್ಲೇಖಿತರಾದ 'ಕರಣ'ರು, ಮತ್ಸ್ಯಪುರಾಣದ 'ಕರ್ಣ'ರಿಂದ ಬೇರೆಯಲ್ಲ. 'ಕರಣ' ಮತ್ತು 'ಕರ್ಣ' ಎಂಬ ಎರಡು ಬಗೆಯ ಉಚ್ಚಾರವೇ, ಈ ಶಬ್ದವು ಮೂಲತಃ ಸಂಸ್ಕೃತವಲ್ಲವೆಂಬುದನ್ನು ಸೂಚಿಸುತ್ತದೆ. ಪರಭಾಷೆಯಿಂದ ಎತ್ತಿಕೊಂಡ ಪದಗಳನ್ನು ರೂಢಿಸಿಕೊಳ್ಳುವಾಗ ಪ್ರತಿಯೊಂದು ಭಾಷೆಯಲ್ಲಿಯೂ ಈ ಬಗೆಯಾದ ಒಂದಕ್ಕಿಂತ ಹೆಚ್ಚು ಉಚ್ಚಾರಗಳು ಬಳಕೆಯಲ್ಲಿ ಬಂದ ಉದಾಹರಣೆಗಳು ಪ್ರತಿಯೊಂದು ಭಾಷೆಯಲ್ಲಿಯೂ ಉಂಟು. ಇಂಗ್ರೇಜಿಯಲ್ಲಿ ಸಂಸ್ಕೃತದಿಂದ ಸ್ವೀಕರಿಸಿದ 'ಪಂಡಿತ' ಎಂಬ ಪದವು ಇದಕ್ಕೆ ನಿದರ್ಶನ. Pundit, Pandit ಎಂದು ಎರಡು ಬಗೆಯಾಗಿ ಬರೆದುದನ್ನೂ ಆಕ್ಸಫರ್ಡ ಕೋಶದಲ್ಲಿ ಕಂಡುಕೊಳ್ಳಬಹುದು. ಹಿಂದಿಯಲ್ಲಿ ಅಂಗ್ರೇಜಿ, ಇಂಗ್ರೇಜಿ; ಕಂನುಡಿಯಲ್ಲಿ ಆಂಗ್ಲ ಇಂಗ್ರೇಜಿ ಇಂಗ್ಲೀಷ್, ಇಂಗ್ಲೀಶ್ ಎಂದು ಮುಂತಾಗಿ English ಎಂಬ ಒಂದೇ ಪದಕ್ಕೆ ಭಿನ್ನರೂಪಗಳು! ಇಂತಹ ಉದಾಹರಣಗಳು ಬೇಕಾದಷ್ಟಿವೆ. ಆದ ಕಾರಣ ಸಂಸ್ಕೃತದಲ್ಲಿ ದೊರೆವ ಕರಣ ಮತ್ತು ಕರ್ಣ ಎಂಬ ಎರಡೂ ಪದಗಳು ಮೂಲದಲ್ಲಿ ಕಣ್ಣ ಎಂಬ ಒಂದರ ರೂಪಗಳೇ ಆಗಿವೆಯೆಂದು ನಿರ್ಧರಿಸಬಹುದಾಗಿದೆ. ಮನುಸ್ಮೃತಿಯಲ್ಲಿ ಕರಣರೊಡನೆ ನಟರು, ಝಲ್ಲರು, ಮಲ್ಲರು, ದ್ರವಿಡರುಗಳ ಉಲ್ಲೇಖವೂ ಇದೆ. ಇವರೆಲ್ಲ ವ್ರಾತ್ಯಕ್ಷತ್ರಿಯರೆಂದು ಅಲ್ಲಿ ಹೇಳಿದೆ. ದ್ರಾವಿಡರ ಸಮಾನವಾಗಿ ಹೇಳಿದ ಕರಣರು, ನಟರೂ ಆರ್ಯೇತರರೆಂಬುದನ್ನು ಇನ್ನೊಂದು ತೆರನಾಗಿಯೂ ಮನಗಾಣಬಹುದಾಗಿದೆ.

**ಕಣ್ಣರು ನಾಡವರಾದುದು**

ಜನಗಳಿಗೆ ಮತ್ತು ದೇಶಗಳಿಗೆ ಹಲವೆಡೆಗಳಲ್ಲಿ ಒಂದಕ್ಕಿಂತ ಹೆಚ್ಚು ಹೆಸರುಗಳಿರುವುದು ಕಂಡುಬರುತ್ತದೆ. ಅದಕ್ಕೆ ಕೆಲವೊಂದು ಕಾರಣಗಳೂ ಉಂಟು. ನಮ್ಮ ರಾಷ್ಟ್ರಕ್ಕೆ ಆರ್ಯಾವರ್ತ, ಭರತಖಂಡ (ಭಾರತವರ್ಷ), ಹಿಂದೂದೇಶ (ಹಿಂದುಸ್ತಾನ) ಎಂಬೀ ಬಗೆಯಾಗಿ ಸಾಧಾರಣವಾಗಿ

ಮೂರು ಹೆಸರುಗಳು ಕೇಳಬರುತ್ತವೆ. ತೆಲುಗಿಗೆ ಆಂಧ್ರವೆಂಬ ಇನ್ನೊಂದು ಹೆಸರಿದೆ. ದ್ರಾವಿಡರಿಗೆ ತಮಿಳರೆಂದು ಕರೆವ ವಾಡಿಕೆಯೂ ಇದೆ. ವ್ಯಕ್ತಿಗಳ ಹೆಸರಿನಲ್ಲಿ ಸಹ ಈ ವಾಡಿಕೆಯುಂಟು.

ಇವುಗಳಲ್ಲಿ ಒಂದು ಹೆರವರಲ್ಲಿ, ಹೊರನಾಡುಗಳಲ್ಲಿ ಪ್ರಸಿದ್ಧವಾಗಿದ್ದರೆ ಇನ್ನೊಂದು ತಮ್ಮವರಲ್ಲಿ, ಒಳದೇಶದಲ್ಲಿ ಪ್ರಚಾರದಲ್ಲಿರುತ್ತದೆ ನಮ್ಮ ರಾಷ್ಟ್ರಕ್ಕಿರುವ ಹಿಂದೂದೇಶ ಮತ್ತು ಭರತಖಂಡ ಎಂಬ ಹೆಸರುಗಳನ್ನು ನೋಡಬಹುದು. ಹಿಂದೂದೇಶವೆಂಬ ಹೆಸರು ಪ್ರಾಚೀನ ಸಂಸ್ಕೃತ ಗ್ರಂಥಗಳಲ್ಲಿ ಎಲ್ಲಿಯೂ ದೊರೆಯಲಾರದು. ಸಿಂಧೂ ನದಿಯ ಮೇಲಿಂದ ಈ ನಾಡಿಗೆ ಹಿಂದೂದೇಶವೆಂದು, ಸಿಂಧೂ ನದಿಯ ಆಚೆಯ ಹೊರನಾಡಿನವರು ಇಟ್ಟ ಹೆಸರಿದು. ಪ್ರಾಚೀನ ಪರಂಪರೆಯಿಂದ ನಡೆದು ಬಂದ ಹೆಸರೆಂದರೆ ಭರತಖಂಡ ಅಥವಾ ಭಾರತವರ್ಷವೆಂಬುದೆ. 'ಜಂಬೂದ್ವೀಪೇ ಭರತವರ್ಷೇ....' ಎಂಬುದಿದು ನಿತ್ಯ ಸಂಕಲ್ಪದೊಳಗೆ ನಮ್ಮವರು ಹೇಳುವ ಹೆಸರು. ಆದರೆ ಈಗ ಭರತಖಂಡವೆಂಬುದಕ್ಕಿಂತ ಹಿಂದೂದೇಶವೆಂಬ ಹೆರವರ ಹೆಸರೆ ವಿಶೇಷ ಪ್ರಚಾರದಲ್ಲಿ ಬಂದಿದೆ! ಮತ್ತು ಅದೇ ಅತಿ ಪುರಾತನ ಕಾಲದಿಂದ ಬಂದ ಹೆಸರೆಂಬಂತೆ ಹಲರು ನೆರೆನಂಬಿ, ಆ ಹೆಸರಿನಲ್ಲಿ ಹೆಮ್ಮೆಪಟ್ಟುಕೊಳ್ಳುವುದೂ ಉಂಟು.

ಕರ್ಣಾಟ, ಕಂನಾಡುಗಳ ವಿಚಾರವೂ ಹೀಗೆಯೆ ಇದೆ. ಕರ್ಣಾಟವೆಂಬುದು ಕಂನಾಡ ಹೊರಗಿನವರು ಕರೆಯಲಾರಂಭಿಸಿದ ಹೆಸರು. ಆದು ಸಂಸ್ಕೃತ ಸಾಹಿತ್ಯದಲ್ಲಿದೆ. ಪೂರ್ವಪರಂಪರಾವಿಚ್ಛೇದವಾಗಿ—ಕಂನಾಡು ಎಂಬ ಮೂಲ ರೂಪವು ಮರೆತು ಹೋಗಿ—ನಮ್ಮ ಒಳನಾಡಿನ ಜನಗಳ ಬಾಯಲ್ಲಿ 'ಕನ್ನಡ' ಎಂಬುದೇ ಹೆಚ್ಚಾಗಿ ರೂಢವಾಗಿದೆ.

ಹೆರವರು ಕರೆವ ಹೆಸರು ಬೇರೆಯಾಗುವುದಕ್ಕೆ ಎರಡು ಕಾರಣಗಳುಂಟು: ಹೆರವರು ತಾವೇ ಇಟ್ಟ ಹೆಸರಿದ್ದರೆ ಅದನ್ನು ತಮಗೆ ಅರ್ಥವಾಗುವ ರೀತಿಯಲ್ಲಿ, ಅವರು ತಮ್ಮ ದೃಷ್ಟಿಯಿಂದ ಸಾರ್ಥವಾದುದನ್ನೆ ಇಡುವರು. ಆದರೆ ಎಷ್ಟೊ ಬಾರಿ, ಒಂದು ದೇಶಕ್ಕಿದ್ದ ಆ ಜನಗಳಿಟ್ಟ ಹೆಸರನ್ನೆ ಹೆರವರು ಎತ್ತಿಕೊಳ್ಳಬೇಕಾಗುತ್ತದೆ. ಅಂತಹ ಸಂದರ್ಭದಲ್ಲಿ ಆ ಮೂಲ ಹೆಸರು ಹೆರವರ ಬಾಯಲ್ಲಿ ಅವರ ಉಚ್ಚಾರಕ್ಕನುಸರಿಸಿ ಮಾರ್ಪಡುತ್ತದೆ. ಹಿಂದೂದೇಶ

ಮತ್ತು ಇಂಡಿಯಾ ಎಂಬುವು ಮೇಲಣ ಎರಡೂ ಪ್ರಕಾರಗಳಿಗೆ ಕ್ರಮವಾದ ಉದಾಹರಣಗಳಾಗಿವೆ. 'ಕರ್ಣಾಟ' ವೆಂಬುದು ಸಂಸ್ಕೃತ ಭಾಷೆಯವರೆ ಇಟ್ಟ ಹೆಸರಾಗಿದ್ದರೆ ಅದಕ್ಕೆ ಆ ಭಾಷೆಯಿಂದ ಸರಿಯಾಗಿ ಅರ್ಥವಾಗಬೇಕಾಗಿತ್ತು. ಸಂಸ್ಕೃತ ಮತ್ತು ಪ್ರಾಕೃತ ಗ್ರಂಥಗಳಲ್ಲಿ ಈ ನಾಡವರು ಕರ್ಣ, ಕರಣ ಅಥವಾ ಕಣ್ಣರೆಂದು ಉಲ್ಲೇಖಿತರಾಗಿದ್ದಾರೆ. 'ಕರ್ಣ' ಎಂಬುದು ಜನದ ಹೆಸರಾದ ಬಳಿಕ 'ಕರ್ಣಾಟ' ವೆಂಬುದರೊಳಗಿನ 'ಕರ್ಣ' ವು ಹೋಗಲಾಗಿ ಅಟ ಅಥವಾ ನಾಟವೆಂಬ ಪದವು ಉಳಿಯುವುದು. ಇವೆರಡಕ್ಕೂ ಸಂಸ್ಕೃತ ಭಾಷೆಯಿಂದ ದೇಶವೆಂಬ ಅರ್ಥವಾಗುವುದಿಲ್ಲ. ಕೊನೆಯ ನಾಟವೆಂಬುದು 'ನಾಡು' ಎಂಬುದರ ಒಂದು ರೂಪವಾಗಿರುವುದೆ ನಿದರ್ಶನಕ್ಕೆ ಬರುತ್ತದೆ. ಆದುದರಿಂದ ಕಂನಾಡು ಎಂಬುದೇ ಮೂಲ ಪದವೆಂಬುದು ನಿಶ್ಚಿತ. ಕಣ್ಣರು ನಾಡವರಾದ ಕಾಲದಲ್ಲಿ ಇದು ಕ್ರಿ. ಶ. ೩–೪ ನೆಯ ಶತಮಾನದ ಸುಮಾರಿಗೆ ಬಳಕೆಯಲ್ಲಿ ಬಂದಿದೆ.

## ಕುಡುವರು: ಒಕ್ಕಲರು

ಒಳನಾಡಿನಲ್ಲಿಯೆ ಒಂದಕ್ಕಿಂತ ಹೆಚ್ಚು ಹೆಸರುಗಳು ಬಳಕೆಯಲ್ಲಿ ಇರುವುದೂ ಉಂಟು. ಕುಡು–ಒಕ್ಕಲರು ಎಂಬುದನ್ನೆ ತಕ್ಕೊಂಡರೆ ಒಂದೇ ಜನಕ್ಕೆ ಇದ್ದ ಎರಡು ಹೆಸರುಗಳನ್ನಿಲ್ಲಿ ಮನಗಾಣಬಹುದು. ಕುಡುವರು ಎಂಬುದು ಒಂದು ಕಾಲದ ಹೆಸರು; ಇದು ಆರಂಭದ್ದು. ಆದರೆ ಇದರಿಂದ ಅರ್ಥವು ಸ್ಪಷ್ಟವಾಗಿ ತಿಳಿಯದಾದುದರಿಂದಲೊ, ಒಕ್ಕಲರು ಎಂಬ ಇನ್ನೊಂದು ಅದೇ ಅರ್ಥದ ಹೆಸರು ಮುಂದೆ ಬಂದಿತು. ಕುಡುವನೆಂದು ತಮಿಳಿನಲ್ಲೂ ಒಕ್ಕಲರಿಗೆ ಹೆಸರಿದೆ. ಅದರಿಂದ ತಾವು ಬೇರೆಯೆಂದು ಸ್ಪಷ್ಟಪಡಿಸಿಕೊಳ್ಳಲು ಒಕ್ಕಲರು ಎಂಬ ಅಚ್ಚ ಕಂನುಡಿಯ ಮಾತು ತಲೆಯೆತ್ತಿರುವ ಸಂಭವವೂ ಇದೆ. ಪ್ರಾಂತಪ್ರಾಂತಗಳಲ್ಲಿ ಭಿನ್ನತೆಯು ಉಂಟಾದಂತೆ ಅವರು ಬಳಸುವ ಪ್ರಯೋಗಗಳಲ್ಲೂ ಅದು ಕಾಣಿಸಿಕೊಳ್ಳುತ್ತದೆ. ಕಂನಾಡು–ಮರ್ಹಾಟ ಗಳ ಭಾಷೆಯಲ್ಲಿ ಈ ಬಗೆಯ ಉದಾಹರಣಗಳು ಸಾಕಷ್ಟಿವೆ. 'ಮೊದಲು' ಎಂಬುದನ್ನು ಮೂಲ ಧನ, ಬಂಡವಾಳವೆಂಬರ್ಥದಲ್ಲಿ ನಯಸೇನನು (೧೨ನೆಯ ಶತಮಾನ) ಬಳಸಿದ್ದಾನೆ. ಇದು ಮರ್ಹಾಟಿಯಲ್ಲಿ 'ಮುದ್ದಲ' ಎಂದು ಈಗಲೂ ಉಳಿದಿದೆ. ಕಂನಾಡವರು 'ಅಸಲು' ಎಂಬ ಪರಕೀಯ

ಪದವನ್ನು ರೂಢಿಸಿಕೊಂಡಿದ್ದಾರೆ. ಮೊದಲು ಮರ್ಠಾಟಿಯ ಮಾತೆಂದೂ ಹಲವರು ನಂಬಿರುವುದು ಕಂಡುಬರುತ್ತದೆ. ಪಾಟಿಲ ಮತ್ತು ಗೌಡ ಎಂಬ ಎರಡು ಪರ್ಯಾಯ ಶಬ್ದಗಳು ೧೨ನೆಯ ಶತಮಾನಕ್ಕೆ ಮೊದಲಿನಿಂದಲೂ ನಡೆಯುತ್ತ ಬಂದಿದ್ದರೂ ಗೌಡ–ಗಾಮುಂಡವನ್ನು ನಮ್ಮ ಲೇಖಕರು ಬಳಸಿರುವರೆ ಹೊರತು ಈ ನಾಡವರದೇ ಆದ ಪಾಟಿಲ (ಪಟ್ಟೆ ಇಲ್ಲ) ಶಬ್ದವನ್ನು ಉಪಯೋಗಿಸಲಿಲ್ಲ! ಪಟ್ಟ ಇಲ್ಲವನ್ನು ಪ್ರಾಕೃತ ಗ್ರಂಥಗಳು ಬಳಸಿವೆ! ಆದರೆ ಕಂನಾಡಿನಲ್ಲಿ ಬಳಕೆಯಲ್ಲಿದ್ದರೂ ಕಂನುಡಿಯ ಗ್ರಂಥಗಳಲ್ಲಿಲ್ಲ! ಪಟ್ಟ ಇಲ್ಲದ ಪ್ರಯೋಗವು ದೊರೆವ 'ಸುಪಾಸನಾಹ ಚರಿಯ'ವು ಕ್ರಿ. ಶ. ೧೧೪೩ ರಲ್ಲಿ ಬರೆಯಲ್ಪಟ್ಟ ಪ್ರಾಕೃತ ಕವಿತೆಯ ದೊಡ್ಡ ಗ್ರಂಥವಾಗಿದೆಯೆಂದು ಡಾ. ಎ. ಎನ್. ಉಪಾಧ್ಯೆಯವರು ತಿಳಿಸುತ್ತಾರೆ.

## ಕಣ್ಣರು ಕುಡುವರಾದುದು

ಒಂದಕ್ಕಿಂತ ಹೆಚ್ಚು ಹೆಸರುಗಳಿಗೆ ಅವರ ನಿಲುಮೆ, ಮತ್ತು ವೃತ್ತಿಗಳೂ ಕಾರಣವಾಗುತ್ತವೆ ಉದಾಹರಣಾರ್ಥವಾಗಿ ಹಟ್ಟಿಕಾರರು ಎಂಬುದು ದನಗಾರಿಕೆಯ ನಿಲುಮೆಯ ಹೆಸರಾದರೆ, ಹಾಲುಮತದವರೆಂಬುದು ಅವರು ಗೋರಸ ವ್ಯವಹಾರಿಗಳೆಂದು. ಕಳವರು ಅಥವಾ ಕಣ್ಣರೆಂದರೂ ಹಾಲುಮನೆತನದವರೆಂದೇ ಅರ್ಥವು. ಕಳವರೆಂಬುದಕ್ಕಿಂತಲೂ ಕಣ್ಣರೆಂಬುದು ಅರ್ವಾಚೀನ; ಕಣ್ಣರೆಂಬುದಕ್ಕಿಂತಲೂ ಹಾಲುಮನೆತನದವರೆಂಬುದು ಅರ್ವಾಚೀನ–ಕ್ಷೀರ ಇತ್ತೀಚಿನದು. ಕಳವರೆಂಬ ಕಂನುಡಿಯ ಅರ್ಥವೇ ಯಾದವರೆಂಬ ಸಂಸ್ಕೃತ ಪದಕ್ಕೂ ಉಂಟು.

ಹಟ್ಟಿಕಾರಿಕೆಯಿಂದ ಮುಂದಿನ ಮಟ್ಟಕ್ಕೆ ಹೋದ ಪಂಗಡವು ತೋಟ–ಪಟ್ಟಿಗಳ ಸಾಗುವಳಿಯನ್ನು ಕೈಕೊಂಡುದರಿಂದ ಅದಕ್ಕೆ ಕುಡುವರೆಂದೂ ಒಕ್ಕಲರೆಂದೂ ಹೆಸರು ಬಂದಿತು. ದನಗಾರಿಕೆಯ ಪಾಡಿನೊಳಗಿಂದಲೇ ತೋಟಪಟ್ಟಿಯ ಆರಂಭವು ಹೇಗಾಯಿತೆಂಬುದನ್ನು ಸಮಾಜ ವಿಕಾಸ ಶಾಸ್ತ್ರವು ಚೆನ್ನಾಗಿಯೆ ವಿವರಿಸುತ್ತದೆ. ಗಂಡಸು ದನಗಳೊಡನೆ ಅಲೆಯಬೇಕಾದರೂ ಹೆಣ್ಣಿಗೆ ಮಕ್ಕಳ ಆರೈಕೆ, ಮನೆಗೆಲಸಗಳಿಗಾಗಿ ಹಟ್ಟಿಯಲ್ಲಿಯೆ ಕಾಲೂರಿಕೊಂಡು ಇರುವ ಅವಶ್ಯಕತೆಯುಂಟಾಗುತಿದಿತು. ಈ

ಹೆಣ್ಣುಮಕ್ಕಳು ತಮ್ಮ ಹಿತ್ತಿಲ ಪಟ್ಟಿಯಲ್ಲಿ ದಿನದ ಆಹಾರಕ್ಕೆ ಉಪಯುಕ್ತವಾದ ಗಿಡಗಂಟಿಗಳನ್ನು ನಟ್ಟು ನೀರು ಹಾಕಿ ಬೆಳೆಸುವುದಕ್ಕಾರಂಭಿಸಿದರು. ಇದುವೆ ವಿಕಾಸವಾಗಿ ಕೃಷಿಯ ವ್ಯವಸಾಯವು ವಿಸ್ತಾರಹೊಂದಿತು.

ಇದು, ಕುಡುವರಿಂದ ಆರಂಭವಾದುದೆಂದು ಕುಳ ಶಬ್ದಕ್ಕೆ ರೈತರೆಂಬ ಅರ್ಥವಿದೆ. ಕುಳವಾರು, ಕುಳವಾಡಿಗಳೆಂದರೆ ರೈತರ ಕುಟುಂಬಗಳು. ಕುಳವಾಡಿ ಎಂದರೂ ಇಲ್ಲಿ ಮತ್ತೆ ದ್ವಿರುಕ್ತಿಯಿದೆ ಕುಳ+ವಾಡಿ; ವಾಡಿ= ಪಾಡಿ; ಮರ್ಹಾಟಿಯಲ್ಲಿ 'ಕುಳವಿಣೆ' ಎಂಬ ಧಾತುವಿದೆ. ಅದಕ್ಕೆ ನೆಲವನ್ನು ಹಸನ ಮಾಡು, ಎಂಬ ಅರ್ಥವುಂಟು. 'ಕುಳವೇ' (ನಾಮ): ಅಡವಿಯನ್ನು ಕಡಿದು ಮೊದಲನೆಯ ಬಾರಿಯೆ ರಾಗಿ ಪೈರು ಬೆಳೆವ ಹೊಲ. ಈ 'ಕುಳವೇ' ಎಂಬ ಮರ್ಹಾಟಿ ನಾಮಪದದಲ್ಲಿ 'ಕುಡು'ವರ 'ಆರಂಬದ' ಕೆಲಸದ ಸಂಪೂರ್ಣ ಭಾವವು ಒಳಗೊಂಡಿದೆ. ಕಾಡನ್ನು ಕುಟುಕಿ, ಕಡಿದು, ಒಕ್ಕಲಿಕ್ಕಿ, ಹಸನ ಮಾಡಿ ಕೃಷಿಗೆ ಯೋಗ್ಯಮಾಡಿದ ಕ್ರಿಯೆಯ ಸಂಪೂರ್ಣ ಅರ್ಥವು ಆದರಲ್ಲಿ ಅಡಕವಾಗಿದೆ. ಕುಡುವ (ಕುಡ್ವ) ಎಂಬ ಅಡ್ಡಹೆಸರಿನ ಮನೆತನಗಳಿವೆ. ಇದರಂತೆ ಕಮ್ತಿಗಳೂ ಉಂಟು. ಕಮತಿಗನೆಂದರೆ ರೈತ; ಒಕ್ಕಲ. ಇದು ಕಂನುಡಿಯೆಂದು ಹೇಳುವುದು ಕಷ್ಟ. ಅರ್ವಾಚೀನ ಪದವು. ಕಮ್ತಿ ಎಂಬರ್ಥದಲ್ಲಿ ಕುಡುವ ಎಂಬುದು ಪ್ರಾಚೀನ ಪದ. ಗೌಡ ಸಾರಸ್ವತ ಬ್ರಾಹ್ಮಣರಲ್ಲಿ ಇವೆರಡೂ ಅಡ್ಡಹೆಸರುಗಳಿವೆ. ಅವರು ಮೊದಲು ಕೃಷೀವಳರಾಗಿದ್ದುದನ್ನು ಆ ಅಡ್ಡಹೆಸರು ಹೇಳುತ್ತದೆ. ಕುಡುವ, ಕುಡುಮಿ, ಕುಟಂಬಿ ಎಂಬುವೆಲ್ಲ ಒಕ್ಕಲರ ಹೆಸರುಗಳೆ.

## ಕುಡುವರೂ ನಾಡವರೂ ರಾಷ್ಟ್ರಿಕರೂ

ನಾಡವರೆಂದರೂ ಮೊದಲು ಕುಡುವರೆ. ತುಳುನಾಡಿನಲ್ಲಿ ಹಾಗೆ ಅರ್ಥವೂ ಉಂಟು. ಆದರೂ ನಾಡು ಎಂಬ ಪದದ ಅರ್ಥವು ವಿಸ್ತೃತವಾದಂತೆ ನಾಡವರೆಂಬುದಕ್ಕೂ ವಿಶೇಷವಾದ ಅರ್ಥವು ಪ್ರಾಪ್ತವಾಯಿತು. ಈ ಜನಗಳು ಮುಂದಿನ ಕಾಲದಲ್ಲಿ, ನಾಡನ್ನು ಕಟ್ಟುವ ಕೆಲಸದಲ್ಲಿ–ರಾಜಕೀಯ ರಣರಂಗದಲ್ಲಿ ಮುನ್ನುಗ್ಗಿ ತಮ್ಮ ಹೆಸರಿಗೆ ಹೆಚ್ಚಿನ ಅರ್ಥವನ್ನು ಸಂಪಾದಿಸಿದರು. ಈ ನಿಲುಮೆಯಲ್ಲಿ ನಾಡವರಿಗೆ ಬಂಟರೆಂಬ ಇನ್ನೊಂದು

ಅನ್ವರ್ಥಕ ನಾಮವು ಪ್ರಾಪ್ತವಾಯಿತು. ಈ ನಾಡವರಿಗೆ ಸಂಸ್ಕೃತ ಭಾಷೆಯಿಂದ ಬಂದ ರಾಷ್ಟ್ರಿಕರೆಂಬ ಇನ್ನೊಂದು ಹೆಸರೂ ಉಂಟು.

ಕವಿರಾಜ ಮಾರ್ಗದಲ್ಲಿ ಮಾಡಿದ ನಾಡವರ್ಗಳ ವರ್ಣನೆಯು ಇಡೀ ಕಂನಾಡಿನ ಎಲ್ಲ ಜನಗಳಿಗೂ ಸಂಬಂಧಪಟ್ಟುದೆಂದೂ, ಅದು ಕಂನಾಡ ಅಭಿಮಾನದಿಂದ ಬರೆದ ಪದ್ಯವೆಂದೂ ಕೆಲವರ ಗ್ರಹಿಕೆಯಿದ್ದಿತು. ಆದರೆ ಇಂದಿನ ಕಾಲದ ದೇಶಾಭಿಮಾನದ ರೀತಿಯೆ ಬೇರೆ. ಇಂದಿನ ಅಖಂಡ ಕಂನಾಡಿನ ದೃಷ್ಟಿ ಅಂದಿನ ಕಾಲದಲ್ಲಿಯೂ ಇದ್ದಿತೆಂದು ವಾದಿಸುವುದು ಹೇಗೆ ವ್ಯರ್ಥವೊ, ಹಾಗೆಯೆ ಇಂದಿನ ದೇಶಾಭಿಮಾನದ ಕಲ್ಪನೆಗಳು ಅಂದು ಇದ್ದುವೆಂಬುದೂ ಹುಸಿ. ದೇಶ, ಭಾಷೆಗಳ ಇಂದಿನ ಅಭಿಮಾನದ ಬಗೆಯೆ ಬೇರೆ. ಅಂದು ತಮ್ಮ ಬಗೆ, ಜಾತಿ, ಧರ್ಮಗಳು ಪ್ರಾಮುಖ್ಯವಾಗಿದ್ದುವು. ಆದುದರಿಂದ ರಾಷ್ಟ್ರಕೂಟ ನೃಪತುಂಗದೇವನ ಆಸ್ಥಾನದಲ್ಲಿ ರಚಿತವಾದ ಕವಿರಾಜ ಮಾರ್ಗದಲ್ಲಿ ಬಂದ ನಾಡವರ ವರ್ಣನೆಯು ಇಡೀ ಕಂನಾಡಿನ ಜನಗಳದಲ್ಲ. 'ನಾಡವರು' ಎಂಬ ವಿಶಿಷ್ಟ ವರ್ಗದ್ದಾಗಿದೆ. ಈ ನಾಡವರೆ ರಾಷ್ಟ್ರಿಕರು. ಆದುದರಿಂದ ಅದು ರಾಷ್ಟ್ರಕೂಟ ಕುಲದ ವರ್ಣನೆಯೂ ಅಹುದು. ಈ ಕಾರಣದಿಂದಲೆ ಅದು ನೃಪತುಂಗದೇವನ ಪ್ರಶಂಸೆಯೂ ಆಗುವುದು. ನಾಡವರೆಂದರೇ ರಾಷ್ಟ್ರಿಕರು ಎಂಬುದು ಕವಿರಾಜ ಮಾರ್ಗದ ಆ ವರ್ಣನೆಗಳಿಂದ ಕಂಡು ಬರುವುದು. ದೇಶೀಯ ಹೆಸರುಗಳನ್ನು ಭಾಷಾಂತರಿಸಿಕೊಂಡು ಬಳಸುವ ರೀತಿಯು ಸಂಸ್ಕೃತದಲ್ಲಿ ಎಂದಿನಿಂದಲೂ ಇದೆ.

## ರಾಷ್ಟ್ರಿಕರ ನೆಲೆವೀಡು

ರಾಷ್ಟ್ರಿಕರ ಹೆಸರು ಅಶೋಕನ ಶಾಸನಗಳಲ್ಲಿ ಬಂದಿದೆ. ರಿಷ್ಟಿಕ ಭೋಜಕರ ಹೆಸರುಗಳು ಕೆಲವೆಡೆಗೆ ಕೂಡಿಬರುತ್ತವೆ. ಆದುದರಿಂದ ಇವೆರಡೂ ಜನಗಳು ಹತ್ತಿರ ಹತ್ತಿರ ವಾಸವಾಗಿರಬೇಕೆಂದು ಡಾ. ಬಿ. ಸಿ. ಲಾ ಅವರು ಬರೆಯುತ್ತಾರೆ. ಭೋಜಕ, ರಿಷ್ಟಿಕ, ಪಿಟಣಿಕರ ಹೆಸರು ಇನ್ನೊಂದೆಡೆಗೆ ಕೂಡಿ ಇವೆ. ಭೋಜಕರು ವರ್‍ಹಾಟದಲ್ಲಿ ಆಳಿದರು. ಕಚ್ಛದ ರಾಜಧಾನಿಯಾದ ಭೋಜ (ಕಟಕ) ವೆಂಬ ಊರು ಭೋಜರ ಪ್ರಾಚೀನ ಕುರುಹೆಂದು ಡಾ. ಜಯಸ್ವಾಲರು ಬರೆಯುತ್ತಾರೆ. ಕಂನಾಡಿನಲ್ಲಿ (ಬೆಳಗಾವ ಜಿಲ್ಹೆ ಚಿಕೋಡಿ ತಾಲ್ಲೂಕು) ಒಂದು ಭೋಜಗ್ರಾಮವಿದೆ. ವರ್‍ಹಾಟದ

ಲ್ಲಂತೂ ಪ್ರಾಚೀನ ಕಾಲದಲ್ಲಿ ಭೋಜರು ಆಳಿದ ಬಗೆಗೆ ತಜ್ಞರಲ್ಲಿ ಭಿನ್ನಾಭಿಪ್ರಾಯುಗಳಿಲ್ಲ.

ಭೋಜಕರೂ ರಾಷ್ಟ್ರಕೂಟರೂ ಹತ್ತಿರ ಹತ್ತಿರ ಇದ್ದರೆಂಬುದು ಅಶೋಕನ ಶಾಸನಗಳಿಂದ ಕಂಡುಬರುವ ಮಾತಿಗೆ ಬೇರೆ ಐತಿಹಾಸಿಕ ಆಧಾರಗಳೂ ಉಂಟು. ರಾಷ್ಟ್ರಕೂಟರ ಪುರಾತನ ಶಾಸನಗಳು ಪರ್ನಾಟದಲ್ಲಿಯೆ ಸಿಕ್ಕಿವೆ. ರಾಷ್ಟ್ರಕೂಟರು ಯದುವಂಶಿಗಳು, ಭೋಜಕುಲದವರೆಂದು ಅವರ ಶಾಸನಗಳಲ್ಲಿ ಬರೆದ ವಂಶವೃತ್ತದಿಂದ ತಿಳಿದು ಬರುತ್ತದೆ. ಆದುದರಿಂದ ರಾಷ್ಟ್ರಕೂಟರ ಮೂಲಸ್ಥಾನವು ವರ್ನಾಟವೆಂದು ಹೇಳಬೇಕಾಗುತ್ತದೆ.

## ನಾಡವರೇ ರಾಷ್ಟ್ರಿಕರು

ನಾಡವರಿಗೆ ರಾಷ್ಟ್ರಿಕರೆಂದು ಹೆಸರಿದ್ದಿತೆಂದು 'ಕಣ್ಮರೆಯಾದ ಕಂನಡದಲ್ಲಿ (೧೯೩೩) ಬರೆದುದು ಈಗ ಬೇರೆ ವಿದ್ವಾಂಸರಿಗೂ ಒಪ್ಪಿಗೆಯಾಗಿದೆ. ಪ್ರೊ. ಮುಗಳಿಯುವರು The Heritage of Karnatak ಎಂಬ ತಮ್ಮ ಹೊಸ ಗ್ರಂಥದಲ್ಲಿ (೧೯೪೬) ನಾಡವರು ರಾಷ್ಟ್ರಿಕರೆಂಬುದನ್ನು ಸಿದ್ಧ ಸಂಗತಿಯಂತೆ ಎತ್ತಿಕೊಂಡಿದ್ದಾರೆ. ರಾಷ್ಟ್ರಕೂಟರ ಇತಿಹಾಸವನ್ನು ಬರೆದ ಡಾ. ಅಳತೇಕರರಿಗೆ ಕಂನಾಡ ಜನ ಮತ್ತು ಪರಂಪರೆಗಳ ಪರಿಚಯವಿದ್ದರೆ ಅವರೂ ಈ ಮಾತನ್ನು ತಮ್ಮ ಗ್ರಂಥದಲ್ಲಿ ಕಾಣಿಸಬಹುದಾಗಿತ್ತು. ಏಕೆಂದರೆ ನಾಡವರು ಮತ್ತು ರಾಷ್ಟ್ರಿಕರು ಒಂದು, ಎಂಬ ಮಾತನ್ನು ಸ್ವೀಕರಿಸುವುದರಿಂದ ಅವರು ಮುಂದೆ ಪ್ರತಿಪಾದಿಸಿದ ಸಿದ್ಧಾಂತಕ್ಕೆ ಹೆಚ್ಚಿನ ಪುಷ್ಟಿಯು ದೊರೆಯುತ್ತಿತ್ತು. ರಾಷ್ಟ್ರಕೂಟರು ಕಂನಾಡ ಜನ; ಇವರ ಮೂಲಭಾಷೆ ಕಂನುಡಿ ಎಂದು ಡಾ. ಅಳತೇಕರರು ಮಾಡಿದ ನಿರ್ಣಯಕ್ಕೆ ಅದರಿಂದ ಹೆಚ್ಚಿನ ಸಹಜತೆ ಮತ್ತು ಹೆಚ್ಚಿನ ಬಲವು ಬರುತ್ತಿದ್ದಿತು. ಏಕೆಂದರೆ ಡಾ. ಅಳತೇಕರರು ಇದಕ್ಕೆ ಪ್ರಮಾಣವೆಂದು ಹೇಳಿದ ಬೇರೆ ಆಧಾರಗಳು ಬಹಳ ದುರ್ಬಲವಾಗಿವೆ.

ರಾಷ್ಟ್ರಕೂಟರ ಗುಜರಾತಿನ ಶಾಸನಗಳಲ್ಲಿ ರಾಜನು ಕೊನೆಗೆ ಕಂನಾಡ ಅಕ್ಷರಗಳಲ್ಲಿ ತನ್ನ ಒಪ್ಪವನ್ನು ಹಾಕಿದ್ದು ಕಂಡುಬರುತ್ತದೆ.

ರಾಷ್ಟ್ರಕೂಟ ಇನೆಯ ಕೃಷ್ಣನು ಜೂರಾ ಎಂಬಲ್ಲಿ (ಉತ್ತರ ಹಿಂದುಸ್ಥಾನ ದಲ್ಲಿ) ಬರೆಯಿಸಿದ ಶಾಸನವು ಕಂನುಡಿಯಲ್ಲಿದೆ. ಇವರು ಕಂನುಡಿಗೆ ರಾಜಾಶ್ರಯವನ್ನಿತ್ತಿರುವರು. ಆದಕಾರಣ ರಾಷ್ಟ್ರಕೂಟರು ಕಂನಾಡಪರೇ ಇರಬೇಕು. ಏಕೆಂದರೆ ಇವರಿಗೆ ತಮ್ಮ ನಾಡು ಮತ್ತು ನುಡಿಯಲ್ಲಿ ವಿಶೇಷ ಅಭಿಮಾನವಿದ್ದುದು ಮೇಲಣ ಸಂಗತಿಗಳಿಂದ ಕಂಡುಬರುತ್ತದೆ; ಎಂದು ಡಾ. ಆಳತೇಕರ ಹೇಳಿಕೆ.

ಕಂನಾಡಪರಲ್ಲಿ ತಮ್ಮ ನಾಡು ಮತ್ತು ನುಡಿಯ ವಿಷಯಕ್ಕೆ ವಿಶೇಷ ಅಭಿಮಾನವಿರುತ್ತದೆಂಬ ಸಂಗತಿಗೆ ಐತಿಹಾಸಿಕ ಆಧಾರಗಳು ವಿಶೇಷವಾಗಿ ದೊರೆಯಲಾರವು. ಇದಕ್ಕೆ ವಿರೋಧವಾದ ಸಂಗತಿಗಳೇ ಹುಡುಕಿದಷ್ಟೂ ಬೆಳಕಿಗೆ ಬರುತ್ತಿವೆ. ಇದರ ವಿವರಣೆಯು ಮುಂದಿನ ಪ್ರಕರಣದಲ್ಲಿ ಬರಲಿರುವುದರಿಂದ ಅದನ್ನಿಲ್ಲಿ ವಿಸ್ತರಿಸುವುದಿಲ್ಲ. ರಾಷ್ಟ್ರಕೂಟರು ಕಂನಾಡ ಲಿಪಿಯನ್ನು ಕೆಲವೆಡೆಗೆ ಬಳಸಿದ್ದು ನಿಜ. ಆದರಂತೆ ಕೆಲವು ಕವಿಗಳಿಗೆ ರಾಜಾಶ್ರಯವನ್ನಿತ್ತುದೂ ನಿಜ. ಆದರೆ ಅದರಲ್ಲಿ ವಿಶೇಷ ಅಭಿಮಾನವಿದ್ದುದಕ್ಕೆ ಏನೂ ಆಧಾರಗಳಿಲ್ಲ. ಪ್ರವಾಹಪತಿತರಾಗಿ–ಅನಿವಾರ್ಯವಾಗಿ ಆ ಕಾಲಕ್ಕೆ ಮಾಡಬೇಕಾದುದನ್ನು ಮಾಡಿರುವರೆ ಹೊರತು ಅವರ ಆ ಕೃತಿಯ ಹಿಂದೆ ಕಂನಾಡ ಅಭಿಮಾನವಿದ್ದಿತೆಂದು ಹೇಳುವುದು ಸರಿಯಾಗಲಾರದು. ಏಕೆಂದರೆ ಹಾಗೆ ಅವರಲ್ಲಿ ಅಭಿಮಾನವು ವಿಶೇಷವಿದ್ದರೆ ಕಂನಾಡ ಲಿಪಿಯಲ್ಲಿಯೆ ರಾಷ್ಟ್ರಕೂಟರ ಶಾಸನಗಳು ಹೆಚ್ಚಾಗಿ ಇರಬೇಕಾಗಿತ್ತು. ಇವುಗಳ ಪ್ರಮಾಣವು ತೀರ ಸ್ವಲ್ಪವಿದೆ. ಕಂನುಡಿಯ ಶಾಸನಗಳಿಗಿಂತ ಸಂಸ್ಕೃತ ಶಾಸನಗಳೂ, ತಾಮ್ರಪಟಗಳೂ ಹೆಚ್ಚಾಗಿವೆಯೆಂದು ನನ್ನ ಗ್ರಹಿಕೆ. ಅಲ್ಲದೆ ರಾಷ್ಟ್ರಕೂಟರ ಕಾಲದಲ್ಲಿ ರಾಜಾಶ್ರಯವನ್ನು ಪಡೆದ ಸಂಸ್ಕೃತ ಪ್ರಾಕೃತ ಕವಿಗಳಿಗಿಂತ ಕಂನುಡಿಯ ಕವಿಗಳು ಹೆಚ್ಚಿದ್ದರೆಂದು ಹೇಳುವುದಕ್ಕೂ ಆಧಾರವಿಲ್ಲ. ಹೀಗಿದ್ದರೂ ರಾಷ್ಟ್ರಕೂಟರು ಮೂಲ ಕಂನಾಡವರೆಂಬುದು ಸುಳ್ಳಲ್ಲ. ಏಕೆಂದರೆ ಹೆಚ್ಚಾಗಿ ಹಿಂದಿನ ಕಂನಾಡ ರಾಜರ ವೈಶಿಷ್ಟ್ಯವೇ ಹೀಗಿದೆ.

ಡಾ. ಆಳತೇಕರ ಅಭಿಪ್ರಾಯದಂತೆಯೆ ರಾಷ್ಟ್ರಿಕರು ಕಂನಾಡ ಮೂಲ ಜನಗಳೇ ಆಗಿದ್ದರೆ, ಆ ಜನದ ಮೊದಲಿನ ಹೆಸರು 'ರಾಷ್ಟ್ರಿಕ'

ಎಂದು ಇರಲಾರದು. ಏಕೆಂದರೆ 'ರಾಷ್ಟ್ರಿಕ' ಎಂಬುದು ಸಂಸ್ಕೃತ ಪದ. ಕಂನಾಡ ಜನಗಳ ಮೂಲ ಹೆಸರು ಕಂನುಡಿಯದೇ ಆಗಿರಬೇಕೆಂಬುದು ಎಲ್ಲರೂ ಒಪ್ಪಬೇಕಾದ ಮಾತು. ಆದುದರಿಂದ 'ರಾಷ್ಟ್ರಿಕ' ವೆಂಬುದು ಮೂಲ ಕಂನುಡಿಯ ಯಾವುದೊ ಒಂದು ಪದದ ಭಾಷಾಂತರವಾಗಲಿಕ್ಕೆ ಬೇಕು. (ಏಕೆಂದರೆ ರೂಪಾಂತರವಾಗಿದೆಯೆನ್ನಲು ಅಲ್ಲಿ ಇಂಬಿಲ್ಲ). ರಾಷ್ಟ್ರಿಕ ವೆಂಬುದನ್ನು ಕಂನುಡಿಗೆ ತಿರುಗಿಸಿಕೊಂಡರೆ ಅದರ ಅರ್ಥವು 'ನಾಡವ' ಎಂದಾಗುವುದು. ನಾಡವರೆಂಬ ಜನಗಳೂ ನಮ್ಮಲ್ಲಿ ಉಂಟು. ಅವರು ವೀರ-ಬಂಟರು. 'ನಾಯಕ' ವೆಂಬುದು ಅವರಲ್ಲಿ ಹುಟ್ಟಿನೊಡನೆ ಬಂದ ಪದವಿ! ವೀರ ಜನ ಒಂದು ಕಾಲಕ್ಕೆ ಅರಸು ಕುಲದವರಾಗಿ ವೈಭವದೆಶೆಯಲ್ಲಿ ಮೆರೆದವರೆಂಬುದಕ್ಕೆ ಇಂದಿಗೂ ಇರುವ ಅವರ ನಡೆವಳಿ, ನುಡಿವಳಿಯೆ ಸಾಕ್ಷಿ. ವಿನ್ಸೆಂಟಸ್ಮಿತ್‌ರ ಅಭಿಪ್ರಾಯದಂತೆಯೂ ರಾಷ್ಟ್ರಿಕರು-ರಾಷ್ಟ್ರಕೂಟರು indigenous. ಆದಕಾರಣ ಇವರು ನಾಡವರೆಂಬುದು ನಿಶ್ಚಿತ. ರಾಷ್ಟ್ರಿಕ ವೆಂಬ ಮಾತು ರಟ್ಟವೆಂದು ಬಳಕೆಯಲ್ಲಿ ಬಂದಿತು. ಸಂಸ್ಕೃತ ಶಾಸನಗಳಲ್ಲಿ ಸಹ ರಟ್ಟವು ನುಸುಳಿಕೊಂಡಿದೆ ಆ ರಟ್ಟನೆಂಬ ಜನವೆ ಇಂದಿನ ರಡ್ಡಿಗಳು. ರಡ್ಡಿಗಳಲ್ಲಿ ಮತ್ತು ನಾಡವರಲ್ಲಿ ತುಂಬ ಹೋಲಿಕೆಯಿದೆ. ಇವರ ಆಚಾರಾದಿ ಗಳಲ್ಲಿ ಸಹ ಒಂದು ತನವನ್ನು ಕಾಣಬಹುದು. ಇವರೆಲ್ಲರೂ **ಗಿರಿಯ** (ವೆಂಕಟರಮಣನ) ಒಕ್ಕಲು. ಹಟ್ಟಿಕಾರರ ಪರ್ವತ ಪೂಜೆಯ ವೈಶಿಷ್ಟ್ಯ ವನ್ನೆ ಇಲ್ಲಿಯೂ ಕಾಣಬಹುದು.

### ರಡ್ಡಿಗಳೂ ಕುಡುವರೂ ನಾಡವರೂ

ಎಂಥೊವೆನರು ರಡ್ಡಿಗಳನ್ನು ಕುರಿತು ಹೀಗೆ ಬರೆದಿರುವರು: Raddis, another large cultivating caste, have a tradition that they were once connected with the Kudvakkalas which seems probable. (vol. II- p. 272) ಇವರು ರಾಷ್ಟ್ರಕೂಟರ ಸಂಬಂಧಿ ಗಳೆಂಬುದು ನಿಜವಿರಬೇಕೆಂಬುದನ್ನೂ ಎಂಥೊವೆನ್‌ರು ಒಪ್ಪಿಕೊಂಡಿದ್ದಾರೆ. ರಡ್ಡಿಗಳು ಪೂಜ್ಯರೆಂದೂ ಮೂಲ ವಂಶಜರೆಂದೂ ಹೇಳುವ ಹೇಮರಡ್ಡಿ ಮಲ್ಲಮ್ಮನಿಗೆ ಒಬ್ಬ ತಮ್ಮನಿದ್ದು ಆ ತಮ್ಮನ ಹೆಸರು ಕುರುಬರನ್ನು ಸೂಚಿ ಸುವ ಸಾಂಕೇತಿಕ ಪದವಾಗಿರಬೇಕೆಂದು ತೋರುತ್ತದೆ. ಕುಲ ಪರಂಪರೆ

ಗಳನ್ನು ನಿರೀಕ್ಷಿಸಿದರೆ ಇವರು ಕುಡು–ಒಕ್ಕಲರ ಸಂಬಂಧಿಗಳೆಂದೂ, ಕುರುಬರಿಗೆ ಹತ್ತಿರದವರೆಂದೂ ಕಂಡುಬರುವುದು ಮದುವೆಯ ಕಾಲಕ್ಕೆ ನಡೆವ ಹಾಲುಗಂಬವು, ಹಾಲು ಮತದವರೊಡನೆ ಇದ್ದ ಇವರ ಆರಂಭದ ಸಂಬಂಧವನ್ನು ಸೂಚಿಸುತ್ತದೆ (III. p. 259)

ಪೂರ್ವಪರಂಪರೆ, ಕುಲವೃತ್ತಾಂತಗಳಿಂದ ಕುಡುವರು, ನಾಡವರು ಮತ್ತು ರಡ್ಡಿಗಳು ಒಂದೇ ಬುಡಕಟ್ಟಿನವರೆಂಬುದು ತಿಳಿದು ಬರುತ್ತದೆ. ಹಟ್ಟಿಕಾರ–ದನಗಾರಿಕೆಯಿಂದ ಮುಂದಿನ ಮಟ್ಟದಲ್ಲಿ ವಿಕಾಸವಾಗುತ್ತ ಈ ಜನಗಳ ಬೇರುಗಳು 'ಕುರುವ' ಕುಲದವರೆಗೂ ಹೋಗಿ ಮುಟ್ಟುತ್ತವೆ. ಯದು–ತುರ್ವರ, ಕುಂತಿಭೋಜರ ಸಂಬಂಧಿಗಳೆಂಬ ಮಾತು, ಅದನ್ನೇ ಪೌರಾಣಿಕ ರೀತಿಯಲ್ಲಿ ವ್ಯಕ್ತಪಡಿಸುತ್ತದೆ.

## ಗುಜರಾತ, ಕರ್ನಾಟ, ಬಂಗಾಲಗಳಲ್ಲಿ ರಾಷ್ಟ್ರಕರು

ರಾಷ್ಟ್ರಕರ ಹೆಸರಿನ ಇನ್ನುಳಿದ ಕೆಲವು ಸ್ಥಳಗಳನ್ನು ಗಮನಿಸಿದರೆ ಕರ್ನಾಟವು ಇವರ ಮಧ್ಯವರ್ತಿಯಾದ ನೆಲೆವೀಡೆಂದು ಕಂಡು ಬರುವುದು. ಗುಜರಾತಿನಲ್ಲಿ ಸೌರಾಷ್ಟ್ರವೆಂಬ ಹೆಸರು ರಾಷ್ಟ್ರಕರಿಂದಲೆ ಬಂದುದೆಂದು ಡಾ. ಜಯಸ್ವಾಲರು 'ಹಿಂದೂ ಪೊಲಿಟಿ' ಎಂಬ ಗ್ರಂಥದಲ್ಲಿ ಹೇಳುತ್ತಾರೆ. ಲಾಟವೆಂದೂ ಗುಜರಾತಿನ ಒಂದು ಭಾಗಕ್ಕೆ ಹೆಸರಿದ್ದಿತು. ಲಾಟವು ಮೂಲಪದವಲ್ಲವೆಂಬುದು ಎಲ್ಲರೂ ಒಪ್ಪುತ್ತಾರೆ. ರಾಟ–ರಾಡವು ಇದರ ಮೂಲ ಪದವಾಗಿದ್ದು ಅದು ರಟ್ಟರ ಒಂದು ಕಾಲದ ನೆಲೆವೀಡಾಗಿದ್ದಿತೆಂದು ಬಲ್ಲಿದರ ಅಭಿಪ್ರಾಯವಿದೆ. ನಾಟವು ಲಾಟದ ಮೂಲ ಪದವೆಂದು ಗ್ರಹಿಸಿದರೆ ಇದು ನಾಡವರ ನಿವಾಸವೆಂದು ಹೇಳಬೇಕಾಗುವುದು. ನಾಡವರದೆಂದರೂ ಒಂದೇ. ರಾಷ್ಟ್ರಕರದೆಂದರೂ ಒಂದೇ. ಆದಕಾರಣ ಈ ಭಾಗವು ಒಂದು ಕಾಲಕ್ಕೆ ಕರ್ನಾಡವರ ಬೀಡಾಗಿದ್ದಿತೆಂಬುದು ಯಾವ ಬಗೆಯಿಂದ ನೋಡಿದರೂ ಕಂಡುಬರುವುದು.

ಬಂಗಾಳದಲ್ಲಿ ಗೌಡವೆಂಬ ಹೆಸರಿದ್ದಂತೆ 'ರಾಢ'ವೆಂದೂ ಒಂದು ಪ್ರದೇಶಕ್ಕೆ ಸಂಜ್ಞೆಯಿದ್ದುದು ಹಳೆಯ ಗ್ರಂಥಾಂತರಗಳಿಂದ ಕಂಡುಬರುತ್ತದೆ. 'ಗೌಡಂ ರಾಷ್ಟ್ರಮನುತ್ತಮಂ ನಿರುಪಮಾ ತತ್ರಾಪಿ ರಾಢಾಪುರೀ' (ಪ್ರಬೋಧ ಚಂ.). ಈ ಹೆಸರು ಬರಲು ಕಾರಣರಾದ ರಾಢರು ರಟ್ಟವಂಶಿ

ಗಳಾಗಿರಬೇಕು. ಗೌಡದೇಶ; ರಾಢಾಪುರಿ: ಹಟ್ಟಿ, ಪೊಲ, ಊರು ಎಂಬ ಗ್ರಾಮಗಳು! ಇಂತಿವೆಲ್ಲವೂ ಬಂಗಾಳದಲ್ಲಿ ಮೊದಲಿಗರಾಗಿದ್ದ ಕಂನಾಡವರ ಕುರುಹುಗಳೆಂದೇ ಹೇಳಿದರೆ ತಪ್ಪಾದೀತೆ?

## ರಾಷ್ಟ್ರಿಕರು ಮರ್ಹಾಟಕ್ಕೆ ಹೊರಗಿನವರಲ್ಲ

ಸೌರಾಷ್ಟ್ರದಿಂದ ರಾಢ(ಬಂಗಾಳ)ದ ವರೆಗೆ ಹಬ್ಬಿದ ರಾಷ್ಟ್ರಿಕರ ಮಧ್ಯವರ್ತಿಯಾದ ನೆಲೆವೀಡು ಮರ್ಹಾಟವಾಗಿದ್ದಿತೆಂಬುದು ಗೊತ್ತಾಗದೆ ಹೋದುದರಿಂದ ರಟ್ಟರ ಇತಿಹಾಸದಲ್ಲಿ ಡಾ. ಅಳತೇಕರರಿಗೆ ಒಂದು ಮಾತಿನ ಅರ್ಥವೆ ಆಗದೆ ತೊಡಕಿನಲ್ಲಿ ಬಿದ್ದುದು ಕಂಡುಬರುತ್ತದೆ. ರಾಷ್ಟ್ರಕೂಟರ ತೀರ ಹಳೆಯ ಶಾಸನಗಳು ಮಧ್ಯಪ್ರಾಂತದಲ್ಲಿ ದೊರೆಯುತ್ತವೆ. ಆದರ ಮುಂದಿನ ಕಾಲದಲ್ಲ ಮಳಖೇಟದ ಮನೆತನವು ಪ್ರಸಿದ್ಧಿಯನ್ನು ಹೊಂದಿದೆ. ಕಾಲಕ್ರಮದಲ್ಲಿ ಹೇಳುವುದಾದರೆ, ಕ್ರಿ. ಶ. ದ ೬ನೆಯ ಶತಮಾನದ ಮೊದಲಿನಿಂದ ಮರ್ಹಾಟದ ಕಡೆಗೆ ನೆಲಸಿದ್ದ ರಾಷ್ಟ್ರಕೂಟವಂಶದ ಒಂದು ಮನೆತನವು ಮಳಖೇಟದಲ್ಲಿ ೮ನೆಯ ಶತಮಾನದಲ್ಲಿ ವಿಶೇಷ ಖ್ಯಾತಿಯನ್ನು ಹೊಂದಿತು, ಎಂದು ವರ್ಣಿಸುವುದು ಸಮಂಜಸವಾಗಿದೆ.

ಆದರೆ, ರಾಷ್ಟ್ರಕೂಟರು ಕಂನಾಡವರು, ಎಂದು ನಿಶ್ಚಿತವಾಗಿರುವುದರಿಂದ ಅವರ ಮೂಲ ಮನೆತನವು ಮರ್ಹಾಟ–ಮಧ್ಯಪ್ರಾಂತದತ್ತ ಇರುವುದು ಅಸಂಭವ. ಇದು ಕಂನಾಡಿನಲ್ಲಿಯೆ ಮೊದಲು ತಲೆದೋರಿರಬೇಕು. ಆದ ಕಾರಣ ರಾಷ್ಟ್ರಕೂಟರು ಮರ್ಹಾಟದ ಕಡೆಗೆ ಹೊರಗಿನಿಂದ ಹೋಗಿ ನೆಲಸಿದ್ದರೆಂದು ಡಾ ಅಳತೇಕರರು ಅರ್ಥಮಾಡುತ್ತಾರೆ! (Rashtrakutas and their Times p 4). ಕ್ರಿ. ಶ. ೬ನೆಯ ಶತಮಾನದಲ್ಲಿ ಮರ್ಹಾಟವಲ್ಲಿ (ಕಂನಾಡವರಾದ) ರಾಷ್ಟ್ರಕೂಟರು ಇದ್ದರೆಂಬುದಂತೂ ತಾಮ್ರಪಟಗಳಿಂದ ನಿಶ್ಚಿತವಾಗಿದೆ. ಮರ್ಹಾಟದಲ್ಲಿ ಕಾಣಿಸಿಕೊಳ್ಳುವ ಈ ರಾಷ್ಟ್ರಕೂಟರು ಕಂನಾಡವರಿರುವ ಸಂಭವವೇ ಇಲ್ಲವೆಂದು ಡಾ. ರಾಮಕೃಷ್ಣ ಗೋಪಾಳ ಭಂಡಾರಕರರ ಆಗ್ರಹ! ರಾಷ್ಟ್ರಿಕರು ಅಥವಾ ರಾಷ್ಟ್ರಕೂಟರು ಕಂನಾಡವರೆಂಬ ಬಗೆಗೆ ಡಾ. ಅಳತೇಕರರಿಗೆ ಸಂದೇಹವೇ ಇಲ್ಲ. ಇನ್ನು, ರಾಷ್ಟ್ರಕೂಟರ ತೀರ ಮೊದಲಿನ ಶಾಸನಗಳು ಮರ್ಹಾಟದ ಕಡೆಗೇ ಸಿಕ್ಕುತ್ತಿರುವುದೂ ಸುಳ್ಳಲ್ಲ. ಪ್ರತ್ಯಕ್ಷ ಅನುಭವಕ್ಕೆ ಒಂದು ಮಾತು. ಆದರೆ ದಕ್ಷಿಣದಿಂದ–ಇಂದಿನ

ಕಂನಾಡಿನಿಂದ ಕರ್ನಾಟಕಕ್ಕೆ ರಾಷ್ಟ್ರಕೂಟರು ನೆಲಸಲು ಹೋದುದಕ್ಕೆ ಐತಿಹಾಸಿಕ ಆಧಾರಗಳು ದೊರೆಯುತ್ತಿಲ್ಲ. ಸೊರಗಿ, ಕೊರಗಿ, ಬಡವಾದ ಇಂದಿನ ಕಂನಾಡ ಪಾಡನ್ನು ನೆನೆದು ಕರ್ನಾಟದಲ್ಲಿ ರಾಷ್ಟ್ರಕೂಟರ ಮೂಲ ಮನೆತನಗಳು ಇರುವುದು ಸಾಧ್ಯವೇ ಇಲ್ಲವೆಂದು ನಿರ್ಣಯಿಸುವು ದರಿಂದ ಇದೆಲ್ಲ ಗೊಂದಲಕ್ಕೆ ಕಾರಣವಾಗಿದೆ. ಇದಕ್ಕಿಂತಲೂ, ಒಂದು ಕಾಲದಲ್ಲಿ ಕರ್ನಾಟವೂ ಕಂನಾಡ ಭಾಗವಾಗಿದ್ದಿತೆಂದು ಬಗೆದರೆ ಡಾ. ಅಳತೇಕರ ಪ್ರಭೃತಿಗಳಿಗೆ ಉಂಟಾಗಿರುವ ತೊಡಕು ಸಹಜವಾಗಿ ಬಿಟ್ಟು ಹೋಗುತ್ತದೆ.

ಕರ್ನಾಟವು ಕಂನಾಡ ಭಾಗವಾಗಿದ್ದಿತೆಂಬುದಕ್ಕೆ ಅನೇಕ ಆಧಾರ ಗಳಿವೆ. ಕಂನಾಡಿಗಿರುವ ಕುಂತಲವೆಂಬ ಪರ್ಯಾಯ ನಾಮವು ಕರ್ನಾಟಕ್ಕೂ ಒಂದು ಕಾಲಕ್ಕಿತ್ತು. ರಾಜಶೇಖರಾದಿಗಳ ಸಂಸ್ಕೃತ ಗ್ರಂಥಗಳಲ್ಲಿ ಇದಕ್ಕೆ ಆಧಾರವಿದೆ. ಕರ್ನಾಟವು ಹಟ್ಟಿಗಳ ನಾಡೆಂದು ಈ ಮೊದಲೆ ವಿವರಿಸಿದೆ. ಅಲ್ಲಿ ಪಾಟೀಲರು, ದೇಶಮುಖರು ಹಟ್ಟಿಕಾರರು. ದೇಶದ ಹೆಸರು ವರಹಟ್ಟ. ಕೊರಬು (ಕುರುಬ), ಹಳಬರು ಎಲ್ಲ ಹಳ್ಳಿಗಳ ಆಯಗಾರರೂ ಆದ ನಾಡು ಕಂನಾಡೆಂದು ಸಿದ್ಧಪಡಿಸಲು ಬೇರೆ ಆಧಾರಗಳು ಬೇಕೆ? ಅಲ್ಲಿ ಇಂದು ಕಂನುಡಿ ಕೇಳಬರುವುದಿಲ್ಲ. ಆದರೆ ಅಲ್ಲಿಯ ಜನಗಳ ಭಾಷೆಯಲ್ಲಿ ಕಾಣಬರುವ ಕಂನುಡಿಯ ಪ್ರಭಾವದ ಅರ್ಥವೇನು? ಅಲ್ಲಿ ಒಂದು ಕಾಲದಲ್ಲಿ ಇದು ಜನದ ಭಾಷೆಯಾಗಿದ್ದಿತೆಂದು ಗ್ರಹಿಸದೆ ಹೋದರೆ, ಮರ್ನಾಟಿಯಲ್ಲಿ ಕಂನುಡಿಯ ಅನೇಕ ಧಾತುಗಳು, ನಾಮಾದಿ ಪ್ರಯೋಗ, ಪಡೆನುಡಿಗಳು ಇರುವ ಕಾರಣವೇನು? ಮರಾಟದವರೆಗಿದ್ದ ಕಂನುಡಿಯು ಮಾಯವಾದುದಕ್ಕೆ ಡಾ. ಗ್ರಿಯರಸನರು ಇನ್ನೊಂದೆಡೆಗೆ ಹೇಳಿದ ಕಾರಣವೇ ಇಲ್ಲಿಯೂ ಸರಿ ಹೋಗುತ್ತದೆ. 'ಆರ್ಯ ಮತ್ತು ದ್ರಾವಿಡ'ಗಳ ಸಂಪರ್ಕವುಂಟಾದಾಗ ಯಾವಾಗಲೂ ಆರ್ಯವರ್ಗದ ಭಾಷೆಯೆ ಪ್ರಭಾವಿಯಾಗಿ ಉಳಿದು ದ್ರಾವಿಡ ವರ್ಗದ ನುಡಿಯು ಮೂಲೆಗುಂಪಾದುದೇ ಕಂಡುಬರುತ್ತದೆ.' ಈ ಕಾರಣ ದಿಂದಲೆ ಕಂನಾಡು ದಿನದಿನಕ್ಕೂ ಕ್ಷೀಣವಾಗಿ ಈ ಪಾಡು ಬಂದಿದೆ.

### ಮಧ್ಯಭಾರತದ ಒಕ್ಕಲರೂ ನಾಡವರೂ

ಸೌರಾಷ್ಟ್ರ, ಕರ್ನಾಟ, ರಾಢ (ಬಂಗಾಳ)ದ ವರೆಗೆ ರಾಷ್ಟ್ರಿಕರು

ಹಬ್ಬಿದ್ದರೆಂಬುದು ಸ್ಥಳದ ಹೆಸರುಗಳಿಂದಲೂ, ಐತಿಹಾಸಿಕ ಆಧಾರಗಳಿಂದಲೂ ನಿಶ್ಚಿತವಾಗುತ್ತದೆ. ಉತ್ಕಲದಲ್ಲಿ ಒಕ್ಕಲಾದ ಮೂಲ ಜನವೂ ಡಾ. ಬಾರ್ನೆಟರ ಊಹೆಯಂತೆ ಕರ್ನಾಡವರೆ ಆಗಿರಬೇಕು. ನಾಗಪೂರ ಭಾಗದ ಜನಗಣನೆಯಲ್ಲಿ ಒಕ್ಕಲರೆಂಬ ಹೆಸರಿನ ಜನಗಳು ಸ್ವಲ್ಪ ಈಗಲೂ ಅಲ್ಲಿ ಉಳಿದುದು ಕಂಡುಬಂದಿದೆ.

ಈ ಕಾರಣದಿಂದ, ಹಟ್ಟಿಕಾರರು, ಕುಡು–ಒಕ್ಕಲುತನಕ್ಕೆ ಮಾರ್ಪಡುತ್ತಿದ್ದುದರ ಕುರುಹುಗಳು ಉತ್ತರಾಪಥದಲ್ಲಿಯೂ ದೊರೆಯುತ್ತವೆಯೆಂದು ಹೇಳಬೇಕಾಗುತ್ತದೆ. ಗುಜರಾತಿಯ ಕಣಬಿ, ಮರಾಠಿಯ ‘ ಕುಳವಾಡಿ ’ ‘ ಕುಣಬಿ ’ ಗಳು non Aryan ಎಂದು ಸಂಶೋಧಕರ ಅಭಿಪ್ರಾಯವಿದೆ.

ರಾಷ್ಟ್ರಕೂಟರ ಶಾಸನಗಳಲ್ಲಿ ಅವರಿಗೆ ‘ ಕುಟುಂಬಿ’ಗಳೆಂದು ಕೆಲವೆಡೆಗೆ ಹೇಳಿದೆ. ನೇಗಿಲ ಚಿಹ್ನವು ಶಾಸನಗಳ ಮೇಲ್ಭಾಗದಲ್ಲಿದ್ದುದೂ ಕಂಡುಬರುತ್ತದೆ. ಈ ಕಾರಣದಿಂದ ರಾಷ್ಟ್ರಕರು–ಒಕ್ಕಲರು–ಕುಡುವರೆಂದು ಹೇಳಲು ಅಡ್ಡಿಯಿಲ್ಲ ರಡ್ಡಿಗಳೂ ನಾಡವರೂ ಇದೇ ಬಗೆಯಾಗಿ ಕುಡುವರು–ಒಕ್ಕಲರಾಗಿದ್ದರೆಂದು ಹಿಂದೆ ಹೇಳಿದೆ.

ಬಂಗಾಳ, ಗುಜರಾತಗಳಲ್ಲಿ ‘ ನಡಿಯಾ’ ಎಂಬ ಸ್ಥಲವಾಚಕ ಹೆಸರುಗಳಿವೆ. ‘ನಾಡಗಾವ’ ಎಂಬ ಗ್ರಾಮ ನಾಮಗಳು ಮಹಾರಾಷ್ಟ್ರದಲ್ಲಿವೆ. ಕೊಂಕಣದಲ್ಲಿ ನಾಡಸೂರ ಎಂಬ ಬಗೆಯ ಊರುಗಳಿವೆ. ವಿಜಾಪೂರ ಜಿಲ್ಹೆಯಲ್ಲಿ ‘ ನಾಡ’ ಎಂಬ ಹೆಸರಿನ ಎರಡು ಹಳ್ಳಿಗಳಿವೆ ಇಷ್ಟೂ ದಕ್ಷಿಣ ಭಾಗದಲ್ಲಿ ಇಂತಹ ಊರುಗಳು ಉಂಟೆಂದು ಹೇಳುವ ಕಾರಣವಿಲ್ಲ.

## ಕುಡುವ, ನಾಡವ, ರಟ್ಟರ ಎಡೆಗಳು

ಕೊಡಗು ನಾಡಿಗೆ ಕುಡಗು ಎಂದೂ ಹೆಸರಿದೆ. ಇದು ಕುಡುವರ ಎಂದರೆ ಒಕ್ಕಲರ ನಾಡೆಂದು ಅರ್ಥಕೊಡುವುದು. ತುರುಕಾರರಿದ್ದ ಕಾಲದ ವಸಾಹತು ತುಳುನಾಡು, ಪಾಡಿ, ಹಟ್ಟಿಗಳು. ಅದರಂತೆ ಕಾಡುಕಡಿದು, ಒಕ್ಕಲತನದ ಮಟ್ಟದಲ್ಲಿ ಆದ ವಸಾಹತು ಕುಡುಗು (ಕೊಡಗು), ಎಂದು ಹೇಳಿದರೆ ತಪ್ಪಾಗದು. ಕುಡಿಗೆರೆ, ಕುಡುಗೆರೆ, ಕುಡಿಬೂರು, ಕುಡಿಗವೂರು, ಕುಡಹಳ್ಳಿ, ಕುಡುಮ ವಿಷಯ ಮುಂತಾದುವು ಇದೇ ಬಗೆಯಾದ ಕುಡುವರ ನೆಲೆಗಳಾಗಿವೆ.

ಇವರೆ ನಾಡಗೌಡರಾಗಿ, ರಾಷ್ಟ್ರಕರು, ರಟ್ಟರೆಂದು ಹೆಸರಾದ ಕಾಲದ ಇವರ ನೆಸಹು ಕೊಡುವ ಹಲವು ಊರುಗಳು ನಮ್ಮ ನಾಡಿನಲ್ಲಿವೆ. ಲಟ್ಟಲೂರು (ಲಾತೂರು), ರಟ್ಟಿಹಳ್ಳಿ, ರಡ್ಡೇರಹಟ್ಟಿ, ರಟ್ವಾಡಿ (ದ. ಕ), ರಟ್ಟಪಾಡಿ, ಲಾಟವಾಡಿ, ಲಾಟಗಾವ ಮೊದಲಾದುವು ಈ ಬಗೆಯವು.

---

## ೮. ನೆಲದ ಪಾಡು

ಎಡೆಗಳ ಹೆಸರುಗಳಿಂದ ಜನದ ಪಾಡಿನಂತೆ, ನೆಲದ ಪಾಡೂ (ಎಂದರೆ ಭೌಗೋಲಿಕ ವಿಚಾರವೂ) ಎಷ್ಟೋ ಗೊತ್ತಾಗುವುದು. ಅದು ಎಡೆಗಳ ಹೆಸರಿನಲ್ಲಿಯೆ ಅಡಕವಾಗಿರುತ್ತದೆ. ಕಂನುಡಿಯು ತಿರುಳು ತಿಳಿಯುದ್ದರಿಂದ ಹಲವೆಡೆಯಲ್ಲಿ ಅದರ ಸೊಗಸಿಗೆ ಎರವಾಗಬೇಕಾಗಿದೆ. ಇವು ಜನಗಳಲ್ಲಿ ವಿಚಾರ, ಚರ್ಚೆ, ವಿಮರ್ಶೆಗಳು ಬೆಳೆದಂತೆ ಬಂದ ಹೆಸರುಗಳು. ಆದುದರಿಂದ ಬಹುಮಟ್ಟಿಗೆ ಅರ್ವಾಚೀನ.

ದೇಶದ ವಿಭಾಗಗಳಿಗೆ ಬಂದ ಹೆಸರಿನಲ್ಲಿ ಭೌಗೋಲಿಕ ಸ್ಥಿತಿಗತಿಯು ಅರ್ಥವು ಅಳವಟ್ಟಿರುತ್ತದೆ. ಉದಾ: ಬೆಳುವೊಲ, ಮಲೆನಾಡು; ಬೆಳುವೊಲದ ನಾಡಿಗೆ ಬಯಲು ಸೀಮೆಯೆಂದೂ ಹೆಸರಿದೆ; ಎರೆಸೀಮೆಯೆಂದೂ ಕೆಲಬಾರಿ ಹೇಳುವುದುಂಟು. 'ಮಲೆ' ಎಂಬುದರ ಅರ್ಥವನ್ನು ಸಾಮಾನ್ಯ ಜನವು ಮರೆತಿರುವುದರಿಂದ ಅದರ ಅರ್ಥದ ಸೊಗಸು ಬಹುಜನರಿಗೆ ತಿಳಿಯದಾಗಿದೆ. ಮಲೆನಾಡನ್ನು ಮಲ್ನಾಡ, ಎಂದು ಹೇಳುವುದಕ್ಕೆ ಇದೇ ಕಾರಣ. ಮಲೆಯೆಂದರೆ ಗುಡ್ಡ, ಪರ್ವತ. ಮಲೆನಾಡೆಂದರೆ ಪರ್ವತ ಪ್ರದೇಶ. ಮಾಡ, ಮಾಳ, ಮರಡಿ, ಮಡ್ಡಿ ಎಂಬ ಪದಗಳೂ ಮಲೆಯ ಬಳಗದ ನುಡಿಗಳಾಗಿವೆ. ಮಧ್ಯಹಿಂದುಸ್ತಾನದಲ್ಲಿ 'ಮಾಳವಾ' ಎಂಬುದು ಎತ್ತರವಾದ ಪ್ರದೇಶ, ಗುಡ್ಡದ ನಾಡಾಗಿದೆ. ಮಲೆಯ ಅರ್ಥ ತಿಳಿಯದೆ ಮಾಳವಾ ಎಂಬ ಹೆಸರಿನ ಸಾರ್ಥಕತೆಯು ಅಲ್ಲಿ ತಿಳಿಯದು ಮಹಾರಾಷ್ಟ್ರದಲ್ಲಿ 'ಮಾವಳ' ಎಂಬುದು ಸಹ್ಯಾದ್ರಿಯ ಬಳಿಯ ಒಂದು ತಾಲ್ಲೂಕು ಪುಣೆ ಜಿಲ್ಹೆಯಲ್ಲಿ; ಮಾವಳಣೆ ಎಂದರೆ ಮುಳುಗು ಅಸ್ತಂಗತನಾಗು ಎಂದು ಆರಿಯ ಮಾತಿನಲ್ಲಿ ಅರ್ಥವಿದೆ. ಆ ತೆರನಾಗಿ 'ಮಾವಳ' ಎಂಬುದಕ್ಕೆ ಪಶ್ಚಿಮದ ಊರು,

ಪಡುವಣ ಎಡೆ ಎಂಬರ್ಥವನ್ನೂ ಮಾಡಬಹುದು. ಆದರೆ ಅದೇ ಭಾಗದಲ್ಲಿ 'ಮಾಲಾಡ' ಊರುಂಟು. ಅದೂ ಗುಡ್ಡದ ಭಾಗ. ಆದಕಾರಣ ಮಲೆನಾಡೆಂದು ಅದಕ್ಕೆ ಅರ್ಥ ಹೇಳದೆ ಗತಿಯಿಲ್ಲ.

ಮಾಡ ಎಂದರೆ ಎತ್ತರ, ಉಪ್ಪರಿಗೆ; ಚಾರಮಾಡಿ ಎಂದು ಮುಂತಾದ ಎಡೆಗಳಲ್ಲಿ ಮಾಡವು ಕಾಣಿಸಿಕೊಳ್ಳುವುದು. ಮಾಳಗುಡ್ಡ, ಮಾಳಮರಡಿ ಎಂಬ ದ್ವಿರುಕ್ತಿಗಳು ಬಳಕೆಯಲ್ಲಿ ಬಂದುದು, ಇಲ್ಲಿ 'ಮಾಳ' ಶಬ್ದದ ಮೂಲಾರ್ಥದ ಅರಿವು ಕಡಿಮೆಯಾದುದರ ಕುರುಹು. ಮಾಳದ ಮೂಲಾರ್ಥವು ತಿಳಿದಿದ್ದರೆ ಮತ್ತೆ ಅದರ ಮುಂದೆ ಅದೇ ಅರ್ಥದ ಗುಡ್ಡ ಅಥವಾ ಮರಡಿ ಎಂಬುದನ್ನಿಡುವ ಸಂಭವವಿಲ್ಲ.

ಕುಪ್ಪ, ಕುಪ್ಪೆ, ಗುಪ್ಪೆ, ಕೊಪ್ಪ ಎಂಬುದು ಮಾಳ ಎಂಬರ್ಥದ ಎತ್ತರಪ್ರದೇಶವನ್ನು ಸೂಚಿಸುವ ಇನ್ನೊಂದು ನುಡಿಗಡಣ. 'ಕುಪ್ಪು' ಎಂದರೆ ಪುಂಜೀಕರಣನೆಂದು ಅರ್ಥವಿದೆ, (ಶ. ಮ. ದ.). ಕುಪ್ಪ, ಕುಪ್ಪೆ, ಗುಪ್ಪೆ, ಕೊಪ್ಪಗಳು ಮೂಲದಲ್ಲಿ ಗುಪ್ಪು, ಗುಂಪು, ಗುಡ್ಡು ಎಂಬರ್ಥವುಳ್ಳವುಗಳಾಗಿವೆ. ಕೋಪಣನಗರವೆಂದು ಹೆಸರಾಂತ ಕೊಪ್ಪಳದಲ್ಲಿ ಗುಡ್ಡವಿದ್ದುದು ಸರಿಯಾದುದೇ ಆಗಿದೆ. ಸಾಂಗಲಿಯ ಹತ್ತರ 'ಕೂಪವಾಡ, ವೆಂದು ಕರೆಯಲ್ಪಡುವ ಮಾಳವಿದೆ. ಎತ್ತರವಾದ ಈ ಪ್ರದೇಶಕ್ಕೆ ಕುಪ್ಪವಾಡವೆಂದು ನಿಜವಾದ ಹೆಸರು ಆದರೆ ದ್ವಿತ್ವವನ್ನು ಉಚ್ಚರಿಸಲು ಅರಿಯು ಮಾತಿನವರಿಗೆ ತೊಂದರೆಯಾಗುತ್ತದೆ. ಆದಕಾರಣ ಕಪ್ಪುರ—ಕಾಪೂರವಾದಂತೆ ಕುಪ್ಪವು ಕೂಪವಾಯಿತು. ಕುಪ್ಪಗಲ್ಲು, ತಾಳಗುಪ್ಪೆ ಇಂತಿವೆಲ್ಲವೂ ಮಾಳದ ನೆಲಗಳು.

ಆದರೆ ಕೊಪ್ಪವೆಂಬುದು ಕೆಲವೆಡೆಗೆ ಊರ ಹರಹು, ನೆರೆಯು ಹಳ್ಳಿ ಎಂಬರ್ಥದಲ್ಲೂ ಬಳಕೆಯಲ್ಲಿ ಬಂದುದು ಕಂಡುಬರುವುದು.

ಕುಮರಿ, ಕುಂಬೆಗಳು ಗುಡ್ಡದ ಪ್ರದೇಶ, ಗುಡ್ಡದ ಬದಿಗೆ ಇರುವ ಊರು ಎಂಬರ್ಥವುಳ್ಳವುಗಳಾಗಿವೆ.

ಕುನ್ದ, ಗುನ್ದ, ಗೊನ್ದಿ, ಗೊಣ್ಡೆ, ಗೊನ್ದ ಎಂಬೀ ಒಳಗದ ನುಡಿಗಳು ಸ್ವಲ್ಪ ಎತ್ತರದ ಪ್ರದೇಶ, ಗುಡ್ಡದ ನೆರೆಯವೂರು ಎಂಬರ್ಥವುಳ್ಳವುಗಳಾಗಿವೆ. ತಮಿಳಿನಲ್ಲಿ ಕುನ್‌ಱು ಎಂಬ ಪದವು ಇದೇ ಅರ್ಥವುಳ್ಳದಾಗಿದೆ.

ನಮ್ಮ ನಾಡಿನ ಕುನ್ದ್ದರ (ನಾಡು), ಕುನ್ದರಿಗಿ ಎಂಬೀ ಸ್ಥಳಗಳು ಕುನ್‌ಱಿ ಎಂಬ ತಮಿಳ ರೂಪಕ್ಕೆ ಬಹಳ ಹತ್ತಿರದುವುಗಳಾಗಿವೆ.

ಕೂನು ಅಥವಾ ಗೂನು ಎಂದು ಬಾಗಿದುದಕ್ಕೆ, ವಕ್ರತೆಗೆ ಹೇಳುವುದುಂಟು. ಕುಳ್ ಅಥವಾ ಕುನ್ ಎಂಬುದು ಇದರ ಬೀಜಶಬ್ದ. ಕುಳ್—ಕುಳ್ಳಿ—ಗುಳ್ಳಿ; ಗುಂಡು, ಗುಡ್ಡೆ...., ಈ ಗೂನಿನ ಒಳಬದಿಯಿಂದ ನೋಡಿದರೆ ಅದು ತಗ್ಗು ಎಂಬರ್ಥ ಕೊಡುವುದು; ಹೊರಬದಿಯಿಂದ ಎತ್ತರವೆಂದಾಗುವುದು. ಹೀಗಿದು ಆಳ ಮತ್ತು ಎತ್ತರ ಎಂಬ ಎರಡೂ ಅರ್ಥಗಳನ್ನು ಸೂಚಿಸಬಲ್ಲುದಾಗಿದೆ. ಆದುದರಿಂದ ಇದರೊಳಗಿನ ಗುಂಡಿ, ಕುಂಟೆ ಎಂಬೀ ಕೆಲವು ನುಡಿಗಳು ಕೆರೆ, ಕೊಳ ಎಂಬರ್ಥವುಳ್ಳುವುಗಳಾಗಿವೆ.[1]

ಕುಂದ, ಗುಂದಗಳು ಇರುವ ಭಾಗದ ನಕ್ಷೆ ತೆಗೆಯಬೇಕು. ಇವು ಕಂನಾಡಿನ ಒಂದು ವಿಶಿಷ್ಟ ಭಾಗದಲ್ಲಿಯೆ ಹೆಚ್ಚಾಗಿವೆ. ಕುಂದಾಪುರ, ಕುಂದರಗೆ, ಹುನಗುಂದ, ಮುಳಗುಂದ, ನೀಲಗುಂದ, ನರಗುಂದ ಇಲ್ಲಿ ಎಲ್ಲೆಡೆಗೂ ಕುಪ್ಪ, ಗುಪ್ಪದಂತೆ ಎತ್ತರದ ಪ್ರದೇಶ, ಮರಡಿ, ಗುಡ್ಡವಿದ್ದುದುಂಟು. ಆದರೆ ರೋಣ ತಾಲೂಕಿನ (ಧಾ. ಜಿ.) ಸಿಡುಗುಂದದಂತಹ ಸ್ವಲ್ಪ ಸ್ಥಳಗಳಲ್ಲಿ ಇದಕ್ಕೆ ಅಪವಾದವನ್ನು ಕಾಣಬಹುದು. ತೀರ ಹತ್ತಿರ ಎಲ್ಲದಿದ್ದರೂ ಸಮೀಪದಲ್ಲಿ ಸ್ವಲ್ಪ ಮೈಲಿನ ಮೇಲೆ ಸಿಡುಗುಂದಿಗೆ ಗುಡ್ಡವುಂಟು. ಗುಂಡ, ಗುಂಡಿ, ಗೊಂದಿಗಳು ನಾಡಿನ ಇನ್ನೊಂದು ನಿಟ್ಟಿನಲ್ಲಿ ಕಾಣಿಸಿಕೊಳ್ಳುವುವು.

ಹೊಲಗಳೆಂದು ಹೇಳುವುದು ಬೆಳುವೊಲದ ವಿಶೇಷ; ಗದ್ದೆ ಮಲೆನಾಡಿನಲ್ಲಿ ಮುಖ್ಯ. ಗದ್ದೆಯೆಂದೊಡನೆ ಅಲ್ಲಿ ಬತ್ತವೆ ಮುಖ್ಯ ಬೆಳೆ. ಮಕ್ಕಿ, ಮೊಗರು, ಹಿತ್ತಿಲು, ಕಾಡು, ಕಳ ಇವೂ ಮಲೆನಾಡಿನ—ಕಂನಡ ಜಿಲ್ಲೆಯ ಎಡೆಗಳೆ. ಖೇಟಗಳು, ಖೇಡಗಳು ವಿಜಾಪುರದ ಕಡೆಗೆ ಇರುವುವಾದರೆ ಶೇತ ಕಾರವಾರದಲ್ಲಿ. ಪೊಳಲು, ಹೊಳಲು ಕಂನಾಡ ಎಲ್ಲ ಭಾಗದಲ್ಲೂ ಉಂಟು.

ಏರಿ, ಕಟ್ಟೆ, ಕೆರೆ, ಕುಂಟೆ, ಕೊಳ, ಕೊಳ್ಳಗಳು ದೇಶದ ವಿಶಿಷ್ಟ ಭಾಗದಲ್ಲಿಯೆ ಉಂಟೆಂದಲ್ಲ. ಆದರೂ ಕುಳಿ—ಗುಳಿ, ಗುಣಿಗಳು ಕನ್ನಡ ಜಿಲ್ಲೆಯತ್ತ ಹೆಚ್ಚು ಕಾಣುತ್ತವೆ.

ಕೊಂಬು, ಕೋಡುಗಳು ಪರ್ವತದ ಶಿಖರಗಳು; ಬಂಡಿ, ಕಲ್ಲು, ಶಿಲೆಗಳು ಗುಡ್ಡದ ಪ್ರದೇಶವೆಂದು ಅರ್ಥ ಮಾಡಬಹುದಾದರೂ, ಇವುಗಳಲ್ಲಿ ಕಲ್ಲು ಎಂಬುದು ಹಲವೆಡೆಗೆ ಅಪವಾದವಾಗಿ ಇದ್ದುದು ಕಂಡುಬಂದಿದೆ. ತೋರಗಲ್ಲು, ತೋರಣಗಲ್ಲುಗಳಲ್ಲಿ ಗುಡ್ಡವಿದ್ದರೆ, ಕೊಳಗಲ್ಲುಗಳಂತಹ ಎಡೆಯಲ್ಲಿ ಕೇವಲ ಬಯಲು ಇದ್ದುದುಂಟು ಕಲ್ಲು ಎಂದರೆ ಹರಳು ಎಂಬರ್ಥ ಮಾಡಬಹುದೇನೊ, ಅಂತಹ ಎಡೆಗಳಲ್ಲಿ. ಮಲೆನಾಡಿನಲ್ಲಿ ಬಯಲ ಊರುಗಳು ಅದೆಷ್ಟೋ ತಲೆದೋರಿದ್ದು ಸಹಜವಾಗಿದೆ.

ಹಳ್ಳ, ಹೊಳೆ, ತೊರೆ, ಕೆರೆ, ಸರೋವರ, ಸಮುದ್ರ, ಸಾಂದ್ರ, ಸಾಗರಗಳಿದ್ದಲ್ಲಿ ಜಲಾಶಯವುಂಟೆಂದು ಹೇಳಬೇಕಾದ ಕಾರಣವಿಲ್ಲ. ಆದರೂ ಸಮುದ್ರ ಮತ್ತು ಸಾಗರಗಳು ನಮ್ಮ ನಾಡಿನ ಕೆಲವೊಂದು ಭಾಗದಲ್ಲಿಯೆ ಇವೆ. ಮೈಸೂರ ಸೀಮೆಯಲ್ಲಿ ಇವು ವಿಪುಲವಾಗಿವೆ. ದ್ವಾರಸಮುದ್ರದ ಮಾದರಿಯಲ್ಲಿ ಉಳಿದ -ಸಮುದ್ರಗಳು ತಲೆಯೆತ್ತಿದುವೊ ಎಂಬುದು ಅಭ್ಯಸನೀಯವಾಗಿದೆ. ಇವು ಬಳ್ಳಾರಿ ಜಿಲ್ಹೆಯಲ್ಲಿವೆ. ಧಾರವಾಡ ಜಿಲ್ಹೆಯಲ್ಲಿ ಗದಗ ತಾಲೂಕಿನ ವರೆಗೆ ಮಲಸಮುದ್ರ ಮುಂತಾದ ಈ ಬಗೆಯ ಹೆಸರುಗಳಿವೆ. ಬೆಳಗಾವ ಜಿಲ್ಹೆಯಲ್ಲಿ ಪರಸಗಡ, ಬೈಲಹೊಂಗಲ ತಾಲೂಕಿನ ವರೆಗೆ ಅಕ್ಕಿಸಾಗರ ಮುಂ ಇಂತಹ ಹೆಸರನ್ನು ಕಾಣಬಹುದು. ಕನ್ನಡ ಜಿಲ್ಹೆ, ವಿಜಾಪೂರಗಳ ಕಡೆಗೆ ನನ್ನ ಕಣ್ಣಿಗೆ ಬಿದ್ದಿಲ್ಲ. ಇವುಗಳಲ್ಲಿ ಎಷ್ಟೋ ದ್ವಾರಸಮುದ್ರದ ಅನುಕರಣದಿಂದ ಉಳಿದ ಸಮುದ್ರ, ಸಾಗರಗಳು ತಲೆದೋರಿದ್ದರೆ ಅದು ಹೊಯಿಸಳರ ಕಾಲದ ಪ್ರಭಾವವೆಂದು ಹೇಳಬಹುದಾಗಿದೆ.

ಹಂಪೆಯ ಹೆಸರನ್ನು ಅನುಕರಿಸಿ ಅನೇಕ ಊರುಗಳು ತಲೆಯೆತ್ತಿದ್ದು ಆ ಕ್ಷೇತ್ರದ ಮಹಿಮೆಯೆ ಆಗಿದೆ. ಹಂಪಸಾಗರ (ಧಾ) ಹಂಪಿಹೊಳೆ (ರಾಮದುರ್ಗ), ಹಂಪಾಪಟ್ಟಣ (ಬ.), ಹಂಪಸಾಗರ (ಬ.), ಹಂಪಾದೇವನಹಳ್ಳಿ (ಬ.), ಹಂಪಾಪುರಂ (ಬ), ಮುಂತಾದುವುಗಳು ಇದಕ್ಕೆ ನಿದರ್ಶನ. ನಮ್ಮಲ್ಲಿಯ ಉಜ್ಜಯನಿ ಮತ್ತು ಸೋಮನಾಥಪುರಗಳೂ ಆ ಕ್ಷೇತ್ರದವಿಷಯಕ್ಕಿದ್ದ ಆತ್ಮೀಯತೆಯನ್ನೆ ಸೂಚಿಸುತ್ತವೆ.

ಊರ ಹೆಸರುಗಳಿಂದ ಕೆಲವೆಡೆಗೆ ನೆಲದ ಸ್ಥಿತಿ ತಿಳಿಯುತ್ತದೆ. ಕರ್ಲಕೊಪ್ಪ, ಎರೆಗಟ್ಟಿ, ಕರೆಕಟ್ಟಿಗಳು ಆ ಭೂಮಿಯನ್ನು ವರ್ಣಿಸುತ್ತವೆ ಕೆಸರ

ಕೋಡಿ, ಕೆಸರಕೊಪ್ಪ, ಕೊಳಚಿ, ಜಲದುರ್ಗ, ಜಲಗಡ್ಡೆ, ಸವುಳ ಹಳ್ಳಿಗಳು ತಾವಿದ್ದ ಎಡೆಯ ಬಗೆಯ ಸೂಚಕವಾಗಿವೆ. ಉಪ್ಪೂರು, ಉಪ್ಪಿನ ಅಂಗಡಿ, ಉಪ್ಪಿನ ಬೆಟ್ಟಗೆರೆಯಂತಹ ಎಡೆಗಳಲ್ಲಿ ಉಪ್ಪು ತೆಗೆವ ಕೆಲಸ ನಡೆಯುತ್ತಿದ್ದಿತೇನೋ ವಿಚಾರಾರ್ಹವಾದ ವಿಷಯ.

ಊರ ಪ್ರಾಕೃತಿಕ ಸ್ಥಿತಿಯು ತಿಳಿಯುವಂತೆ ಹಲವು ಹೆಸರುಗಳು ಅಲ್ಲಿಯ ಸಸ್ಯಾದಿಗಳ ಬೆಳೆಯನ್ನು ಹೇಳುವುವು.

ತುಳಸಗೇರಿ, ತುಳಸಾಪುರದಂತಹವು ಅಲ್ಲಿ ತುಳಸಿಯ ಗಿಡ ಬೆಳೆಯುವುದನ್ನು ಸೂಚಿಸುವುವು, ಎಂದು ತರ್ಕಿಸುವುದು ಸರಿಯಾಗಲಾರದು. ತುಳಸಿಯಲ್ಲಿರುವ ತಮ್ಮ ನಂಬುಗೆಯ ಸಲುವಾಗಿ, ಅದರ ಮೇಲಣ ಭಕ್ತಿ, ಪ್ರೀತಿಯಿಂದ ಇಟ್ಟ ಹೆಸರು ಎಂದು ಬಗೆಯುವುದೆ ಹೆಚ್ಚು ಸಮಂಜಸವಾಗಿದೆ. ಏಕೆಂದರೆ ತುಳಸಿ ಬೆಳೆಯದ ಪ್ರದೇಶವಿಲ್ಲ. ತೇಗೂರು ಎಂಬುದು ಹಾಗಲ್ಲ. ಬಯಲುಸೀಮೆಯಲ್ಲಿ ತೇಗು ಕಾಣದು. ಅದು ಮಲೆನಾಡಿನ ಮರ. ಆದಕಾರಣ ತೇಗೂರೆಂಬಲ್ಲಿ ಎಂತಹ ಭೂಮಿ, ಎಂತಹ ಹವಾಮಾನವು ಇದ್ದೀತೆಂಬುದನ್ನು ಆ ಊರಹೆಸರಿನಿಂದಲೆ ಕೆಲಮಟ್ಟಿಗೆ, ನಿರ್ಧರಿಸಲು ಬರುವುದು. ಜಾಲಿಕಟ್ಟೆ, ಜಾಲಿಕೊಪ್ಪ, ಬಾಬುಳಗಾವಗಳು ಬೆಳುವೊಲದಲ್ಲಿಯೆ ಬಹಳ. ಇದರಂತೆ ತಾವರಗೆರೆ, ತಾವರೆಗಟ್ಟೆಗಳು ಮಳೆಯು ಅಪರೂಪವಾಗಿರುವ ನೀರಿಲ್ಲದ ಪ್ರದೇಶದಲ್ಲಿ ಇರುವುದು ಸಾಧ್ಯವೆ?

ಕೆರೆ ಮತ್ತು ಕೇರಿ ಎಂಬೆರಡು ಪದಗಳಲ್ಲಿ ಆಗಾಗ ಅದಲುಬದಲು ಆಗುತ್ತಿರುತ್ತದೆ. ನುಗ್ಗೀ–ಕೆರೆಯೊ, ನುಗ್ಗೀಕೇರಿಯೊ? ಇಂತಹ ಸಂದರ್ಭಗಳಲ್ಲಿ ಕೆರೆಯೆಂಬುದೇ ಹೆಚ್ಚು ಇಷ್ಟವಾದುದೆಂದು ನನ್ನ ತಿಳುವಳಿಕೆ. ಕೆರೆಯಾದರೂ ನೀರಿಗಾಗಿ ಊರಿಗೆ ಬೇಕೇಬೇಕು. ಕೆರೆ ಮೊದಲಾದ ಜಲಾಶಯದಿಂದ ಊರಿಗೆ ಹೆಸರು ಬಂದಿರುವುದು ಸ್ವಾಭಾವಿಕ. ಆದರೆ ಕೇರಿಯೆಂದರೂ ತಪ್ಪಲ್ಲ. ಕೇರಿ ಎಂದರೆ ಸೇರುವೆ, ಕೂಟ, ವಸತಿಸ್ಥಾನ. ತಮಿಳಿನಲ್ಲಿ ಇದೇ ಚೇರಿಯೆಂದಿದೆ. ಕೆರೆಯಂತಹ ಜಲಾಶಯಕ್ಕೆ ಮುಖ್ಯತ್ವವಿಲ್ಲದೆ, ಇರುವ ಎಡೆ ಎಂಬರ್ಥವಿರವಾಗ ಕೆರೆಗಿಂತ ಕೇರಿಯೆಂಬುದೇ ಲೇಸು. ಆದಕಾರಣ ತಮ್ಮ ಊರ ಹೆಸರಿನ ಕೊನೆಯ ಪದವು ಕೆರೆಯೊ ಕೇರಿಯೊ ಎಂಬುದನ್ನು ಆಯಾ ಊರವರೇ ನಿರ್ಧರಿಸಬೇಕು.

ಇದರಂತೆ. ಪ್ರಾಣಿಗಳಿಂದ ಒಂದ ಹೆಸರಿನಿಂದಲೂ ಭೌಗೋಲಿಕ ಸ್ಥಿತಿಯ ಕಲ್ಪನೆಯು ಬರುವುದು. ಆನೆಗೊಳ, ಆನೆಗೊಂದಿಗಳು ಬೆಟ್ಟಗಳಿಲ್ಲದ ಬಯಲನಾಡಿನಲ್ಲಿದ್ದರೆ ಆ ಊರ ಹೆಸರು ಅಲ್ಲಿ ಆನೆಗಳು ವಿಶೇಷವಾಗಿ ಇದ್ದುದಕ್ಕಾಗಿ ಬಂದುವಾಗಿರಲಾರವು. ಬೇರೆ ಕಾರಣಕ್ಕಾಗಿ ಬಂದಿರಬೇಕೆಂದು ನಿಶ್ಚಿತವಾಗಿ ಹೇಳಬಹುದಾಗಿದೆ. ಯಾವನೊಬ್ಬ ಅರಸನು ಸಾಕಿದ ಆನೆಗಳು ಕ್ರೀಡಿಸುವುದಕ್ಕಾಗಿ ಕಟ್ಟಿದ ಕೊಳದ ಮೇಲಿಂದ ಆನೆಗೊಳವೆಂದು ಹೆಸರು ಬಂದಿದೆಯೆಂದು ತರ್ಕಿಸಲು ಅಡ್ಡಿಯಿಲ್ಲ. ಆದರೆ ಮಲೆನಾಡಿನ ಕಾಡು ಸುತ್ತಲೂ ಇರುವ ಪ್ರದೇಶದಲ್ಲಿ ಆನೆಗೊಳವಿದ್ದರೆ ಅಲ್ಲಿ ಒಮ್ಮೆ ಆನೆಗಳು ವಿಶೇಷವಾಗಿದ್ದ ಮೂಲಕವಾಗಿಯೆ ಹೆಸರು ಬಂದಿದೆಯೆಂದು ತಿಳಿಯಲು ಅಡ್ಡಿಯಿಲ್ಲ. ಇದೆ ಮೇರೆಗೆ ಹುಲ್ಲೆ, ಹುಲಿ, ಹಂದ ಮೊದಲಾದ ಪ್ರಾಣಿಗಳ ಹೆಸರಿನ ಹಳ್ಳಿಗಳ ವಿಚಾರವೂ ಉಂಟು.

ಈ ಬಗೆಯಾಗಿ ಪ್ರಾಕೃತಿಕ ಸ್ವರೂಪದಂತೆ, ಎಡೆಯ ಹೆಸರುಗಳಿಂದ ರಾಜಕೀಯ ಭೂಗೋಲವೂ ಗೊತ್ತಾಗುವುದು.

ನಗರ, ಪೇಟೆ, ಪಟ್ಟಣ, ಅಂಗಡಿ ಎಂಬ ಹೆಸರಿನ ಊರುಗಳು ಒಂದು ಕಾಲಕ್ಕೆ ವ್ಯಾಪಾರದ ಸ್ಥಳಗಳೆಂದು ಸಾಮಾನ್ಯವಾಗಿ ಹೇಳಿದರೆ ವಿಶೇಷ ತಪ್ಪಾಗಲಾರದು. ಅಂಗಡಿಗಳೆಂಬುವು ಕಂಸಡ ಜಿಲ್ಲೆಯಲ್ಲಿ ಕಂಡುಬರುತ್ತವೆ. ಉಪಿನಂಗಡಿ, ಬೆಳ್ತಂಗಡಿ, ಹಟ್ಟಿಯಂಗಡಿ ಮುಂ.

ಕೋಟೆ, ಕಣಿವೆ, ಕಂಡಿಗಳು ರಾಜಕೀಯ ದೃಷ್ಟಿಯಿಂದ ಮಹತ್ವದ ಠಾಣ್ಯಗಳಾಗಿರುತ್ತವೆ.

ಬಾದಾಮಿ, ಕಲ್ಯಾಣ, ಮಳಖೇಡ, ಬನವಾಸಿ, ಹಂಪಿ, ಹಳೇಬೀಡು ತಳಕಾಡು, ಇಂತಹ ಪ್ರಮುಖ ಹಿರಿಯೂರುಗಳೊಳಗೆ ಹೋಗಿಬರುವ ರಾಜಮಾರ್ಗಗಳು ಇರಲೇಬೇಕು. ಶಾಸನಗಳಲ್ಲಿ ದಾನಭೂಮಿಯ ಮೇರೆಗಳನ್ನು ಹೇಳುವಾಗ 'ರಾಜಪಥ' ದ (ಯಾವುದೊಂದು ದಿಕ್ಕಿಗೆ ಇದ್ದರೆ) ಉಲ್ಲೇಖಗಳು ಸಿಕ್ಕುತ್ತವೆ. ಕಲ್ಯಾಣದಿಂದ ಕಾಂಚಿಯವರೆಗೆ ಅವ್ಯಾಹತವಾದ ರಾಜಕೀಯ ಹಾಗೂ ಧಾರ್ಮಿಕ, ಸಾಮಾಜಿಕ ವ್ಯವಹಾರಗಳು ಸಾವಿರ ವರುಷಕ್ಕಿಂತ ಹೆಚ್ಚು ಕಾಲ ನಡೆದೆ ಇದ್ದುವು. ಆದರೆ ಈ ಹೆದ್ದಾರಿಯು ಯಾವ ಯಾವ ಊರುಗಳ ಹತ್ತಿರಿನಿಂದ ಹೋಗುತ್ತಿದ್ದಿತೆಂಬುದು

ನಿಶ್ಚಿತವಾಗಿ ಇನ್ನೂ ಬೆಳಕಿಗೆ ಬಂದಿಲ್ಲ. ಇದರಂತೆ ಉತ್ತರದಲ್ಲಿ ಪೈಠಣ, ಎಲ್ಲೂರು (ಎಲೋರಾ), ಅಜಂತಾ, ಅನಹಿಲವಾಡ, ಸೌರಾಷ್ಟ್ರಾದಿಗಳ ಸಂಗಡ ಇದ್ದ ವ್ಯವಹಾರವು ಸಾಗುತ್ತಿದ್ದ ಹೆದ್ದಾರಿಗಳೂ ಬೆಳಕಿಗೆ ಬರಬೇಕಾಗಿದೆ.

ದ್ವಾರಕೆಯು ಪೂರ್ವಕಾಲದಲ್ಲಿ ಪಶ್ಚಿಮ ಕರಾವಳಿಯಿಂದ ಒಳನಾಡಿಗೆ ಸಾಗುತ್ತಿದ್ದ ವ್ಯಾಪಾರದ ಹೆಬ್ಬಾಗಿಲು ಆಗಿರುವ ಸಂಭವವಿದೆ. 'ದ್ವಾರ' ವೆಂಬ ಪದವು ಇದೇ ಅರ್ಥವನ್ನು ಸೂಚಿಸುವುದೆಂದು ನನ್ನ ಊಹೆ. 'ಬಾಯಿ' 'ಬಾಗಿಲು' ಗಳೆಂಬ ಊರುಗಳು ಒಂದು ಕಾಲದ ರಾಜಕೀಯ ಅಥವಾ ವ್ಯಾಪಾರೋದ್ಯೋಗದ ಮುಖಗಳಾಗಿರಬೇಕು. ಅವುಗಳ ಮುಖಾಂತರವಾಗಿ ವ್ಯವಹಾರಗಳು ಮುಂದುವರಿಯುತ್ತಿರಬೇಕು.

ಕೆಲವು ಎಡೆಯ ಹೆಸರುಗಳು, ತಮ್ಮ ನೆರೆಹೊರೆಯಲ್ಲಿರುವ ಭೂಗತ ಸ್ವಾಭಾವಿಕ ದ್ರವ್ಯದ ಸಂಶೋಧನಕ್ಕೆ ಸೂಚನೆಯನ್ನು ಕೊಡುತ್ತವೆ. ಭದ್ರಾವತಿಯ ಕಬ್ಬಿಣದ ಕಾರಖಾನೆಯ ಉಗಮವು ಇದೇ ತೆರನಾಗಿ ಆಗಿದೆಯೆಂದು ಕೇಳಿದ್ದೇನೆ. ಭದ್ರಾವತಿಯ ಮೊದಲಿನ ಹೆಸರು ಬೆಂಕೀಪುರವೆಂದಿತ್ತು. ಬೆಂಕೀಪುರವೆಂದು ಹೆಸರು ಬರಲು ಏನಾದರೂ ವಿಶೇಷ ಕಾರಣವಿರಬೇಕೆಂದು ನಡಸಿದ ಸೂಕ್ಷ್ಮ ನಿರೀಕ್ಷಣೆಯೆ ಮುಂದೆ ಇಂದಿನ ಭವ್ಯವಾದ ಔದ್ಯೋಗಿಕ ಕೇಂದ್ರ ನಿರ್ಮಾಣಕ್ಕೆ ಕಾರಣವಾಯಿತು. ಕೆಮ್ಮನಗುಂಡಿಯ ಮೂಳದಿಂದ ಕಬ್ಬಿಣದ ಅದಿರು ದೊರೆತು ಭಾರತದಲ್ಲಿ ಅದ್ವಿತೀಯವಾದ ಕಾರಖಾನೆಯು ನಡೆದಿದೆ.

ಪ್ರಾಚೀನ ಕಾಲದಲ್ಲಿ ಹೊಳೆಗಳ ರೇವೆಯಲ್ಲಿ ಬಂಗಾರವನ್ನು ಸೋಸುವುದು ನಡೆಯುತ್ತಿದ್ದಿತಂತೆ. ಹೊಳೆಗಳು ಹರಿಯುತ್ತ ಬರುವಾಗ ಹಲವೆಡೆಗೆ ಬಂಗಾರದ ಸೂಸು ಕಣಗಳನ್ನು ತಂದು ಮಳಲಿನಲ್ಲಿ ಬಿಡುವುದುಂಟು. ಈ ಕಾರಣದಿಂದಲೊ ಏನೊ ಕಂನಾಡ ಕೆಲವು ಹೊಳೆಗಳಿಗೆ ಸುವರ್ಣಾವತಿ, ಹೇಮಾವತಿ ಎಂಬೀ ಬಗೆಯ ಹೆಸರುಗಳಿವೆ. ಹಟ್ಟಿ (ನಿ. ಕಂ.) ಯಲ್ಲಿ ಚಿನ್ನದ ಅತಿ ಪುರಾತನ ಗಣಿಗಳಿವೆ. ಹಟ್ಟಿಯಲ್ಲಿ ಹುಟ್ಟಿದ ವಸ್ತುವೆಂದು ಬಂಗಾರಕ್ಕೆ 'ಹಾಟಕ' ವೆಂಬ ಹೆಸರು ಬಂದುದುಂಟು. ಕೊಡಗಿನ ಹರಿಂಗಿ ಎಂಬ ಹೊಳೆಗೆ ಒಂದು ಭಾಗದಲ್ಲಿ ಹಟ್ಟಿ ಹೊಳೆ ಮತ್ತೊಂದು ಭಾಗದಲ್ಲಿ

ಸುವರ್ಣಾವತಿ ಎಂಬ ಹೆಸರುಂಟು. ಈ ಹೊಳೆಗಳಲ್ಲಿ ಸೋಸಿದರೆ ಬಂಗಾರವು ಈಗಲೂ ಹೊರಡುವುದೆ ಎಂಬುದು ನೋಡಬೇಕಾದ ಸಂಗತಿ.

ಅಕ್ಕಿ, ಕಬ್ಬು, ಜೋಳ, ಗೋದಿ, ಹತ್ತಿಗಳಿಗೆ ಹೆಸರಾದ ನಾಡು. ಅಕ್ಕಿಯ ಹೆಸರಿನ ಊರುಗಳೂ, ಬತ್ತದ ಬಗೆಬಗೆಗಳನ್ನು ಸೂಚಿಸುವ ಬೇರೆ ಬೇರೆ ಊರುಗಳೂ ಹಲವಾರು ಇವೆ. ಕಬ್ಬೂರುಗಳಿಗಂತೂ ಎಣಿಕೆಯಿಲ್ಲ. ಅವು ಮಲೆನಾಡು, ಬೆಳುವೊಲ ಎಲ್ಲೆಡೆಗೂ ಇವೆ. ಅವೆಲ್ಲವೂ ಒಮ್ಮೆ ಕಬ್ಬು ಬೆಳೆವ ಊರಾಗಳಾಗಿದ್ದುವು. ಬೆಲ್ಲದ ಮೇಲೆ ನಮ್ಮ ನಾಡಿಗರಿಗೆ ನಚ್ಚು ಬಹಳ. 'ಬೆಲ್ಲದಿಂದ ಇನಿಯನೆ'? (ಬೆಲ್ಲಕ್ಕಿಂತಲೂ ಸವಿಯಾಗಿರುವನೆ?) ಎಂದು ಕೇಳುವ ವಾಡಿಕೆಯಿದೆ. ಮುದ್ದಿಗೆ (ಚಿಕ್ಕ ಮಕ್ಕಳಲ್ಲಿ) 'ಬೆಲ್ಲ' ಎಂಬ ಪಡೆನುಡಿಯುಂಟು. ಇಷ್ಟು ಬೆಲ್ಲದ ಮೇಲಣ ಒಲವು. ಅದು ಇಲ್ಲಿ ವಿಶೇಷವಾಗಿ ಇದ್ದಿತು. 'ಜೋಳದ ಉಪಕಾರ' ಎಂಬ ಪಡೆನುಡಿಯಿದ್ದಿತು. ಜೋಳದ ರಾಶಿಯು ಊರ ಹೆಸರಿವೆ. ಗೋದಿಹಾಳೂ ಉಂಟು. ಹತ್ತಿಯ ಬೆಳೆ ವಿಶೇಷವಾದರೂ ಆ ಹೆಸರಿನ ಊರು ಇಲ್ಲದುದು ಸೋಜಿಗ. ನೂಲವಿ, ಜಾಡರಹಳ್ಳಿ, ಇವೆ.

ಕಡಲೆ ಕ್ರಿಸ್ತಶಕದ ಆದಿಯಲ್ಲಿ ಭಾರತಕ್ಕೆ ಬಂದಿತಂತೆ. ಆದರೆ ಆ ಹೆಸರಿನ ಊರುಗಳೂ ಇವೆ. ನಮ್ಮ ನಾಡಿಗೆ ಹೊರಗಣಿಂದ ಬಂದ ಕೆಲವು ಗಿಡಗಳಿವೆ. ಕಲ್ಹಾರು ಹೊರಗಿನದು. ಆದರೆ ಆ ಹೆಸರಿನ ಎಡೆಗಳಿಲ್ಲ. ಸಿಂದಿಗಿಡವು ಸಿಂಧೂ ದೇಶದಿಂದ ಬಂದುದು. 'ಸೇಂಧೀ—ಸಿಂಧ ದೇಶ, ಜಹಾ ಖಜೂರ ಬಹುತ ಹೋತಾ ಹೈ: ಖಜರೂ; ಖಜೂರಕಾ ಶರಾಬ; ಏಾಡೀ ಶರಾಬ;' ಎಂಬ ಅರ್ಥಗಳು ಕೋಶದಲ್ಲಿ ದೊರೆಯುತ್ತವೆ. ಸಿಂದಿಗೆ, ಸಿಂದವಾಡಿ ಮೊದಲಾದ ಊರುಗಳು ಸಿಂದರೆಂಬ ಈ ನಾಡಿನಲ್ಲಿ ಆಳಿದ ರಾಜರಿಂದ ಬಂದುವೆಂದೇ ನನ್ನ ನಂಬುಗೆ. ವಿಜಾಪೂರ ಜಿಲ್ಹೆಯೊಳಗಿನ ಸಿಂದಿಗೆ (ತಾಲ್ಲೂಕು) ಬಾಗಿಲಕೋಟೆಯ ಹತ್ತರಿನ ಸಿಂದಿಗೆ ಎರಡೂ ಸಿಂದಿಗೆಗಳಲ್ಲಿ ಸಿಂದೀ ಗಿಡಗಳು ಅಪರೂಪವೆಂದು ತಿಳಿದವರಿಂದ ಕೇಳಿಕೊಂಡಿದ್ದೇನೆ. ಇನ್ನುಳಿದ ಸಿಂದಿಕುರುಬೆಟ್ಟ ಮೊದಲಾದ ಬೇರೆಡೆಗಳಲ್ಲಿ ಯಾವುದಾದರೂ ಒಂದೆರಡು ಸಿಂದಿಗಿಡದ ಮೂಲಕ ಹೆಸರುಳ್ಳುವುಗಳಾಗಿರಲೂ ಬಹುದು. ಈ (ಸಿಂದಿ) ಹೆಸರಿನಿಂದ, ಇದು ಸಿಂಧೂ ದೇಶದಿಂದ ಬಂದ ಗಿಡವೆಂಬುದು

ನಿಶ್ಚಿತ. ಎಂದು ಬಂದಿತು, ಹೇಗೆ ಬಂದಿತೆಂಬುದನ್ನು ಇನ್ನೂ ನಿಶ್ಚಿತವಾಗಿ ಅರಿತುಕೊಳ್ಳುವುದು ಅವಶ್ಯವಾಗಿದೆ.

ಚಂದ್ರವಳ್ಳಿ ಮೊದಲಾದ ಕಡೆಗೆ ದೊರೆವ ಗ್ರೀಕ, ರೋಮರ ನಾಣ್ಯಗಳಿಂದ ಆ ನಾಡುಗಳೊಡನೆ ಕಂನಾಡವರ ವ್ಯಾಪಾರವು ನಡೆಯುತ್ತಿದ್ದುದು ತಿಳಿದುಬರುತ್ತದೆ. ಕ್ರಿ. ಶ. ೨ನೆಯ ಶತಕದ ಸುಮಾರಿನ ಒಂದು ಗ್ರೀಕ ನಾಟಕದಲ್ಲಿ ಕಂನುಡಿಯ ಮಾತುಗಳಿದ್ದುದನ್ನು ಬಲ್ಲಿದರು ಕಂಡುಹಿಡಿದಿರುವರು. ಸುರತ ಮಲ್ಪೆ ಮೊದಲಾದ ಬಂದರಗಳು ಊರ್ಜಿತ ಸ್ಥಿತಿಯಲ್ಲಿದ್ದುವು. ಕ್ರಿ. ಶ. ದ ಆರಂಭಕ್ಕೆ ಜೋಳವು ಇಟಲಿಗೆ ಹಿಂದೂದೇಶದಿಂದ ಬಂದಿರಬೇಕೆಂದು ಹೇಳುತ್ತಾರೆ. ಹತ್ತಿಯಂತೂ ಹಿಂದೂ ದೇಶದಿಂದಲೇ ಹೋದುದು ನಿಶ್ಚಿತವಾಗಿ ತಿಳಿದಿದೆ. ವಸ್ತ್ರಗಳ ನಿರ್ಮಾಣಕ್ಕಾಗಿ ವಿಖ್ಯಾತವಾದ ಪಟ್ಟೆ (ಹಟ್ಟಿ)ಯು ಆ ವ್ಯಾಪಾರವನ್ನು ಗ್ರೀಸ, ರೋಮುಗಳೊಡನೆ ಮಾಡುತ್ತಿರುವ ಸಂಭವವೂ ಇಲ್ಲದಿಲ್ಲ. ( ಕ. ವೀ. ಕ್ಷ ಹತ್ತಿಯ ಕತೆ ನೋಡಿ. ಪು. ೧೪೪–೧೫೭)

ಬೆಳುವೊಲ. ಮಲೆನಾಡು ಎಂಬೀ ಬಗೆಯವು ಪ್ರಾಕೃತಿಕ ವಿಭಾಗಗಳಾದುವು. ಇದರಂತೆ ಸಪ್ತಾರ್ಧ ಲಕ್ಷ ರಟ್ಟಪಾಡಿ, ಗಂಗವಾಡಿ ತೊಂಬತ್ತಾರು ಸಾವಿರ, ಬನವಾಸೆ ಹನ್ನೆರಡು ಸಾವಿರ ನಾಡು, ಕದಂಬಲಿಗೆ ಸಾಸಿರ, ಕರಹಾಟ ನಾಲ್ಕುಸಾವಿರ, ಮಾಸವಾಡಿ, ಮಹಾರಾಜವಾಡಿ ಪೊರಮಲೆನಾಡು, ಮೇಳಲನಾಡು, ನಾಗರಖಂಡ, ಮೊದಲಾದುವು ಕಾಲಕಾಲಕ್ಕೆ ತಲೆದೋರಿದ ರಾಜಕೀಯ ವಿಭಾಗಗಳು.

ಪಾಡಿ, ವಾಡಿ, ನಾಡು, ಮಂಡಲ, ವಿಷಯ, ದೇಶ ಎಂದು ಮುಂತಾದುವು ಅಂದಿನ ವಿಭಾಗಗಳ ಹೆಸರು. ಇವುಗಳಲ್ಲಿ ತಾರತಮ್ಯವೇನೆಂಬುದನ್ನು ಕುರಿತು ಇನ್ನೂ ನಿರ್ಣಯವಾಗಿಲ್ಲ. ಬನವಾಸಿಯ ಉಲ್ಲೇಖವು ನಾಡು, ವಿಷಯ, ಮಂಡಲ, ದೇಶ ಎಂದು ಎಲ್ಲ ಬಗೆಯಿಂದಲೂ ಬಂದಿದೆ. ಅಲ್ಲದೆ 'ಕದಂಬ' ಹೆಸರಿನಲ್ಲೂ ದೇಶವಿಭಾಗಗಳ ಉಲ್ಲೇಖಗಳು ಸಿಕ್ಕುತ್ತವೆ. ಕಂಬಲಿಗೆ ನಾಡು, ಕದಂಬ ದೇಶ, ಕದಂಬ ವಿಷಯಗಳುಂಟು. ಸುತ್ತಲಿನ ನಾಡಿಗೆ ಅದರ ಮುಖ್ಯ ಸ್ಥಳದ ಹೆಸರನ್ನು ಕೊಡುವ ವಾಡಿಕೆಯು ಇದ್ದಂತೆ ಆಳುವ ಅರಸು ಮನೆತನದಿಂದಲೂ ದೇಶವಿಭಾಗಕ್ಕೆ ಹೆಸರು ಬರುತ್ತಿದ್ದಿತು.

ರಟ್ಟರು, ಸಿಂದರು, ಕದಂಬರು, ಹೊಯ್ಸಳರು ಮೊದಲಾದ ಮನೆತನಗಳ ಹೆಸರಿನ ನಾಡುಗಳು ದೊರೆಯುತ್ತವೆ. ಇದಕ್ಕೂ ಪ್ರಾಚೀನ ಕಾಲದಲ್ಲಿ ಜನದಿಂದ ನಾಡಿಗೆ ಹೆಸರು ಬರುವ ವಾಡಿಕೆಯಿದ್ದಿತು. ಆರ್ಯರು, ಕಣ್ಣರು, ಪಟ್ಟ (ಹಟ್ಟಿ) ಗಳು, ಆಭೀರರು, ಗುರ್ಜರರು ಮೊದಲಾದವರಿಂದ ಬಂದ ಹೆಸರುಗಳು ಇದಕ್ಕೆ ದೃಷ್ಟಾಂತ.

ಈ ದೇಶವಿಭಾಗದ ಕ್ಷೇತ್ರಗಳು ಆ ಕಾಲದ ರಾಜಕೀಯ ಪರಿಸ್ಥಿತಿಗನುಸರಿಸಿ ಕಾಲಕಾಲಕ್ಕೆ ಬದಲಾಗುತ್ತಿದ್ದುವು. ಕುಂತಲವೆಂಬ ದೇಶವಾಚಕ ಹೆಸರಿನಲ್ಲಿ ಅಳವಡುವ ಪ್ರದೇಶವು ಕಾಲಕಾಲಕ್ಕೆ ಹೆಚ್ಚುಕಡಿಮೆಯಾಗಿ ಕಂಡುಬರುವುದಕ್ಕೆ ಇದೇ ಕಾರಣ. ಯಾವ ಯಾವ ಕಾಲಕ್ಕೆ ಈ ಪ್ರಮುಖ ವಿಭಾಗಗಳ ವ್ಯಾಪ್ತಿಯು ಎಷ್ಟಿದ್ದಿತೆಂಬುದರ ಸಂಶೋಧನವು ಇನ್ನೂ ಆಗದೆ ಇರುವುದರಿಂದ ಈ ಹೆಸರುಗಳು ಕೆಲವು ಸಾರೆ ವಿಚಾರದ ತೊಡಕನ್ನು ಹೆಚ್ಚಿಸುತ್ತವೆ. ದ್ವಾರಕೆಯಿಂದ ಬನವಾಸಿಯ ನಾಡು ಸಂಪೂರ್ಣ ಕುಂತಲವೆಂಬ ಹೆಸರಿದ್ದುದಕ್ಕೆ ಆಧಾರಗಳು ಸಿಕ್ಕುತ್ತವೆ. ಇದೆಲ್ಲವೂ ಕುಂತಲವೆಂದು ಒಮ್ಮೆ ಕರೆಯಲ್ಪಡುತ್ತಿರಬೇಕು. ಏಕೆಂದರೆ ಭಂಡಾರಕರ ಸಂಸ್ಥೆಯವರು ಪ್ರಕಟಿಸಿರುವ ಉದ್ಯೋಗಪರ್ವದ ವರೆಗಿನ ಮಹಾಭಾರತದ ಪ್ರತಿಗಳಲ್ಲಿ ಕರ್ಣಾಟವು ಕಾಣಿಸುವುದಿಲ್ಲ. ಬರಿ ಕುಂತಲವೆಂಬ ಹೆಸರು ಉಂಟು. ಕೆಲವೊಂದು ಪ್ರದೇಶಕ್ಕೆ ಕರ್ಣಾಟವೆಂಬ ಹೆಸರು ಮುಂದೆ ಬಂದಬಳಿಕ ಉಳಿದ ಭಾಗಕ್ಕೆ ಕುಂತಲವೆಂಬುದು ಹಾಗೆಯೆ ಉಳಿದುಕೊಂಡಿತು. ಅವೇಲೆಯೂ ಹಳೆಯ ರೂಢಿಯೊಳಗಿನ ಹೆಸರು ಒಮ್ಮೆಲೆ ಬಿದ್ದುಹೋಗುವುದಿಲ್ಲ. ಹೀಗಾಗಿ ಒಂದೇ ಪ್ರದೇಶಕ್ಕೆ ಒಂದೇ ಕಾಲಕ್ಕೆ ಕರ್ಣಾಟವೆಂದೂ ಕುಂತಲವೆಂದೂ ಹೆಸರು ಬಂದಿರುವುದು ಸ್ವಾಭಾವಿಕವಾಗಿದೆ.

ದ್ವಾರಕೆಯಿಂದ ಆರಂಭಮಾಡಿ ಈ ಪ್ರದೇಶವು ಆರ್ಯೀಕರಣಕ್ಕೆ ಒಳಗಾಗಿ ಅಲ್ಲಿಯ ಮೂಲಿಗರಾದ ಪಟ್ಟಿಲರು (ಹಟ್ಟಿಕಾರರು) ತಮ್ಮ ಭಾಷೆಯನ್ನು ಸಂಪೂರ್ಣವಾಗಿ ಕಳೆದುಕೊಳ್ಳುವ ವರೆಗೂ (ಗುಜರಾತ, ಮಹಾರಾಷ್ಟ್ರಗಳೆರಡೂ) ಕುಂತಲವೆಂದರೂ ಸರಿಯೆ; ಕರ್ಣಾಟವೆಂದರೂ ಸರಿಯೆ. ಆದರೆ, ಅಲ್ಲಿ ಕಂನುಡಿಯು ಕಣ್ಮರೆಯಾದ ಬಳಿಕ ನೃಪತುಂಗನ ಕವಿರಾಜಮಾರ್ಗದಲ್ಲಿ ಹೇಳಿದಂತೆ ಗೋದೆಯಿಂದ ದಕ್ಷಿಣಕ್ಕೆ ಮಾತ್ರ ಕಂನಾಡು ಉಳಿದು,

ಉತ್ತರವು ಪೈಠಣ, ಪರ್‍ಹಾಟ ಮೊದಲಾದ ಭಾಗಗಳು ರಾಜಶೇಖರಾದಿ ಕವಿಗಳು ಹೆಸರಿಸಿದಂತೆ ಕುಂತಲವಾಗಿ ಉಳಿದುವು. ಹೀಗೆ ಕುಂತಲ ಮತ್ತು ಕರ್ಣಾಟಗಳು ಬೇರೆಯಾದವು. ಆದರೂ ಕಂನಾಡಿಗೆ ಕುಂತಲವೆಂದೆಂಬ ವಾಡಿಕೆ ಒಮ್ಮೆಲೆ ನಿಂತುಹೋಗಲಿಲ್ಲ.

ಕದಂಬ ದಶಸಹಸ್ರ ದೇಶವೆಂದು ಒಂದೆಡೆಗೆ ಇದೆ. (E. K. XI Dg. 1) ಕದಂಬಲಿಗೆ ಸಾಸಿರನಾಡೆಂದು ಇನ್ನೊಂದೆಡೆ ಉಂಟು. (E. K. XI Gl. 9, 10). ಬನವಾಸೆ ಹನ್ನೆರಡು ಸಾವಿರವೆಂದೂ ಬೇರೊಂದೆಡೆಯಲ್ಲಿ ಬಂದಿದೆ (E. K. VII S. K. 119, 120). ಆ ನಾಡಿನ ಮೇರೆಗಳು ಕಾಲಕಾಲಕ್ಕೆ ಬದಲಾಗುತ್ತಿದ್ದುದರಿಂದಲೆ ಒಮ್ಮೆ ಹತ್ತು ಸಾವಿರದ ನಾಡು ಇನ್ನೊಮ್ಮೆ ಒಂದು ಸಾವಿರ, ಮತ್ತೊಮ್ಮೆ ಹನ್ನೆರಡು ಸಾವಿರವಾದುದುಂಟು.

ಕಂನಾಡಿನ ಬೇರೆ ಬೇರೆ ಭಾಗಗಳನ್ನು ಬೇರೆ ಬೇರೆ ರಾಜರು ಸ್ವತಂತ್ರವಾಗಿ ಆಳುತ್ತಿದ್ದುದರಿಂದ ಪೂರ್ವಕಾಲದಿಂದ ಕರ್ಣಾಟವೆಂಬ ಹೆಸರಿಗಿಂತಲೂ ಈ ನಾಡಿನ ಉಳಿದ ನಾಮಾಂತರಗಳೇ ಶಾಸನಾದಿಗಳಲ್ಲೆಲ್ಲ ಹೆಚ್ಚಾಗಿ ತುಂಬಿಕೊಂಡಿರುವುದು ಕಂಡುಬರುತ್ತದೆ. ಚಲುಕ್ಯರು ಮತ್ತು ರಾಷ್ಟ್ರಕೂಟರನ್ನುಳಿದರೆ ಬೇರೆ ಕಾಲದಲ್ಲಿ ಕಂನಾಡು ಒಂದೇ ಹಿರಿಯ ಆಡಳಿತದಲ್ಲಿ ಎಂದೂ ಇರಲಿಲ್ಲ. ಚಲುಕ್ಯರೂ ಮತ್ತು ರಾಷ್ಟ್ರಕೂಟರ ಕಾಲಕ್ಕೆ ಗಂಗ ಕದಂಬಾದಿ ಬೇರೆ ಹಲಕೆಲವು ಮಾಂಡಲಿಕರೂ, ಸಾಮಂತರೂ ಕಂನಾಡಿನ ಒಂದೊಂದು ಭಾಗದಲ್ಲಿ ರಾಜ್ಯಭಾರನಡಸುತ್ತಿದ್ದರೂ ಅವರೆಲ್ಲ ಸಾಮಾನ್ಯವಾಗಿ ಚಲುಕ್ಯ ಅಥವಾ ರಾಷ್ಟ್ರಕೂಟರ ಅಂಕಿತದಲ್ಲಿದ್ದುದರಿಂದ ಅಲ್ಲಿಯವರೆಗೆ ಕಂನಾಡಿನ ಅಖಂಡತ್ವವು ಅಚ್ಚಳಿಯದೆ ಉಳಿದಿದ್ದಿತೆನ್ನಲು ಅಡ್ಡಿಯಿಲ್ಲ ಕಂನಾಡಿನ ಎಲ್ಲ ಭಾಗಗಳು ಒಮ್ಮುಖದಿಂದ ಕೂಡಿಕೊಂಡಿದ್ದುವು.

ಆದರೆ ಕಲ್ಯಾಣ ಚಾಲುಕ್ಯರ ಆಳಿಗಾಲದ ತರುವಾಯ ಎಂದರೆ ೧೨ನೆಯ ಶತಮಾನದಿಂದ ಛಿನ್ನವಿಚ್ಛಿನ್ನವಾಗುತ್ತ ನಡೆದ ಕಂನಾಡಿನ ದುರ್ದೈವವು ಇದೀಗ ೨೦ನೆಯ ಶತಮಾನದ ಮಧ್ಯದ ಸುಮಾರಿಗೆ ಕೊನೆಗಾಣುವುದರಲ್ಲಿದೆ. ಕಲ್ಯಾಣ ಚಾಲುಕ್ಯರ ವಂಶವನ್ನು ಹಿಂದಿಕ್ಕಿ ಬಿಜ್ಜಳನು ಮುಂದೆ ಬಂದನು. ಆದರೆ ಆತನ ಕಲಚೂರಿ ವಂಶವೂ ಬೇಗನೆ ಮುಗ್ಗಿತು. ಬಳಿಕ

ಯಾದವ ಮನೆತನದ ಕೈಯಲ್ಲಿ ಕಂನಾಡ ಆಡಳಿತವು ಬಂದಿತು. ಆದರೆ ಈ ಯಾದವರಲ್ಲಿ ಎರಡು ಮನೆತನಗಳಾದುವು. ಹಿರಿಯ ಅರಸುತನಕ್ಕಾಗಿ ಸೇವುಣರು, ಮತ್ತು ಹೊಯ್ಸಳರು ತಮ್ಮ ತಮ್ಮೊಳಗೆ ಹೋರಾಟ ನಡಸಿದರು. ಕಂನಾಡಿನಲ್ಲಿ ಯಾದವೀ ಯುದ್ಧಗಳು-ದಾಯಾದಿತನದ ಹೊಡೆದಾಟಗಳು ನಡೆದುವು. ಚಲುಕ್ಯರೂ ರಾಷ್ಟ್ರಕೂಟರೂ ಉತ್ತರಕ್ಕೆ ನರ್ಮದೆಯ ಆಚೆಗೆ, ದಕ್ಷಿಣಕ್ಕೆ ಕಾಂಚಿಯ ಹತ್ತಿರಕ್ಕೆ ಇರುವ ಎದುರಾಳಿಗಳೊಡನೆ ಕಾದಾಡಿ ಈ ನಡುವಣ ನಾಡನ್ನು ಯಾವಾಗಲೂ ಅಖಂಡವಾಗಿ ತಮ್ಮ ಕೈಯಲ್ಲಿ ಇರಿಸಿಕೊಳ್ಳಲು ಹವಣಿಸುತ್ತಿದ್ದರು. ಆದರೆ ೧೨ನೆಯ ಶತಮಾನದ ತರುವಾಯ ಈ ಯಾದವರ ಯಾದವೀ ಯುದ್ಧಗಳಲ್ಲಿ ಕಂನಾಡ ಹೃದಯ ರಂಗವೇ ಕಾಳಗದ ಕಣವಾಯಿತು. ಹಳೇಬೀಡಿನ ಯಾದವರು ಕೃಷ್ಣೆಯ ವರೆಗೆ ನುಗ್ಗಿ ಬರಬೇಕು! ಈ ಹೊಡೆದಾಟಗಳಲ್ಲಿ ಕೃಷ್ಣಾ-ತುಂಗಾ ನದಿಗಳ ನಡುವಣ ಕಂನಾಡ ಜನಗಳ ಗೋಳು ದೇವರೆ ಬಲ್ಲ. ಇಂದು ಸೇವುಣ ಯಾದವರ ಕೈಯಲ್ಲಿ ಇದ್ದರೆ, ನಾಳೆ ಹೊಯ್ಸಳರ ಆಡಳಿತದಲ್ಲಿ! ೧೪ನೆಯ ಶತಮಾನದಿಂದ ಮುಂದೆ ಮುಸಲ್ಮಾನರ ಹಾಗೂ ಪೇಶ್ವರ ತುಳಿದಾಟದಲ್ಲಿ ಕಂಗೆಟ್ಟಿತು. ಈ ಬಗೆಯ ಅನಿಶ್ಚಿತ ಜೀವನದಲ್ಲಿ ಒಂದು ಕಾಲಕ್ಕೆ ಕಂನಾಡ ತಿರುಳೆನಿಸಿದ ಈ ಭಾಗದ ಜನಗಳ ಪಾಡು ಏತರದ್ದೂ ಬೇಡವಾಯಿತು.

೧೩ನೆಯ ಶತಕದ ಸುಮಾರಿಗೆ ಯಾದವೀ ಕಲಹಗಳಿಂದ ನುಗ್ಗು ನುಸಿಯಾದ ಕಂನಾಡಿನಲ್ಲಿ ಒಳನುಗ್ಗಿ ಹಾಳುಮಾಡಲು ಮುಸಲ್ಮಾನ ದಾಳಿಗಾರರಿಗೆ ಇನ್ನಷ್ಟು ಸುಲಭವಾಯಿತು. ದೇಶದಲ್ಲಿ ಅರಾಜಕತೆ ಅವ್ಯವಸ್ಥೆಗಳ ತಾಂಡವ ನಡೆಯಿತು. ಆ ಸುಮಾರಿಗೆ ಕಂನಾಡು ಇದ್ದ ಬಿದ್ದ ಶಕ್ತಿಸರ್ವಸ್ವವನ್ನೆಲ್ಲ ಕೇಂದ್ರೀಕರಿಸಿ ಹರಿಹರ-ಬುಕ್ಕರಿಂದ ಎಂತೂ ಕರ್ಣಾಟಸಿಂಹಾಸನವನ್ನು ಮತ್ತೆ ಭದ್ರಪಡಿಸಿಕೊಂಡಿತು. ಉತ್ತರದಲ್ಲಿ ನೆಲೆಗೆಟ್ಟು ಹಾಳವಾಗುತ್ತಿದ್ದ ಹಿಂದೂ ಸಂಸ್ಕೃತಿಯನ್ನು ಸಂರಕ್ಷಿಸಿ ಕಂನಾಡು ಭಾರತದ ಮರ್ಯಾದೆಯನ್ನು ಕಾಯಿದಿತು. ನಿಜ.

ಆದರೆ ಏನೇ ಆದರೂ ಒಮ್ಮೆ ಮುಕ್ಕಾದ ಕಂನಾಡ ಉತ್ತರದ ಮೇರೆ ಕೊನೆಯವರೆಗೂ ಮುಗ್ಗಿಯೇ ಹೋಯಿತು. ವಿಜಯನಗರದವರು ವಿಶ್ವಪ್ರಯತ್ನ ಮಾಡಿ ಕೃಷ್ಣೆಯ ವರೆಗೆ ತಮ್ಮ ಮರ್ಯಾದೆಯನ್ನು ಕಾಯ್ದುಕೊಳ್ಳ

ಬೇಕಾದರೆ ಸಾಕುಬೇಕಾಗುತ್ತಿತ್ತು. ಪೈಠಣ, ಎಲ್ಲೂರು-ಅಂಜತಾ, ಮಳಖೇಡ, ಕಲ್ಯಾಣಗಳಲ್ಲಿದ್ದ ಕಂನಾಡ ಕೇಂದ್ರವು ಕ್ರಮವಾಗಿ ಸರಿಯುತ್ತ ತುಂಗೆಯು ಕೆಳಗೆ ಹಳೆಬೀಡಿಗೆ; ಹಂಪೆಗೆ, ಮುಂದೆ ಅದಕ್ಕೂ ದಕ್ಷಿಣಕ್ಕೆ ಮೈಸೂರಿಗೆ ಸರಿಯಿತು! ಕಂನಾಡ ಭೌಗೋಲಿಕ ಮರ್ಯಾದೆ ಸಂಕೋಚಗೊಂಡುದು, ಅದರ ಆಂತರಿಕ ಜೀವಾಳವು ಕುಗ್ಗುತ್ತಿದ್ದುದರ ಬಾಹ್ಯ ಲಕ್ಷಣವೆಂದೇ ಹೇಳಬಹುದಲ್ಲವೆ?

ಉತ್ತರದಲ್ಲಿ ತಮ್ಮ ಕೈಸಾಗದೆ ಇದ್ದರೂ ಹೊಯ್ಸಳರೂ ವಿಜಯನಗರದವರೂ ದಕ್ಷಿಣಕ್ಕೆ ತಮ್ಮ ರಾಜ್ಯವನ್ನು ವಿಸ್ತರಿಸಿದರು. ತಮಿಳ ದೇಶವು ತಮಿಳದೇಶವೇ. ಅದು ಕಂನಾಡು ಆಗಲಾರದು; ಆಗಲೂ ಇಲ್ಲ. ಅರ್ಕಾಟದ ಭಾಗಕ್ಕೆ ಕರ್ಣಾಟವೆಂಬ ಹೆಸರು ಬಂದರೂ ಅದು ಕೇವಲ ಭ್ರಾಂತಿ. ಇವರು ಕಳೆದುಕೊಂಡ ಅಥವಾ ಕಂನಾಡವರ ಕೈಯಿಂದ ಜಾರಿದ ಕಂನಾಡಿನ ಉತ್ತರ ಭಾಗದ ವಿಷಯವೆ ಬೇರೆ. ಅದು ಮೂಲದಲ್ಲಿ ಕಂನಾಡವರ ಭೂಮಿ ಆರಿಯರಿಗೆ ಬಿಟ್ಟುಕೊಟ್ಟಂತಾಯಿತು. ತನ್ನ ಮನೆಯನ್ನು ಹೆರವರಿಗೆ ಬಿಟ್ಟುಕೊಟ್ಟು ಹೆರವರದನ್ನು ಆಕ್ರಮಿಸಲು ಪ್ರಯತ್ನಿಸಿದಂತೆ. ತನ್ನದು ಹೋದುದು ಹೋಗಿಯೆ ಹೋಯ್ತು. ಹೆರವರದಂತೂ ತನ್ನದಾಗಿ ಉಳಿಯಲು ಸಾಧ್ಯವೇ ಇಲ್ಲ.

ಕಂನಾಡ ಪಡುವಣ ಮೇರೆಯ ಬಗೆಗೆ ಭಿನ್ನಾಭಿಪ್ರಾಯಗಳಿಗೆ ಎಡೆಯೆ ಇಲ್ಲ. ಏಕೆಂದರೆ ಪಶ್ಚಿಮ ಕರಾವಳಿಯು ಸ್ಥಿರವಾದ ರೇಷೆ ಅಲ್ಲಿದೆ. ಅಲ್ಲದೆ ಕನ್ನಡ ಜಿಲ್ಹೆಯೆಂಬ ಹೆಸರು ಆ ಭಾಗಕ್ಕೆ ಈಗಲೂ ಉಳಿದುಕೊಂಡಿದೆ.

ಇನ್ನು ಉತ್ತರದ ಮೇರೆ. ನೃಪತುಂಗನ ಕಾಲದ ಕವಿರಾಜಮಾರ್ಗದಲ್ಲಿ ಉತ್ತರದಲ್ಲಿ ಗೋದೆಯವರೆಗೆ ಕಂನಾಡು ಎಂಬ ಸ್ಪಷ್ಟವಾದ ನಿರ್ದೇಶವಿದೆ ೯ನೆಯ ಶತಮಾನದಲ್ಲಿ ಅಲ್ಲಿಯ ವರೆಗೆ ಕಂನಾಡು ಇದ್ದಿತೆಂಬುದು ಸ್ಪಷ್ಟವಿದೆ. ಆದರೆ ಅದಕ್ಕೂ ಮೊದಲು ಗೋದೆಯ ಉತ್ತರಕ್ಕೆ ನರ್ಮದೆಯು ಕಂನಾಡ ಬಡಗಣ ಮೇರೆಯಾಗಿ ಇದ್ದಿತೆಂದು ನನ್ನ ಕಂಡಿತ. ಅದಕ್ಕೆ ಕೆಲವು ಕಾರಣಗಳನ್ನು ಈ ಮೊದಲು ೪ ಮತ್ತು ೭ ನೆಯ ಅಧ್ಯಾಯಗಳಲ್ಲಿ ಹೇಳಿದೆ. (೧) ನಾಡಿನ ಹೆಸರೆ (ಮರ) ಹಟ್ಟಿ (೨) ಮರಹಟ್ಟಿಯ (ವರ್ಹಾಟದ) ಪ್ರಮುಖ ಜನ ಹಟ್ಟಿಕಾರರೆಂಬುವರು. ಅವರೆ ಅಲ್ಲಿಯ ದೇಶಮುಖರೂ

ಪಾಟೀಲರೂ. (೩) ಊರ ಆಯಗಾರರು ಹಳಬರು, ಕುರುಬರು (ಕೊರಬು). (೪) ಆರೆ ಮಾತಿನಲ್ಲಿರುವ ಕಂನುಡಿಯ ಪಡೆನುಡಿ, ಧಾತುಗಳು (೫) ಕಂನಾಡವರೆಂದು ನಿಶ್ಚಿತವಾಗಿರುವ ರಾಷ್ಟ್ರಕೂಟರ ಮೊದಲ ನೆಲೆವೀಡು. ಮುಂ. ಇವಲ್ಲದೆ ಇನ್ನೂ ಬೇರೆ ಕೆಲವು ಸಾಂಸ್ಕೃತಿಕ ಸಂಬಂಧಗಳ ವಿಚಾರವು ೯–೧೦ನೆಯ ಅಧ್ಯಾಯಗಳಲ್ಲಿ ಬಂದಿದೆ.

ಪ್ರಸ್ತುತ, ಕಂನಾಡ ಉತ್ತರ ಮರ್ಯಾದೆ ಎಲ್ಲಿಯ ವರೆಗ ಇದ್ದಿತೆಂಬುದಕ್ಕೆ ಮಹಾರಾಷ್ಟ್ರದ ಹಲಕೆಲವು ಗ್ರಾಮನಾಮಗಳ ಬಗೆಯನ್ನು ಇಲ್ಲಿ ವಿವರಿಸುವುದು ಉದ್ದೇಶವಾಗಿದೆ.

೧. ಕೊಂಕಣಪಟ್ಟಿಯಿಂದ ಖಾನದೇಶಗಳ ವರೆಗೆ ಪಾಡಿಗಳು ದೊರೆಯುತ್ತವೆ. ಮಹಾರಾಷ್ಟ್ರದ ಉಚ್ಚಾರದಲ್ಲಿ ಅವು ಪಾಡಾ ಆಗಿವೆ.

ಉದಾ: ಕೊಂಕಣಭಾಗ–ಗೌರಿಪಾಡಾ, ಹಳದಪಾಡಾ, ನಾಗಪಾಡಾ

ಖಾನದೇಶ: ಪಟ್ಟಿಪಾಡಾ, ಚಿಂಚಪಾಡಾ, ಚೋಪಡಾ (ಚೌಪಾಡಾ) ಪಾಡಾವಿಹೀರ, ರತನಪಾಡಾ, ರೇವಪಾಡಾ, ನಳಿಪಾಡಾ ಠಾಣೇಪಾಡಾ. ಮುಂ.

ಉಳಿದ ಕಡೆಗಳಲ್ಲಿ: ಪಾಡೆಗಾವ, ಪಾಟಣ, ಪಾಟಗಾವ, ಅಂಬೇಪಾಡಾ. ಮುಂ.

೨) ವಾಡ, ವಡ, ವಾಡಿ ಗ್ರಾಮಗಳಿಗಂತೂ ಎಣಿಕೆಯಿಲ್ಲ. ಇವು ಇಲ್ಲದ ಮಹಾರಾಷ್ಟ್ರದ ಭಾಗವೆ ಇಲ್ಲ. ಅದರಿಂದ ಅವುಗಳ ಉದಾಹರಣೆ ಕೊಡುವ ಕಾರಣವಿಲ್ಲ.

೩) ಪೇಟೆಗೆ ಹಾಟವೆಂಬ ಹೆಸರು ಉದಾ: ಪಿಂಪರಿಹಾಟ (ಖಾ). ಪಾರನೇರ ಪಾರಗಾವ, ಎಂಬೀ ಬಗೆಯ ಹೆಸರುಗಳಲ್ಲಿ ಪಾಡಾ–ಪಾರವಾದುದನ್ನು ಕಾಣಲು ದೊರೆಯುತ್ತವೆ. ಕೊಲ್ಹಾರ, ಅಗ್ರಹಾರಾದಿಗಳಲ್ಲಿ ಕಾಣುವ ಹಾರದ ಪೂರ್ವರೂಪ. ಹಾರವೆಂಬುದೂ ಕೆಲವೆಡೆಗೆ ಉಂಟು. ಸೋಜರ ಹಾರಾ (ಖಾ); ಚಿಂಥಟಿ (ಚಿಂಚಹಟ್ಟಿ); ಹತ್ತಿ, ಹತ್ತಿಖುರ್ದ, ಹತ್ತಿಬುದ್ರುಕ; ಇವು ಹಟ್ಟಿ ಊರುಗಳು. ಇಲ್ಲಿ ಟವರ್ಗವು ತವರ್ಗವಾದುದು ಕಂಡುಬರುತ್ತದೆ. 'ಓಡ' ಎಂದು ಊರ ಕೊನೆಯ ಭಾಗವು ಕಂನಾಡಿನಲ್ಲಿದ್ದು ಖಾನದೇಶದಲ್ಲಿ ಓದವೆಂದಾಗಿದ್ದುದ್ದು ಅನುಭವಕ್ಕೆ ಬರುತ್ತದೆ.

ಮುಗಿಲೋಡು, ಐರೋಡು, ತೆಲ್ಕೋಡುಗಳೆಂದು ಕಂನಾಡಿನಲ್ಲಿವೆ. ಮಾಲೋದ, ಶಿಸೋದ, ವಾಡೋದ ಮುಂತಾದುವು ಖಾನದೇಶದಲ್ಲಿವೆ. ಇದು ತಳೋದೆ, ಪಾಲೋದೆ ಎಂದೂ ಕೇಳಬರುವುದು. ಆದರೆ ವಾಘೋಡೆ ಅಥವಾ ವಾಘೋಡಾ ಎಂಬಲ್ಲಿ ಡಕಾರವೇ ಕೇಳಬರುತ್ತದೆ.

ಳ) ಹಾಳ, ಆಳ, ಹ್ವಾಳ, ವಾಳ, ಹೋಳ ಎಂಬ ರೂಪಗಳು ಹಲವು ಹಳ್ಳಿಗಳ ಕೊನೆಗೆ ದೊರೆಯುತ್ತವೆ. ಬ್ರಹ್ಮನಾಳ (ಸಾ): ಪನ್ಹಾಳ (ಕೊ.) ನಂದವಾಳ (ಕೊ.); ಬೋಮನಾಳ (ಕೊ.); ಚಿಲಕಹ್ವಾಳ (ಕೊ.); ವಾಜರಾಳ (ರ); ಖಾನದೇಶದಲ್ಲಂತೂ ಇವು ವಿಶೇಷ. ಉದಾ: ಜಂಬ ಸ್ಯಾಳ; ಮೋರವ್ಹಾಳ; ಬೇಲವ್ಹಾಳ; ಭುಸಾವಳ; ಪಾಳ; ಜಂಬವ್ಯಾಳ; ಅಂಬಿಲಹೋಳ; ಮುಂ.

೫) ಸಂಪಖಂಡ, ನಾಗರಖಂಡಗಳಲ್ಲಿ ಕಾಣುವ ಖಂಡವೆಂಬುದು ಮಹಾರಾಷ್ಟ್ರದಲ್ಲಿ ಖಾನದೇಶದಲ್ಲಿ ಮಾತ್ರ ಉಂಟು. ಉದಾ: ಚಿರಖಂಡ; ಮಾಲಖಂಡ; ಅದರಂತೆ ಮಂಡಲ: ಭಾಗಮಂಡಲ, ಕದರ ಮಂಡಲಗಿ ನಮ್ಮಲ್ಲಿ. ಮಹುಮಂಡಲ, ಮಹುಮಂಡಲೆ ಎಂಬ ಎರಡೂರು ಖಾನ ದೇಶದಲ್ಲಿ.

೬) ಪಳ್ಳಿ, ಹಳ್ಳಿ ಎಂಬುದು ಮಹಾರಾಷ್ಟ್ರದ ಸಾವಿರಾರು ಊರುಗಳ ಕೊನೆಯ ಶಬ್ದವಾಗಿದ್ದುದನ್ನು ಮನಗಾಣಬಹುದು.

ಶಿರಸೋಳಿ (ಖಾ.)=ಶಿರಸಹಳ್ಳಿ, ಲಾಖೋಲಿ (ಖಾ.)=ಲಕ್ಕವಳ್ಳಿ. ಭಿಲಳಿ (ಖಾ.)=ಭಿಲ್ಲಹಳ್ಳಿ; ದೇವಳಿ (ಖಾ.)=ದೇವಹಳ್ಳಿ; ಕಢೇಳಿ (ಖಾ.)=ಕಡೆ ಹಳ್ಳಿ: ಭನೋಳಿ (ಖಾ.)=ಬನ್ನಿಹಳ್ಳಿ (?);

ಡಾಲವಳ್ಳಿ (ರ); ಖಾನವಲಿ (ರ)=ಕನ್ನವಳ್ಳಿ; ಚಿಂಚವಲಿ (ನಾ.)= ಚಿಂಚವಳ್ಳಿ: ಶಿನೋಳಿ (ನಾ.)=ಶಿವನಳ್ಳಿ; ಚಾಂದೋಲಿ (ನಾ.)=ಚಾಂದ ವಳ್ಳಿ; ಚಂದ್ರವಲಿ (ರ)=ಚೆಂದ್ರನಳ್ಳಿ; ಶಿವಳಿ (ಪು.)=ಶಿವಳ್ಳಿ; ನಂದವಲಿ (ರ.)=ನಂದಪಳ್ಳಿ=ನಂದಹಳ್ಳಿ; ಬಮನೋಳಿ (ರ.)=ಬಮ್ಮನಹಳ್ಳಿ; ಚಿಂಚೋಳಿ (ರ.)=ಚಿಂಚವಳ್ಳಿ; ಶಿರಸೋಳಿ, ಶಿರಾಳ, ಶಿರಾಳಿ (ರ.)=ಶಿರಸ ವಳ್ಳಿ, ಶಿರಹಾಳ, ಶಿರಹಾಳಿ; ಕಾತ್ರೋಳಿ (ರ.)=ಕಾತರಹಳ್ಳಿ; ನಾಗರೋಳಿ (ಕು.)=ನಾಗರಪಳ್ಳಿ; ಬಮನೋಳಿ (ಕು.)=ಬಮ್ಮನಹಳ್ಳಿ; ಕಡವಲಿ

(ಕು.)=ಕಡಪಳ್ಳಿ=ಕಡಹಳ್ಳಿ; ಶಿರವಳಿ (ಡಾ.)=ಶಿರಪಳ್ಳಿ; ಚಿಂಚವಲಿ (ಠಾ)=ಚಿಂಚವಳ್ಳಿ; ಶಿರೋಳ (ಠಾ.)=ಶಿರವೊಳಲು; ಡೊಂಬಿವಲಿ (ಠಾ.)= ಡೊಂಬವಳ್ಳಿ; ಐನವಳಿ (ರ.)=ಐಯನಪಳ್ಳಿ;

೭) ಊರು ಎಂಬ ಪದವು ಕೊನೆಗೆ ಇರುವ ಗ್ರಾಮಗಳು, ಸಾವಿರಾರು ವರುಷಗಳ ತರುವಾಯ ಈಗಲೂ ಉಳಿದುಕೊಂಡಿವೆ. ಅವುಗಳಲ್ಲಿ ಕೆಲವು ಬಂಗಾಳದಲ್ಲಿ ಊರಾ ಆಗುವಂತೆ, ಇಲ್ಲಿ ಊರಿ, ಊರೆ, ಓರೆ ಎಂಬ ರೂಪ ತಾಳಿವೆ.

ಖಾನದೇಶ: ಹತನೂರ (ಮೂರು ಇವೆ); ಕಢೂರ; ದಸನೂರ; ದೇವೂರ (ಈ ಹೆಸರಿನ ೫ ಊರುಗಳಿವೆ); ಪಿಂಚೂರು (ಮೂರು ಊರಿವೆ). ಕೋಳೂರ, ಧನೋರೆ (ಮೂರು ಇವೆ); ಸಾಹೂರ: ಸಿಂಭೋರೆ; ರಾಜೂರ (ನಾಲ್ಕೆಂಟು); ಜಾಂಭೋರೆ; ರಾಜೂರೆ (ಎರಡಿವೆ); ಸಾಂಜೋರಿ; ಸಿಂದೂರಿ; ಗೊಂಡೂರ; ಧಾಸೂರ; ವಾಘೂರ; ಮಣೂರ; ಪಾಚೋರಾ; ನಂದೂರ (ಬಾರ);

ನಾಸಿಕ ಜಿಲ್ಹೆ: ಹತನೂರ; ಮಣೂರ; ಚಾಂದೋರ; ಗಣೂರ; ದಿಂಡೋರಿ; ಧಗೂರ; ನಂದೂರ ೭; ರಾಜೂರ ೨; ಭಾವೂರ; ಚಿಂಚೂರ; ಓತೂರ ೨; ಜೇವೂರ; ಸಕೂರ; ಚಾಂದೋರೆ; ರಾಹೂರಿ; ಪಿಂಚೂರಿ ೨; ಚಾಂದೋರಿ; ಕೋಥೂರ; ಏಂಚೂರ ೨; ಕಸೂರ;

ಪುಣೆ ಜಿಲ್ಹಾ: ರಾಜೂರ; ರಾಜೂರಿ ೨; ಥೇವೂರ; ಸಂದೂರ; ಸಾಕೋರಿ; ಸಂಗನೋರೆ; ತೇಜೂರ; ಬಾವೂರ; ಕುಸೂರ; ಜೇವೂರ; ಜೇಜೂರಿ; ಮಾಹೂರ; ಶಿರೂರ; ಕೆಂದೂರ;

೮) i ಪಾಡಿ, ಹಟ್ಟಿ, ಹಾಳ, ಹಳ್ಳಿ, ಊರು ಈ ಹೆಸರುಗಳಿದ್ದುದು ನಿಜವಾದರೆ 'ಏರಿ' ಎಂಬುದೂ ಕಾಣಿಸಿಕೊಂಡಲ್ಲಿ ಅಚ್ಚರಿಗೆ ಕಾರಣವಿಲ್ಲ. ಏರಿಯ ಬದಲೂ ಅದೇ ಅರ್ಥದ 'ಟೇಕ' ಎಂಬುದೂ ಹಲವೆಡೆಗೆ ಉಂಟು.

ಉದಾ: ಶಿವನೇರಿ, ಅಮಳನೇರಿ, ಪಾರನೇರ, ವಡನೇರ, ಕಾನ್ಹೂರಿ, ಜಾಮನೇರ, ರಾಪಟೀಕ, ಭೋರಟೀಕ;

ii ಗದಗ ತಾಲೂಕಿನ ಒಂದು ಶಾಸನದಲ್ಲಿ ಚಿಂಚಲಿ ಎಂಬ ಗ್ರಾಮ ನಾಮವು 'ಚಿಂಚಲ' ಎಂದು ಕಾಣಿಸಿಕೊಂಡಿದೆ. 'ಚಿಂಚಿಲ' ಎಂಬುದರಲ್ಲಿ 'ಇಲ್' ಎಂದರೆ ಇರುವ ಸ್ಥಳ, ಮನೆ ಎಂಬರ್ಥದ ಕೊನೆಯ ಪದವಾಗುವುದು.

ಮಹಾರಾಷ್ಟ್ರದಲ್ಲಿ ಚಿಂಚಲಿ ಎಂಬ ಹಲವು ಗ್ರಾಮಗಳಿವೆ. ಆ ಗ್ರಾಮನಾಮದ ಕೊನೆಗೆ 'ಇಲ್' ಎಂಬುದು ಉಂಟೆಂದು ಹೇಳಬೇಕಾಗುವುದು.

iii 'ಇಲ್' ಇದರಂತೆ 'ಮನೆ' ಎಂಬುದೂ ನಾಸೀಕ, ಖಾನದೇಶಗಳ ಗ್ರಾಮನಾಮಗಳ ಕೊನೆಗೆ ಉಂಟೆಂದು ನನ್ನ ನಂಬುಗೆಯಾಗಿದೆ. ಊರು, ವಾಡಿ, ಪಾಡಿ, ಪಾಳ, ಹಾಳಗಳಿರುವಲ್ಲಿ 'ಮನೆ' ಎಂಬುದೂ ಇದ್ದರೆ ಸಹಜವಾದುದೇ ಸರಿ. ಆದರೆ ಅದು ಮಾನೆ ಎಂದು ಉಚ್ಚರಿಸಲ್ಪಡುತ್ತದೆ. ಮನೆ ಎಂಬುದಕ್ಕೆ ಸರಿಯಾಗಿ ಘರ ಎಂಬ ಊರುಗಳೂ ಅಲ್ಲಿ ಉಂಟು. ಕಾರಣ ಮಾನೆ ಎಂಬುದಕ್ಕಿಂತ ಮನೆಯೆ ಸಮರ್ಪಕವಾಗಿದೆ.

ಉದಾ: ರಾಜಮಾನೆ (ನಾ); ಘೋಡಜಮಾನೆ (ಖಾ.); ಸಾತೋನೆ (ಖಾ)=ಸಾತಮನೆ (?); ಸಾತಮನೆ (ಖಾ.); ಶಿರಸಮನಿ (ಖಾ); ರಾಜಮಾನೆ (ಖಾ.); ಕಲಮಾನೆ (ನಾ.);

IV ಈ ಬೆಳಕಿನಲ್ಲಿ ಈಗ ಕೋಪರಗಾಂವ, ಖೋಪರ ಖೇಡೆ ಇಂತಹ ಹೆಸರುಗಳ ಔಚಿತ್ಯವು ತಿಳಿದುಬರುವುದು. ಮರ್‍ಹಾಟಿಯಲ್ಲಿ ಹ್ರಸ್ವ ಒಕಾರವೇ ಇಲ್ಲ. ಆದುದರಿಂದ ಮೂಲ ಹ್ರಸ್ವಾಕ್ಷರವಿದ್ದರೂ ಅರಿಯ ಮಾತಿನಲ್ಲಿ ದೀರ್ಘವಾಗುವುದು. ಕೊಪ್ಪವು ಖೋಪವಾಗಿರಲು ಸಾಕು. ಖೋಪವಲಿ=ಕೊಪ್ಪವಳ್ಳಿ; ಗುಡ್ಡದ ಪ್ರದೇಶಕ್ಕೆ ಕುಪ್ಪೆ, ಕೊಪ್ಪ ಎಂಬ ಹೆಸರು ಕಂನುಡಿಯಲ್ಲಿದೆ. ಖಾನದೇಶದಲ್ಲಿ 'ಮಲೆ'–ಮಲೆಗಾವಗಳುಂಟು; ಮಾಳ (ಮಳ) ಖೇಡಗಳಿವೆ. 'ಮರಡಿ' ಎಂಬ ಊರೂ ಉಂಟು. ಪುಣೆಜಿಲ್ಹೆ ಧೋಂಡ ತಾಲೂಕಿನಲ್ಲಿ ೨ ಮಾಲಾಡಗಳಿವೆ. ಕಲಮಡಿ, ಕಲಗಾವಗಳು ಖಾನದೇಶದಲ್ಲುಂಟು.

ಬೀಡಗಳು, ಖಾನದೇಶದ ವರೆಗೂ ನಾಲ್ಕಾರು ಇವೆ. ಬಿಜ್ಜಲಖೇಡ ಎಂಬ ಉರು ಅಲ್ಲಿದೆ. ನವಲಿ, ನವಲೆ, ನವಲಪೂರಗಳು (ಮೋರವಡಗಳಲ್ಲದೆ) ಇವೆ. ರತ್ನಾಗಿರಿಯಲ್ಲಿ ಐನವಳಿ (ಅಯ್ಯನಪಳ್ಳಿ) ಇರುವಂತೆ ಖಾನದೇಶದಲ್ಲಿ ಐನಾಪೂರ (ಅಯ್ಯನಪುರ) ವಿದೆ.

ಇವೆಲ್ಲ ಎಡೆಗಳ ಹೆಸರುಗಳನ್ನು ಮುಂಬೈ ಸರಕಾರದ ಪ್ರಕಟನೆ—೧೯೪೩ನೆಯ ಇಸವಿಯ Village Hand-bock ಗಳಿಂದ ಆಯ್ದುಕೊಟ್ಟಿದೆ. ಹಳೆಯ ಶಾಸನಗಳ ಆಧಾರಗಳಿಂದ ಇನ್ನೂ ಹೆಚ್ಚಿನ ಬೆಳಕು ಇದರ ಮೇಲೆ ಬೀಳಬಹುದೆಂದು ತೋರುತ್ತದೆ. ಏಕೆಂದರೆ ಗುಜರಾತದ ವರೆಗೂ ಪಳ್ಳಿಗಳ ಹೆಸರು ದೊರೆಯುತ್ತವೆ. ಇಂದಿನ ಅಹಮ್ಮದಾಬಾದಿಗೆ ಪ್ರಾಚೀನ ಹೆಸರು ಆಸಾಪಳ್ಳಿ ಎಂಬುದಾಗಿದ್ದಿತೆಂದು ನಂದೋಲಾಲ ದೇ ಅವರು ಬರೆಯುತ್ತಾರೆ. (I. A. vol. 49). ಬಾರಡಪಲ್ಲಿಕಾ (ಬಾರಡೋಲಿ), ಕುಂಡೀರವಳ್ಳಿಕಾ, ಪೂಸಿಲಾವಳ್ಳಿ, (ತ) ಸಿಲಾವಳ್ಳಿ, ಏನ್‌ಹುಚವಳ್ಳಿ ಎಂಬೀ ಬಗೆಯ ಹಳ್ಳಿಗಳು ಅಲ್ಲಿದ್ದುದು ಶಾಸನಗಳಿಂದ ತಿಳಿಯುತ್ತದೆ (ಕ.ನೆಲೆ.ಪು ೧೫೬) ಬಾರಡೋಲಿ ಎಂಬುದರಲ್ಲಿರುವ ಕೊನೆಯ ಓಲಿಯು ವಳ್ಳಿಯ ಒಂದು ವಿಕೃತರೂಪವೆಂಬುದನ್ನು ಮೇಲಣ ಶಾಸನದ ಉಲ್ಲೇಖದಿಂದ ನಿಶ್ಚಿತವಾಗಿ ಕಂಡುಕೊಳ್ಳಬಹುದಾಗಿದೆ. ವಿಜಾಪೂರ ಜಿಲ್ಹೆಯಲ್ಲಿಯೂ ಒಂದು ಬಾರಡೋಲಿಯುಂಟು. ಪ್ರಾಚೀನ ಕಾಲದಲ್ಲಿ (ಚಾಲುಕ್ಯ, ರಾಷ್ಟ್ರಕೂಟರ ಆಡಳಿತದಲ್ಲಿ) ಗುಜರಾತ ಮತ್ತು ವಿಜಾಪೂರ (ಕಂನಾಡು)ಗಳ ಸಿಕಟ ಸಂಬಂಧ ವಿದ್ದುದಕ್ಕೆ ಇದು ಸಾಕ್ಷಿ.

ಅಲ್ಲದೆ ಬಾದಾಮಿ ನಾಡಿನಲ್ಲಿ ಮತ್ತು ಖಾನದೇಶದ ಅನೇಕ ಹಳ್ಳಿಗಳ ಹೆಸರಿನಲ್ಲಿ ತುಂಬ ಸಾಮ್ಯವಿದೆ. ತಾಂಬೆ, ಪರಬೇಡಿ, ಜಳಗಾವ–ಜಲಗಡ್ಡಾ, ಚಾಳಿಸಗಾವ–ನಾಲ್ವತ್ತವಾಡ, ಐನಾಪೂರ, ಖೇಡ, ಶೆಲವಡಿ, ಪಿಂಪರಿ–ಹಿಪ್ಪರಿಗಿ, ಕನ್ಹೇರಿ–ಕನ್ನೂರ, ಮಳಖೇಡ, ನಿಂಬ–ನಿಂಬರಗಿ; ಮುಲಪೂರ-ಮುಲ್ಲಾಪೂರ; ಜೋಗಳಖೇಡ–ಜೋಗುಳ; ಶಿವಣಿ–ಶಿವಣಗಿ; ಬೇಲವ್ಹಾಳ=ಬೇಲೂರ, ನಾಡಗಾವ–ನಾಡ; ಕಲಮುಡಿ, ಕಲ್ಲಗಾವ–ಕಲ್ಲಹಳ್ಳಿ; ಶಿಂದಿ ಶಿಂದಖೇಡ–ಶಿಂದಗಿ; ಶಿದವಡಿ–ಸಿದ್ಧಾಪುರ; ಅಂತೊರ್ಳಿ—ಅಂತರವಳ್ಳಿ; ನರಸಿಪೂರ-ನರಸಾಪುರ; ಭುಸಾವಳ–ಭೂಸನೂರ; ಖರಡಿ–ಕರಡಿ;

ಮುಂಗಸೆ–ಮುಂಗಲಿ; ರಾಜೂರು, ಮಂಗಳನಾಡಿ–ಮಂಗಳವೀಡು; ದೇವೂರ; 'ಅಕ್ಕಲ'ಕುವಾ–'ಅಕ್ಕಲ'ಕೋಟೆ; ಭುತೇ–ಭೂತನಾಳ; ತೋಂಡೆ–ತೊಂಡಿಕಟ್ಟೆ; ಶಿರೂಡ–ಶಿರೂರ; ಮಾಹುಲಿ; ಯಾವಲ–ಯಾವಗಲ್ಲು; ವಣೂರ–ವಣ್ಣೂರು; ಮುಂ.

ಈ ಹೋಲಿಕೆಯ ಕಾರಣವೇನೆಂಬುದನ್ನು ಆಳವಾಗಿ ಅಭ್ಯಾಸಮಾಡಿ ಕಂಡುಹಿಡಿಯುವುದು ಅವಶ್ಯವಿಲ್ಲವೆ? ಇದರ ಕಾರಣಗಳು ತಿಳಿದಲ್ಲಿ ಪ್ರಾಚೀನ ಕಂನಾಡು ಮತ್ತು ಖಾಸದೇಶಗಳ ಐತಿಹಾಸಿಕ ಸಂಬಂಧಗಳು ಬೆಳಕಿಗೆ ಬಾರದೆ ಇರಲಾರವು.

ಊರು, ಪಾಡು, ಹಾಳಗಳು ಸಾತಾರಾ, ಪುಣೆ, ನಾಸೀಕದ ವರೆಗೆ ಮಾತ್ರ ದೊರೆತರೆ 'ಕಾವೇರಿಯಿಂದಮಾ ಗೋದಾವರಿಯ ವರಂ ಇರ್ದ ನಾಡದಾ ಕಂನಾಡು' ಎಂದಲ್ಲಿ ಸೋಜಿಗಪಡದೆ ಇರಬಹುದು. ಆದರೆ ಖಾನದೇಶ, ಗುಜರಾತಗಳಲ್ಲಿ ಊರು, ಪಳ್ಳಿ, ಪಾಡಿ, ಹಾಳ, ಹಟ್ಟಿಗಳು ಇರಲು ಕಾರಣವೇನು? ಗೋದೆಯ ಉತ್ತರದ ನಾಡಲ್ಲವೆ ಇದು? ಆದಕಾರಣ, ಇನ್ನೂ 'ಗೋದಾವರಿಯ ವರೆಗೆ ಮಾತ್ರ ಒಮ್ಮೆ ಕಂನಾಡು ಇದ್ದಿತೆಂ'ದು ಕವಿರಾಜಮಾರ್ಗದ ಗಿಳಿಪಾಠ ಒಪ್ಪಿಸುವುದರಲ್ಲಿ ಹುರುಳಿಲ್ಲವೆಂದು ಹೇಳಬೇಕಾಗುತ್ತದೆ. ೯ನೆಯ ಶತಮಾನಕ್ಕೆ ಮೊದಲು ಆ ಭಾಗದಲ್ಲಿ ಕಂನುಡಿಯು ನೆಲಸಿದ್ದಿತೆಂದು ಲೆಕ್ಕಕ್ಕೆ ಹಿಡಿಯದೆ ಹೋದರೆ, ಮೇಲಣ ಗ್ರಾಮನಾಮಗಳು ಅಲ್ಲಿದ್ದದಕ್ಕೆ ಬೇರೆ ಏನಾದರೂ ಸಮಾಧಾನಕರವಾದ ಕಾರಣವನ್ನು ಹೇಳಲೆಬೇಕಷ್ಟೆ? ಸಮರ್ಪಕವಾಗಿ ಐತಿಹಾಸಿಕ ಹಿನ್ನೆಲೆಯಲ್ಲಿ ಕಾರಣವನ್ನಾದರೂ ಕೊಡಬೇಕು; ಇಲ್ಲವಾದರೆ ಅಲ್ಲಿ ಒಂದು ಕಾಲಕ್ಕೆ ಕಂನುಡಿಯು ಜನರ ಬಳಕೆಯಲ್ಲಿದ್ದಿತೆಂದು ಒಪ್ಪಿಕೊಳ್ಳುವುದಕ್ಕಾದರೂ ಸಿದ್ಧವಾಗಬೇಕೆಂದು ನನ್ನ ಮನಸು ನನಗೆ ಒತ್ತಾಯಪಡಿಸುತ್ತಲಿದೆ.

ಖಾನದೇಶಕ್ಕೆ ಹೊಂದಿರುವ ಔರಂಗಾಬಾದ ಜಿಲ್ಹೆಯಲ್ಲಿರುವ 'ಕನ್ನಡ'ವೆಂಬ ತಾಲ್ಲೂಕಿನ ಅದೇ ಹೆಸರಿನ ಊರು ಈ ಸಿಟ್ಟಿನಲ್ಲಿ ಅತ್ಯಂತ ಮಹತ್ವದ್ದಾಗಿದೆ. 'ನಡ' ಎಂಬುದು ನಾಡು ಶಬ್ದದ ಅಪಭ್ರಂಶವೆಂದು ಬಲ್ಲಿದರೆಲ್ಲರೂ ಒಪ್ಪಿದ್ದುಂಟು. ಆದಕಾರಣ 'ಕನ್ನಡ'ದ ನಿಜವಾದ ಹೆಸರು ಕಂನಾಡು. ಇದು ದೇಶವಾಚಕ ಪದ. ಇದು ಇದ್ದುದು ಗೋದೆಯ

ಉತ್ತರದಲ್ಲಿಯೆ! ಒಂದು ಕಾಲದಲ್ಲಿ ಇಲ್ಲಿಯವರೆಗೆ ಹಬ್ಬಿದುದರ ಹಿಂದುಳಿದ ಕುರುಹೆ ಈ 'ಕನ್ನಡ'. ನಾಡು ತನ್ನ ರೂಪ ಬದಲಿಸಿತು. 'ಕಂನಾಡು' ಎಂಬ ಮೂಲ ಶುದ್ಧರೂಪವೂ ಮಾರ್ಪಟ್ಟಿತು. ಆಡುವ ಭಾಷೆ ಅಂದಿನ ಜನಜೀವನದ ದ್ಯೋತಕವೆಂದು ಶಾಸ್ತ್ರಜ್ಞರು ಹೇಳುತ್ತಾರೆ. ಅದರ ಸತ್ಯತೆ ಯನ್ನಿಲ್ಲಿ ಮನಗಾಣಬಹುದು. ನಮ್ಮ ನಾಡಿನ ಉತ್ತರದ ಮರ್ಯಾದೆ ನರ್ಮದೆಯ ವರೆಗೂ ಇದ್ದಿತೆಂಬುದಕ್ಕೆ ಈ 'ಕನ್ನಡ' ತಾಲ್ಲೂಕು, ಮತ್ತು ಕನ್ನ(ಖಾನ)ದೇಶಗಳೆ ಪ್ರಮಾಣ.

ಖಾನದೇಶ, ನಾಸಿಕಗಳಲ್ಲಿ 'ಕಾನಡ' ಗೌಳಿಗಳುಂಟು; ಖಾನದೇಶವು, ಬಿಲ್ಲವರೆಂದು ಕಂನುಡಿಯ ಹೆಸರನ್ನು ಧರಿಸಿದ ಭಿಲ್ಲಜನಗಳ ನೆಲೆವೀಡು.

ಇನ್ನು, ದಕ್ಷಿಣದ ಮೇರೆ ನೀಲಗಿರಿ. ಇಲ್ಲಿಯ ಸ್ಥಳನಾಮಗಳು ಇದಕ್ಕೆ ಆಧಾರ. ದೊಡ್ಡ ಬೆಟ್ಟವೆಂದು ಇಲ್ಲಿಯ ಒಂದು ಶ್ರೇಣಿಗೆ ಹೆಸರು. 'ದೊಡ್ಡ' ಅಥವಾ 'ದೋರ' ವೆಂಬುದು ತಮಿಳಿನ ಮಾತಲ್ಲ. ಹುಲ್ಲತ್ತಿ ಎಂಬ ಸ್ಥಳವೊಂದಿದೆ. ಹಟ್ಟಿಗಳೂ ಇಲ್ಲಿ ಉಂಟು. ಆದರೆ ತಮಿಳರ ಪ್ರಭಾವ ದಿಂದಲೊ ಏನೊ ಅವುಗಳ ಹೆಸರು ಸ್ವಲ್ಪ ಮಾರ್ಪಟ್ಟಿವೆ. ಅಧಿಕಾರಟ್ಟಿ, ಬಿಕ್ಕಟಿ ಎಂಬ ಹೆಸರುಗಳೊಳಗಿನ ಅಟ್ಟಿ, ಅಟಿಗಳು ಹಟ್ಟಿಯೆಂಬಲ್ಲದೆ ಅಲ್ಲಿ ಬೇರೆ ಅರ್ಥವನ್ನು ಕೊಡಲಾರವು. ಮೇಲಕುಂದ, ಕೀಳಗುಂದ ಎಂಬ ಹೆಸರುಗಳಿವೆ. ತಮಿಳಿನಲ್ಲಿ ಕುನ್ರು ಎನ್ನುವರು. 'ಕುಂದ' ಎಂಬುದು ಕಂನಾಡವರ ಮಾತು. ನೀಲಗಿರಿಯಲ್ಲಿರುವ ಕುರುಂಬರು, ಬಡಗರು ಮೊದಲಾದವರು ಕಂನುಡಿಯನ್ನೆ ಆಡುವರು. ಕಂನಾಡವರ ಈಗಿನ ದುರ್ದೈವದ ಕಾಲದಲ್ಲಿ ನೀಲಗಿರಿಯೂ ತಮಿಳರ ಕೈವಾಡಕ್ಕೆ ಒಳಗಾಗಿದೆ.

ಕಂನಾಡಿನ ದಕ್ಷಿಣೋತ್ತರ ಮೇರೆಗಳನ್ನು ಕುರಿತು ಆಗಾಗ ಚರ್ಚೆಗಳು ಆಗಿವೆ. ಪೂರ್ವದಿಕ್ಕಿನಲ್ಲಿ ಇದು ಎಲ್ಲಿಯ ವರೆಗೆ ಹಬ್ಬಿದ್ದಿತೆಂಬುದನ್ನು ನಿಶ್ಚಿತವಾಗಿ ಹೇಳಲು ಈ ವರೆಗೆ ಬಲವಾದ ಆಧಾರಗಳು ದೊರೆತಿದ್ದಿಲ್ಲ. ಆದರೆ ಈಗ ಅವು ಶಾಸನ ಇಲಾಖೆಯವರ ಶ್ರಮದ ಫಲವಾಗಿ ಎಷ್ಟೋ ಸಿಕ್ಕಿವೆ. ಹಿಂದಿನ ಅಧ್ಯಾಯದಲ್ಲಿ ಸೂಚಿಸಿದಂತೆ ಕಂನಾಡ ಪೂರ್ವಭಾಗವು ಕರ್ನೂಲ ಜಿಲ್ಹೆಯನ್ನು ಒಳಗೊಂಡಿದ್ದಿತು. ಆ ಜಿಲ್ಹೆಯ ಹಲವೆಡೆಗೆ 'ಕಂನಾಡಿನ' ಉಲ್ಲೇಖವಿರುವ ಶಾಸನಗಳು ದೊರೆತಿವೆ.

ಕಂನಾಡು ಹಲವು ರಾಜರಿಂದ ಆಳಲ್ಪಡುತ್ತಿದ್ದಾಗ ಆಯಾ ಭಾಗದವರು ತಮ್ಮ ತಮ್ಮ ವಿಭಾಗದ 'ಕನ್ನಡ' ಕಂನಾಡು' ಗಳನ್ನು ಬೇರೆ ಬೇರೆಯಾಗಿ ಹೆಸರಿಸಿದ್ದುದು ಸ್ವಾಭಾವಿಕವಾಗಿದೆ ಆದುದರಿಂದ ಅಲ್ಲಲ್ಲಿ ಕಂಸಡ, ಕಂನಾಡು, ಕನ್ನವಾಡ, ಕನ್ನದೇಶ ಎಂಬ ಮುಂತಾಗಿ ಬೇರೆ ಬೇರೆಯಾಗಿ ಶಾಸನಾದಿಗಳಲ್ಲಿ ಕಾಣಬರುತ್ತದೆ. ಔರಂಗಾಬಾದ ಜಿಲ್ಹೆಯಲ್ಲಿ ಕಂನಡ ತಾಲೂಕು; ಖಾನದೇಶವೆಂಬುದು ಕನ್ನದೇಶವಾಯಿತು. ವಿಜಾಪೂರ ಜಿಲ್ಹೆಯ ಹುನಗುಂದ ತಾಲೂಕಿನ ಕಂದಗಲೆಯ ಸುತ್ತಲಿನ ಭಾಗಕ್ಕೆ ಕಂನಡವೆಂಬ ಹೆಸರಿತ್ತು. 'ಶ್ರೀ ಮದಯ್ಯಾವಳೆಯಯ್ನೂರ್ವರ್ ಸ್ವಾಮಿಗಳು ಮುಖ್ಯವಾಗಿ ಕನ್ನಡ ನಾಲ್ ಸಾಯಿರಕಂ [ವೇಂ] ಠಗೊಣಂ ಮಳಿಗೆಯ ಮನೆ ಕಂದಗಲೆಯ ಸ್ಥಳದಲು ಶ್ರೀ ಮನ್ಮಹಾಪ್ರಭು ಜಕ್ಕರಸನ ಮಗ ಸೋಮರಸನು........' ಎಂಬ ಈ ಶಾಸನದಲ್ಲಿ (೧೨೧೦ ಕ್ರಿ. ಶ.) ಕನ್ನಡ ನಾಲ್ಕುಸಾವಿರದ ಹೆಸರು ಬರುತ್ತದೆ. ಇದೇ ಜಿಲ್ಹೆಯ ಇನ್ನೊಂದು ೯ನೆಯ ಶತಮಾನದ ಶಾಸನದಲ್ಲಿ ಕನ್ನವುರಿ ವಿಷಯದ ಹೆಸರು ಬರುವುದು. ನೃಪತುಂಗನ ಕಾಲದ (೯ನೆಯ ಶತಕದ) ಒಂದು ಶಾಸನವು ಮೈಸೂರ ಸಂಸ್ಥಾನದಲ್ಲಿ ದೊರೆತಿದ್ದು ಅದರಲ್ಲಿ ಕನ್ನವಾಡ ಹೆಸರುಂಟು (ಮೈ. ಶಾಸನ ಇ. ವರದಿ. ೧೯೨೯). (ದ. ಉ.) ಕನ್ನಡ ಜಿಲ್ಹೆಗಳಂತೂ ಸುಪ್ರಸಿದ್ಧವಿವೆ. ನಾಲ್ಕು ಸಾವಿರದ ಕನ್ನಡ, ಎರಡು ನೂರರ ಕನ್ನಡ ಎಂದು ಮುಂತಾದ ತುಂಡು ಭಾಗಗಳನ್ನೆಲ್ಲ ಒಂದುಗೂಡಿಸಿ, ಏಕೀಕೃತವಾಗಿ ನೋಡಿದಲ್ಲಿ ಮಾತ್ರ ನಮಗೆ ಸಮ್ಯಕ್ ಕಂನಾಡು ಕಣ್ಣಿಗೆ ಬೀಳಬಲ್ಲದು. ಇಲ್ಲವಾದರೆ ಖಾನದೇಶದಲ್ಲಿ ಒಂದು ಕನ್ನ ನಾಡು, ವಿಜಾಪೂರದಲ್ಲಿ ಒಂದು ಕನ್ನವೂರ, ಮತ್ತು ನಾಡು, ಪಶ್ಚಿಮ ಕರಾವಳಿಯತ್ತ ಇನ್ನೊಂದು ಕಂನಡ ಪ್ರದೇಶ ಹೀಗಿವೆಲ್ಲ ಬೇರೆ ಬೇರೆ ಉಲ್ಲೇಖಗಳನ್ನು ಕಂಡು ದಿಗಿಲುಗೊಂಡು ಬೆಪ್ಪಾಗಬೇಕಾಗುವುದು.

ಉತ್ತರ, ದಕ್ಷಿಣ, ಪಶ್ಚಿಮಗಳಿಗೆ ಕಂನಾಡ ಹೆಸರಿನ ಸಣ್ಣ ದೊಡ್ಡ ಭಾಗಗಳು ದೃಷ್ಟಿಗೋಚರವಾಗುವಂತೆ ಪೂರ್ವಕ್ಕೆ ಇರುವ ಹೆಸರುಗಳೂ ಈಗ ಉಪಲಬ್ಧವಾಗಿವೆ. (೧) ಕರ್ನೂಲ ಜಿಲ್ಹೆಯ ನಂದಿಕೊಟಕೂರು ತಾಲ್ಲೂಕು, ಅಲ್ಲಿ ಮಿಟ್ಟ ಕಂದಾಲ ಗ್ರಾಮದ ಅಂಜನೇಯ ದೇವಸ್ಥಾನದ

ಎದುರು ನಟ್ಟಿರುವ ನಂದಿಸ್ತಂಭದ ಮೇಲೆ ವಿಜಯನಗರದ ಮೊದಲನೆಯ ಬುಕ್ಕರಾಯನ ಕಾಲದ (ಕ್ರಿ ಶ. ೧೩೭೩) ಒಂದು ಶಾಸನ ತೆಲುಗಿನಲ್ಲಿದೆ. 'ಶ್ರೀ ಸಂಗಮೇಶ್ವರ ದೇವರ ಕು ಕಂನಾಟಿಲೋ ವಿಂಟಕಂದ್ಯಾಲ ಅಂಗ ರಂಗಭೋಗಾನಕು ಸಂಗರಾಜು ಕೊಡುಕು ತಿಪ್ಪರಾಜು ಧಾರವೋ ಇಂಚು ಕೊನೆನು.' ತಿಪ್ಪರಾಜನು ಕಂನಾಡಿನೊಳಗಿನ ವಿಂಟಕಂದ್ಯಾಲವನ್ನು ದತ್ತಿಯಾಗಿ ಸಂಗಮೇಶ್ವರ ದೇವರಿಗೆ ಅರ್ಪಿಸಿದನೆಂದು ಅದರಲ್ಲುಂಟು.

ಈಗ ಆ ಊರಿಗೆ ಕಂದಾಲವೆಂದರೂ ಅದರ ಒಂದು ಕಾಲದ ಉಚ್ಚಾರವು ಕಂದ್ಯಾಲವೆಂದು ಇದ್ದುದನ್ನು ಮೇಲಣ ಶಾಸನವು ಹೇಳುತ್ತದೆ. ಕಂದಾಲ, ಕಂದ್ಯಾಲ, ನಂದ್ಯಾಲಗಳಂತಹ ಹೆಸರಿನ ಕೊನೆಯ ಅಕ್ಷರವು ಳಕಾರವಾಗಿದ್ದು ಬಳಕೆಯಲ್ಲಿ ಲಕಾರವು ಬಂದಿದೆ ಆಳ, ಹಾಳವೆಂಬುದು ಅದರ ಮೂಲ ರೂಪ. ಬಸವನಾಳ, ಹುಲ್ಯಾಳ, ನವಣ್ಯಾಳ ಮುಂತಾದ ಊರುಗಳ ಕೊನೆಗೆ ಈ ಪದವನ್ನು ಕಾಣಬಹುದು. ಹಾಳವೆಂಬುದು ತೆಲುಗಿನಲ್ಲಿ ಇಲ್ಲ. ಹಟ್ಟಿ, ಹಾಳವೆಂದಿರುವ ಊರುಗಳು ಕಂನಾಡಿನವೇ. ೧೪ ನೆಯ ಶತಮಾನದಲ್ಲಿ ಅಲ್ಲಿ ತೆಲುಗು ನುಡಿ ಬಂದಿದ್ದರೂ ಆ ಊರು ಮೂಲತಃ ಕಂನಾಡಿನದೇ ಆಗಿದ್ದಿತೆಂದು ಕಂದ್ಯಾಳ ಅಥವಾ ಕಂದಾಳವೆಂಬ ಹೆಸರಿನಿಂದಲೇ ಗೊತ್ತಾಗುತ್ತದೆ. ಅಲ್ಲಿ ತೆಲುಗು ಭಾಷೆಯು ರೂಢಿಯಲ್ಲಿ ಬಂದರೂ ಆ ಭಾಗಕ್ಕೆ 'ಕಂನಾಡು' ಎಂಬ ನಾಮಾಭಿಧಾನವಿದ್ದುದನ್ನು ಶಾಸನಗಳು ಉಸುರುತ್ತಿವೆ.

(೨) ಅದೇ ಜಿಲ್ಹೆಯ ಅದೇ ತಾಲೂಕಿನ ಮೇಲ್ಪನೂರಲ್ಲಿ ಅಂಕಾಳಮ್ಮನ ಗುಡಿಯ ಆವಾರದಲ್ಲಿ ಮೂರು ಕೋಳಾದ ಒಂದು ಶಾಸನವುಂಟು. ಕಾಕತೀಯ ಪ್ರತಾಪರುದ್ರನ (II) ಮಹಾ ಸಾಮಂತನೊಬ್ಬನು 'ಕಂನಾಡು ಏಲುಚುಂನುಂಡಿ' (ಆಳುತ್ತಿರುವ) ಕಾಲದಲ್ಲಿ ಮೂಲಸ್ಥಾನ ಸಿದ್ಧೇಶ್ವರ ದೇವರಿಗೆ ಬಿಟ್ಟ ದತ್ತಿಯ ಉಲ್ಲೇಖವಿದೆ. ಇದರ ಕಾಲ ಕ್ರಿ. ಶ. ೧೩೧೮. ಮೇಲಣ ಶಾಸನಕ್ಕಿಂತ ೫೫ ವರುಷ ಮೊದಲಿನದು. ಆಗಲೂ ಆ ಭಾಗಕ್ಕೆ ಕಂನಾಡು ಎಂಬ ಹೆಸರಿದ್ದಿತು.

(೩) ಅದೇ ಜಿಲ್ಹೆಯ ಅದೇ ತಾಲೂಕಿನ ಲಿಂಗಾಲ ಎಂಬಲ್ಲಿಯ 'ಬಸವನ್ನ ಪಾಡು' ಎಂಬ ಹೆಸರಿನ ಹೊಲದಲ್ಲಿ ನಟ್ಟ ನಂದಿಸ್ತಂಭ. ಇದರ

ಕಾಲ ಕ್ರಿ. ಶ. ೧೨೯೨. ಶ್ರೀಶೈಲ ಮಲ್ಲಿಕಾರ್ಜುನನ ಪೂಜಾರಿಗಳಿಗೆಂದು ಕಲ್ಮಠಾಧಿಪತಿಯಾದ ಪರಮ ಶಿ[ವಾ]ಚಾರ್ಯರ ಕೈಯಲ್ಲಿ ಧಾರೆಯೆರೆದು ದಾನಕೊಟ್ಟ ವಿಚಾರವು ಇದರಲ್ಲಿದೆ. ಇದರ ಭಾಷೆಯೂ ತೆಲುಗು. ಕಂನಾಡಿನ ಉಲ್ಲೇಖವು ಬರುವುದು.

ಲಿಂಗಾಲವೆಂಬುದು ಲಿಂಗಾಳ–ಲಿಂಗದಹಾಳವಾಗಿದೆ. ತೆಲಗಿನ ಪ್ರಭಾವದಿಂದ ಅದರ ಕೊನೆಯ ಹಾಳವೆಂಬ ಗ್ರಾಮವಾಚಕ ಪದವು ಮಾರ್ಪಟ್ಟಿದೆ.

(೪) ಅದೇ ಜಿಲ್ಹೆಯ ಅದೇ ತಾಲೂಕಿನ ಚೇಬೋಲು ಗಣಂಪುರದ ನಾಗರಕಟ್ಟೆಯ ಬೇವಿನ ಮರದ ಕೆಳಗೆ ಬಿದ್ದಿರುವ ಕಲ್ಲಮೇಲೆ ಕ್ರಿ. ಶ. ೧೨೪೯ ರ ಸುಮಾರಿನ ಒಂದು ಶಾಸನವಿದೆ. ಇದರಲ್ಲಿ ವಣಗದೇವನೆಂಬ ಶೂರ ನಾಯಕನು 'ಕಂನ್ನಾಂಡು' ಎಂಬ **ದೇಶವನ್ನು** ರಾಜನಿಂದ ಪಡೆದು ಆಳುತ್ತಿದ್ದನೆಂಬು ಹೇಳಿದೆ. ಈ ನಾಡಿನ ನಿರ್ದೇಶ ಬರುವ ಭಾಗವು ಇಂತಿದೆ :—

ಅಸೌ ಡಾವುಳದೇವಸ್ಯ ತನಯೋ ವಣಗಾಹ್ವಯಃ ।
ಲಬ್ಧವಾನಥ ತಂ
**ದೇಶಂ** ರಾಜ್ಞಃ ಕನ್ನಾಂಡು ನಾಮಕಮ್ ॥

ಈ ಶಾಸನವು ತೆಲುಗು ಮತ್ತು ಸಂಸ್ಕೃತ ಎರಡರಲ್ಲೂ ಇದೆ.

(೫) ಕಂನಾಡಿನಂತೆ ಕನ್ನೆನಾಡ ಉಲ್ಲೇಖಗಳೂ ದೊರೆತಿವೆ. ಅದೇ ತಾಲೂಕಿನ ಸಂಗಮೇಶ್ವರವೆಂಬಲ್ಲಿಯ ಶಾಸನದಲ್ಲಿಯ 'ಕಂನಡ ನಾಲ್ಕು ಸಾಯಿರದ' ಉಲ್ಲೇಖವು ಬರುತ್ತದೆ. ಮುಂದೆ 'ಕನ್ನೆ ಮುಂನೂಱ ಪಟ್ಟಣ ಗಂಡನಾರಾಯಣಪುರ, ಮೊಸಳಿ ಮಡುವಿನ ಸ್ಥಳ'ದಲ್ಲಿ ಕೆಲ ಸೆಟ್ಟಿಯರು ನೆರೆದು ಬಿಟ್ಟ ದತ್ತಿಯನ್ನು ಹೇಳಿದೆ. ಮೊಸಳಿ ಮಡುಗು ಎಂಬ ಗ್ರಾಮವು ಇದೇ ತಾಲೂಕಿನಲ್ಲಿ ಈ ಊರಿಂದ ಸ್ವಲ್ಪ ಅಂತರದಲ್ಲಿದೆ.

ಮುಂದೆ ಇದೇ ಶಾಸನದ ವಿವರಣೆಯಲ್ಲಿ 'ಕಂನೆ ಮೂನೂಱು' ಮತ್ತು 'ಕಂನ್ನೆ ನಾಡಿ'ನ ನಿರ್ದೇಶಗಳು ಬರುತ್ತವೆ.

ಈ ಶಾಸನವು ಸಂಪೂರ್ಣವಾಗಿ ಕಂನುಡಿಯಲ್ಲಿದೆ. ಕಲಚೂರಿ ವಂಶದ ರಾಯಮುರಾರಿ ಸೋವಿದೇವನ ಕಾಲದ್ದು. (ಕ್ರಿ. ಶ. ೧೧೭೨).

(೬) ಅದೇ ತಾಲೂಕಿನ ಸಿದ್ಧೇಶ್ವರದಲ್ಲಿ ಇರುಗುಣ ಚೋಳನೆಂಬವನು 'ಕನ್ನೆ ಮೂನೂಱು' ಮುಂತಾದ ಪ್ರದೇಶಗಳನ್ನು ಆಳುತಿದ್ದುದನ್ನು ಹೇಳಿದೆ. ಇದರ ಕಾಲ ಕ್ರಿ. ಶ. ೧೦೬೧. ಸಂಪೂರ್ಣವಾಗಿ ಕಂನುಡಿಯಲ್ಲುಂಟು.

ಮೇಲಣ ಸಂಗಮೇಶ್ವರ ಮತ್ತು ಸಿದ್ಧೇಶ್ವರದ ಎರಡೂ ಶಾಸನಗಳಲ್ಲಿ ಕಂನುಡಿಯು ಕಾಣಿಸಿಕೊಳ್ಳುವುದು. ೧೩ ನೆಯ ಶತಮಾನದ ವರೆಗೆ ಶಾಸನಗಳಲ್ಲಿ ತೆಲುಗು ಭಾಷೆ ಕಾಣಿಸಿಕೊಂಡರೆ ೧೨ ನೆಯ ಶತಮಾನದಿಂದ ಹಿಂದೆ ಕಂನುಡಿಯು ಕಣ್ಣಿಗೆ ಬೀಳುವುದು. ಹೀಗೆ ಹಿಂದೆ ಹೋದಂತೆ ಕಂನುಡಿಯು ಅಲ್ಲಿ ನಡೆಯುತ್ತಿದ್ದುದಕ್ಕೆ ಆಧಾರಗಳು ದೊರೆಯುತ್ತವೆ.

ಇದೇ ಮೇರೆಗೆ ಕನ್ನೆನಾಡಿನ ಇನ್ನೂ ಹಲವು ಉಲ್ಲೇಖಗಳು ಈಗಾಗಳೆ ಪ್ರಕಟವಾಗಿರುವ South Indian Inscriptions Vol. IX ದಲ್ಲಿ ಬರುತ್ತವೆ. 'ಅದರೊಳಗಿನ ೧೯೯ ನೆಯ ಶಾಸನದಲ್ಲಿ ಬರುವ 'ಕನ್ನೆ ಮೂನೂಱಱ ಒಳಗಿನ ದುದ್ದಿಯಾಲು, ಕುಱುಕುನ್ದೆ, ಮತ್ತು ಸಿವಪುರ ಗ್ರಾಮಗಳು ಮತ್ತು ಮೇರೆಯನ್ನು ಹೇಳುವಾಗ ಬರುವ ಆತಕೂರು ಮುಂತಾದ ಗ್ರಾಮಗಳು ಇಂದಿನ ನಂದಿಕೊಟಕೂರ ತಾಲೂಕಿನ ಪೂರ್ವ ಭಾಗದಲ್ಲಿ ಇವೆ. ಇವುಗಳಿಗೆ ಇರುವ ಇಂದಿನ ಹೆಸರುಗಳು ಕುಱುಕುನ್ದ, ದುದ್ದಿಯಾಲ, ಮತ್ತು ಶಿವಪುರ; ಇವಲ್ಲದೆ ಆತ್ಮಕೂರು ಈ ಗ್ರಾಮಗಳು ಮೇಲೆ ಕಂನಾಡಿನ ಒಳಗಿನವು ಎಂದು ಉಕ್ತವಾದ ಗ್ರಾಮಗಳು ಸುಮಾರಾಗಿ ಸಮೀಪದಲ್ಲಿ-ಒಂದೇ ಪ್ರದೇಶದಲ್ಲಿ ಇರುವುದರಿಂದ ಕಂನಾಡು=ಕನ್ನೆನಾಡು ಎಂಬ ಸಮೀಕರಣವು ಸಲ್ಲುವಂತಿದೆ.' ಎಂದು ಈ ವಿಷಯದಲ್ಲಿ ಬಲ್ಲಿದರಾದ ಶ್ರೀಮಾನ್ ದೇಸಾಯಿ ಪಾಂಡುರಂಗರಾಯರು ಪರಿಶ್ರಮಪೂರ್ವಕವಾಗಿ ಕಂಡುಹಿಡಿದು ಮೇಲಣ ವಿವರಗಳನ್ನು ತಿಳಿಸಿದ್ದಾರೆ.

ಅದೆ ಹೊತ್ತಿಗೆಯ ೧೨೧ ನೆಯ ಶಾಸನವು ಶಿವಪುರದಲ್ಲಿ ದೊರೆತುದು. ಶಿವಪುರವು ಕಂನೆ ನಾಡಿನಲ್ಲಿದ್ದುದಾಗಿ ಅಲ್ಲಿ ಬಂದಿದೆ. (೩೫—೩೯ ಸಾಲು ನೋಡಿ). ಮೇಲಣ ಸಮೀಕರಣಕ್ಕೆ ಇದು ಪುಷ್ಟಿಯನ್ನು ಕೊಡುತ್ತದೆ.

ನಂ. ೧೪೭, ೨೩೧ ಮತ್ತು ೪೦೨ ಈ ಶಾಸನಗಳಲ್ಲೂ 'ಕಂನೆ ಮೂನುಱು' ಉಕ್ತವಾಗಿದೆ.

'ಕಮ್ಮ ನಾಡು ಕಂನಾಡಿಗಿಂತ ಭಿನ್ನವಾಗಿದ್ದು ಅದರ ಉತ್ತರಕ್ಕೆ ಇದ್ದಂತೆ ಶಾಸನ ಪ್ರಮಾಣಗಳಿಂದ ವ್ಯಕ್ತವಾಗುತ್ತದೆ,' ಎಂದೂ ಶ್ರೀ ದೇಶಾಯಿಯವರು ತಮ್ಮ ಕಂಡಿತವನ್ನು ತಿಳಿಸಿದ್ದಾರೆ. ವಿಜಯನಗರದ ಮಲ್ಲಿಕಾರ್ಜುನನ ಕಾಲದ (೧೫೧೩ ಕ್ರಿ. ಶ) ಶ್ರೀಶೈಲದ ಶಾಸನದಲ್ಲಿ ಕಮ್ಮನಾಡು ಮತ್ತು ಕನ್ನಾಡುಗಳ ಬೇರೆ ಬೇರೆ ಉಲ್ಲೇಖಗಳಿವೆ.

ಈ ಆಧಾರಗಳಲ್ಲದೆ, ಶ್ರೀಶೈಲದ ಹತ್ತಿರದ ನಾಡಿಗೆ ಕಣ್ಣವಿಷಯ ವೆಂಬ ಹೆಸರಿದ್ದ ಬಾದಾಮಿಯ ರಣರಸಿಕ ವಿಕ್ರಮ ಚಾಲುಕ್ಯರ ಕಾಲದ ಇನ್ನೊಂದು ತಾಮ್ರಪಟವೂ ಬಹಳ ಮಹತ್ವದ್ದಾಗಿದೆ. ಆದರಲ್ಲಿ 'ಕಣ್ಣ ವಿಷಯ' ವೆಂದು ಹೇಳಿದ ಪ್ರದೇಶಕ್ಕೇ 'ಕರ್ಣಾಟ ಸೀಮಾ' ಎಂಬುದಾಗಿಯೂ ಇನ್ನೊಂದೆಡೆ ಉಲ್ಲೇಖವಿದ್ದುದನ್ನು ಡಾ. ಎನ್. ವೆಂಕಟರಮಣಯ್ಯನವರು ಕಂಡುಹಿಡಿದಿದ್ದಾರೆ (ಕ. ನೆಲೆ ಪು. ೧೦೭).

ಇಂತಿವೆಲ್ಲ ಉಲ್ಲೇಖಗಳಿಂದ, ಕರ್ನೂಲ ಜಿಲ್ಹೆಯಲ್ಲಿ ದೊರೆವ ಕನ್ನಾಡು, ಕನ್ನೆನಾಡು, ಕಣ್ಣವಿಯ ಎಂಬೀ ಹಲವಾರು ನಿರ್ದೇಶಗಳಿಂದ ಈ ಜಿಲ್ಹೆಯ ಕರ್ನೂಲವೆಂಬ ಹೆಸರು ಮೂಲದಲ್ಲಿ ಕಣ್ಣನೂರೆಂದಿರ ಬಹುದೇ ? ಎಂಬ ಸಂದೇಹವು ತಲೆದೋರುತ್ತದೆ

ಅದೇನೆ ಇದ್ದರೂ ಈ ಆಧಾರಗಳಿಂದ ೧೬ನೆಯ ಶತಮಾನದ ವರೆಗೂ ಕರ್ನೂಲ ಜಿಲ್ಹೆಯು ಕಂನಾಡಿನ ಭಾಗವಾಗಿದ್ದುದನ್ನು ಯಾರೂ ಅಲ್ಲಗಳೆಯುವುದು ಸಾಧ್ಯವಿಲ್ಲ.

ಇನ್ನೂ ಒಂದು ಸಂಗತಿಯು ಇಲ್ಲಿ ನಿಶ್ಚಿತವಾಗಿ ಗೊತ್ತಾಗುತ್ತಿದೆ. 'ಕನ್ನಡ' ವೆಂಬುದರ ಮೂಲ ಶುದ್ಧರೂಪವು 'ಕಂನಾಡು' ಎಂಬ ಬಗೆಗೆ ಈಗ ಸಂದೇಹಕ್ಕೆ ಎಡೆಯೆ ಉಳಿಯುವುದಿಲ್ಲ. 'ಕಂನಾಡು' ಇದು ಮೂಲ ರೂಪವೆಂದು ಒಪ್ಪಿಕೊಂಡರೂ ಕೆಲವರಿಗೆ 'ಕಂನಾಡು' ಎಂಬ ಕೂಡು-ನುಡಿಯೊಳಗಿನ ಮೊದಲಿನ ಪದದ ಬಗೆಗೆ ಸಂದೇಹವಿದ್ದಿತು. ಕರಿದು+ನಾಡು ಅಥವಾ ಕರು+ನಾಡು; ಇದು ಕೂಡುವಾಗ ಕಂನಾಡು ಎಂದು ಏಕೆ ಆಗಿರಲಿಕ್ಕಿಲ್ಲ? ಎಂದು ಅವರ ಊಹೆಯಿದ್ದಿತು. ಆದರೆ ಆ ಊಹೆಯೂ ನಿರಾಧಾರವೆಂದು ಸಿದ್ಧವಾಯಿತು. ಕಣ್ಣ+ನಾಡು; ಅಥವಾ ಕನ್ನೆ+ನಾಡು ಎಂಬುದು ಶಾಸನಗಳ ಆಧಾರದಿಂದಲೇ ಈಗ ನಿಶ್ಚಿತವಾಗಿದೆ. ಕಣ್ಣೂರು

ಕಣ್ಣಂಬಾಡಿ, ಕನ್ನೇಶ್ವರ, ಕನ್ನೆ ಮೊದಲಾದ ಊರುಗಳ ಪಟ್ಟಿಯನ್ನು ಹಿಂದಿನ ಅಧ್ಯಾಯದಲ್ಲಿ ಕೊಟ್ಟಿದೆ. ಅವುಗಳಿಂದಲೂ ಈ ಮಾತು ದೃಢಪಡುತ್ತಿದೆ. ಆದುದರಿಂದ ಕರಿದು+ನಾಡು ಅಥವಾ ಕರು+ನಾಡು ಎಂಬುದು ನಿರಾಧಾರವಾದ ವಿಚಾರವೆಂದು ಬೇರೆ ಹೇಳಬೇಕಾಗಿಲ್ಲ.

---

# ೯. ಸಂಸ್ಕೃತಿ ವಿಚಾರ

## ಹಟ್ಟಿಕಾರರೂ ಆರ್ಯರೂ

ಈ ಮೊದಲು ವಿವರಿಸಿದಂತೆ, ಹಟ್ಟಿಕಾರರೆಂದರೆ ವೇದದಲ್ಲಿ ಉಲ್ಲೇಖಿತ ಪತ್ತಿಗಳೂ ಯದು–ತುರ್ವಶರೂ ಎಂಬುದು ನಿಜವಿದ್ದರೆ ಆರ್ಯರೊಡನೆ ಇವರ ಬೆಟ್ಟಿಯು ಪಂಜಾಬ–ಸಿಂಧಗಳಲ್ಲಿಯೆ ಮೊದಲು ಆಯಿತೆಂಬುದು ಸ್ಪಷ್ಟವಿದೆ.

ಋಗ್ವೇದದ ವರ್ಣನೆಗಳಿಂದ ಹಟ್ಟಿಕಾರರು ಒಂದು ಕಾಲಕ್ಕೆ ಆರ್ಯರ ವಿರೋಧಿಗಳಾಗಿದ್ದಂತೆ, ಮುಂದೆ ಅವರು ಒಬ್ಬರೊಬ್ಬರಿಗೆ ಬೇಕಾದವರಾದುದೂ ಕಂಡು ಬರುತ್ತದೆ. ಋಗ್ವೇದದಲ್ಲಿ ಹತ್ತು ಮಂಡಲಗಳಿವೆ. ಇವುಗಳಲ್ಲಿ ೨ರಿಂದ ೭ ವರೆಗೆ ಇರುವ ಆರು ಮಂಡಲಗಳು ಅತಿಪುರಾತನ ಕಾಲದುವೆಂದು ಬಲ್ಲಿದರ ಮತವಿದೆ. ಈ ಆರೂ ಮಂಡಲಗಳಲ್ಲಿ ಒಂದು ಬಗೆಯ ಸುಸಂಬದ್ಧತೆಯಿದೆ. ಇವನ್ನೆಲ್ಲ ರಚಿಸಿದ ಋಷಿಗಳು ಒಂದೇ ಮನೆತನದವರಾಗಿದ್ದಾರೆ. ಆದುದರಿಂದ ಋಗ್ವೇದ ಈ ಭಾಗಕ್ಕೆ 'ಮನೆತನದ ಸೂಕ್ತಗಳು' ಎಂದು ಹೇಳುವ ವಾಡಿಕೆಯಿದೆ ಅತಿಪುರಾತನದ ಈ ಭಾಗಕ್ಕೆ ೧ ಮತ್ತು ೮ನೆಯ ಮಂಡಲಗಳನ್ನು ಮುಂದಿನ ಕಾಲದಲ್ಲಿ ಜೋಡಿಸಲಾಯಿತು. ಅಲ್ಲಿ ಇಲ್ಲಿ ಸೇರಿದ್ದ ಸೋಮಸೂಕ್ತಗಳನ್ನೆಲ್ಲ ಒಂದೆಡೆಗೆ ಆಯ್ದ ಬಳಿಕ ೯ನೆಯ ಮಂಡಲವು ಸಿದ್ಧವಾಯ್ತು. ಕೊನೆಗೆ ಪರಿಶಿಷ್ಟದಂತೆ ೧೦ನೆಯ ಮಂಡಲವೊಂದು ಬೆಳೆದು ಬಂದಿತು.

ಆರ್ಯರ ಮತ್ತು ಯದು-ತುರ್ವಶರ ವೈರವು ಪುರಾತನ ಭಾಗದಲ್ಲಿಯೆ ವಿಶೇಷವಾಗಿ ಕಂಡುಬರುವುದು. (VII. ೧೯೮). ಮುಂದಿನ ಕಾಲದ ಸೂಕ್ತಗಳಲ್ಲಿ ಇದು ಅಷ್ಟು ಸ್ಪಷ್ಟವಾಗಿ ಇಲ್ಲ. ಕೆಲವೆಡೆಗೆ ವಿರೋಧವು

ತೋರಿದರೆ ಕೆಲವೆಡೆಗೆ ಸ್ನೇಹವಿದ್ದುದೂ ಕಂಡುಬರುವುದು. (IX. ೬೧. ೨; VIII. ೯.೪; I. ೧೭೪. ೯)

ಕೆಲವು ಯುರೋಪೀಯ ವಿದ್ವಾಂಸರ ಅಭಿಪ್ರಾಯದಂತೆ ವೇದ ಕಾಲವು ಕ್ರಿ. ಶಕಕ್ಕೆ ಮೊದಲು ೧೦೦೦ದಿಂದ ೫೦೦ವರೆಗೆ; ಆದರೆ ಇದು ಇನ್ನುಳಿದ ವರ್ಣನೆಗಳಿಗೆ ವೇದದಲ್ಲಿ ಸರಿಹೊಂದುವುದಿಲ್ಲವೆಂದು ಡಾ. ವಿಂಟರ್ನಿಟ್ಜನು ಕ್ರಿಸ್ತ ಪೂರ್ವ ೨೫೦೦ ಅಥವಾ ೨೦೦೦ ದಿಂದ ೭೫೦ ಅಥವಾ ೫೦೦ ವರೆಗೆ ವೇದಕಾಲವಿರಬೇಕೆಂದು ಪ್ರತಿಪಾದಿಸಿದ್ದಾನೆ.

ಆರ್ಯರು ಬರುವ ಮೊದಲು ಸಿಂಧ-ಪಂಜಾಬಿನಲ್ಲಿ ಹಟ್ಟಿಗಳನ್ನು ಕಟ್ಟಿಕೊಂಡು ಯದು–ತುರ್ವಶರೂ, ಕುರುವರೂ, ಪಣಿಗಳೂ ನೆಲಸಿದ್ದರು. ಈಗ ಹರಪ್ಪಾ, ಮೊಹೆಂಜೊದಾರೊದಲ್ಲಿ ದೊರೆವ ಪುರಾತನ ಪಟ್ಟಣಗಳು ಈ ಯದು–ತುರ್ವಶ–ಕುರುವರ ಬೀಡುಗಳಾಗಿರುವ ಸಂಭವವಿದೆ. ಆರ್ಯರ ಮೊದಲನೆಯ ಗುಂಪು ಇವರನ್ನು ವಿರೋಧಿಸಿದರೂ ಮುಂದಿನ ಕಾಲದಲ್ಲಿ ಬಂದವರು ಇವರಿಗೆ ಅನುಕೂಲರಾಗಿಯೆ ನಡೆದುಕೊಂಡರೆಂದು ಹೇಳಬಹುದು. ಹಟ್ಟಿಕಾರರ ಮತ್ತು ಆರ್ಯರ ಸಂಸ್ಕೃತಿಯ 'ಕೂಡಲ-ಸಂಗಮ'ಕ್ಕೆ ಅಂದಿನಿಂದಲೆ ಆರಂಭವಾಯಿತು. ಎರಡೂ ಪಂಗಡಗಳು ಹತ್ತಿರ ಹತ್ತಿರದಲ್ಲಿ ಇದ್ದು ಬಾಳುವಾಗ ಅವರ ನಡೆವಳಿ, ನುಡಿವಳಿಗಳ ಪರಿಣಾಮವು ಪರಸ್ಪರರ ಮೇಲೆ ಆಗಿ, ಹೊಸತೊಂದು ಸಮ್ಮಿಶ್ರ ಸಂಸ್ಕೃತಿಯು ತಲೆದೋರಲಾರಂಭಿಸಿತು.

ದಕ್ಷಿಣಾಪಥದಲ್ಲಿ ಆರ್ಯರು, ಎಂದರೆ ಬ್ರಾಹ್ಮಣರು ಅಥವಾ ಋಷಿಗಳು ಬಂದು ನೆಲಸಿದ ಬಗೆಯನ್ನು ನೆನೆದುಕೊಂಡರೆ, ಅತಿಪುರಾತನ ಕಾಲದಲ್ಲಿ ಸಿಂಧ–ಪಂಜಾಬಿನಲ್ಲಿಯೂ ಇದೆ ತೆರನಾಗಿ ನಡೆದಿರಬಹುದೆಂದು ಊಹಿಸಿಕೊಳ್ಳಲು ಅಡ್ಡಿಯಿಲ್ಲ. ನದೀ ತೀರದಲ್ಲಿ ಅಥವಾ ಪರ್ವತಗಳ ಆಶ್ರಯದಲ್ಲಿ ಜಲಾಶಯಗಳ ಅನುಕೂಲತೆಯನ್ನು ನೋಡಿಕೊಂಡು ಇವರು ತಮ್ಮ 'ಆ–ಶ್ರಮ'ಗಳನ್ನು ಕಟ್ಟಿಕೊಂಡು, ಶ್ರಮಜೀವಿಗಳಾಗಿ ಮೊದಲು ವಾಸಿಸಿದರು. ನೆರೆಹೊರೆಯ ಜನದಲ್ಲಿ ತಮ್ಮ ದೈವೀಶಕ್ತಿಯ ವಿಷಯಕ್ಕೆ ನಂಬುಗೆಯುಂಟಾಗುವಂತೆ ಮಾಡಿದರು; ತಮ್ಮ ಶೀಲ, ಆಚಾರ, ವಿಚಾರಗಳ ಪ್ರಭಾವಕ್ಕೆ ಒಳಗಾದ ಜನರ ಹಿತಚಿಂತಕರಾಗಿ ಎಂದರೆ 'ಪುರೋಹಿತ'ರಾಗಿ

ಬಾಳಲಾರಂಭಿಸಿದರು. ಈ ರೀತಿಯಿಂದ ಇವರು ಸಾಮಂತರ, ಸನ್ನಿಯರ, ರಾಜರ, ಮಹಾರಾಜರ ಕುಲಪುರೋಹಿತರಾಗಿ ಮುಂದೆ ಬಾದರು. ನಮ್ಮ ನಾಡಿನಲ್ಲಿ ಎಂದಿನಿಂದಲೂ ಪರಂಪರೆಯೆ ಹೀಗಿದೆ. ಬ್ರಾಹ್ಮಣನ ಮಂತ್ರ ಶಕ್ತಿಯ ನೆರವಿನಿಂದ ರಾಜರು ತಮ್ಮ ರಾಜ್ಯಭಾರವನ್ನು ನಡೆಸುತ್ತಿದ್ದರು. ನಿರ್ವಂಚನೆಯಿಂದ ನಿಜವಾಗಿಯೂ ಹಿತಚಿಂತಕನಾಗಿ—ಪುರೋಹಿತನಾಗಿ, ಮೊದಲು ತನ್ನ ಕುಳಗಳ ಕಲ್ಯಾಣಕರ್ತನೆಂಬ ಶ್ರದ್ಧೆಯು ಜನಸಾಮಾನ್ಯರಲ್ಲಿ ದೃಢವಾಯಿತು. ಅದರಿಂದ ಬ್ರಾಹ್ಮಣನಿಗೆ ತನ್ನ ಐಹಿಕ ಸಂಪತ್ತನ್ನೂ ಸಂಗ್ರಹಿಸಲು ಇಂಬುದೊರೆಯಿತು.

ಬ್ರಾಹ್ಮಣನಲ್ಲಿ ಭೌತಿಕ ಸಂಪತ್ತು ಹೆಚ್ಚಾದಂತೆ ದೈವೀಸಂಪತ್ತು ಕಡಿಮೆಯಾಗಲಾರಂಭಿಸಿರಬೇಕು. ತನ್ನ ಜೀವಂತ ಗುಣಗಳ ಬಲದಿಂದ ಸಮಾಜದಲ್ಲಿ ಪ್ರತಿಷ್ಠಿತನಾದ ಬ್ರಾಹ್ಮಣನಿಗೆ, ಬಳಿಕ ತನ್ನ ಜಾತಿಯ ಹೆಸರಿನ ಬಲದಿಂದಲೇ ಮಾನ ಮರ್ಯಾದೆಗಳನ್ನು ಉಳಿಸಿಕೊಳ್ಳುವ ಹೊತ್ತು ಬಂದಿತು. ಬ್ರಾಹ್ಮಣನ ಸ್ಥಾನ, ಮಾನ, ಮಹತ್ವಗಳನ್ನು ಹೇಳುವ ಶಾಸ್ತ್ರವಚನ, ಪುರಾಣಕತೆಗಳ ಆಧಾರ ಹಿಡಿದು ಈ ಸಮಾಜವು ತನ್ನ ಅಸ್ತಿತ್ವವನ್ನು ಕಾಪಾಡಿಕೊಂಡು ಇರಬೇಕಾದ ಕಾಲವೂ ಬಂದಿತು. ಆದರೂ ಕಾಲಕಾಲಕ್ಕೆ ಎಷ್ಟೋ ತೇಜೋನಿಧಿಗಳು, ಜ್ಞಾನಿಗಳು ತಲೆದೋರಿ, ಈ ಸಮಾಜದೊಳಗಿಂದ ಬ್ರಾಹ್ಮಣ್ಯವು ತೀರ ನಷ್ಟವಾಗಿಲ್ಲವೆಂಬುದನ್ನು ಲೋಕದ ನಿದರ್ಶನಕ್ಕೆ ತಂದುಕೊಡುತ್ತಿದ್ದರು. ಅಂತಹರ ಹೆಸರಿನ (ಪುಣ್ಯದ) ಆಧಾರದಿಂದ ಉಳಿದ ಹೆಸರಿನಬ್ರಾಹ್ಮಣರು ಬದುಕಿಕೊಂಡು ಬಂದರು. ಬ್ರಾಹ್ಮಣ್ಯವೆಂಬುದು ಮೊದಲು ಪರಿಶ್ರಮದಿಂದ, ತಪಸ್ಸಿನಿಂದ ಪಡೆಯಬೇಕಾದ ಸಿದ್ಧಿಯಾಗಿದ್ದಿತು. ಮುಂದೆ ಅದು ಒಂದು ಜಾತಿಯಾದಂತೆ ಅದರ ಸ್ವರೂಪವು ಬದಲಾಯಿತು.

ಭಾರತಕ್ಕೆ ಬ್ರಾಹ್ಮಣರು ಹೆಂಡಿರನ್ನು ಕಟ್ಟಿಕೊಂಡು ಬಂದಿದ್ದರೆಂದು ಹೇಳಲಿಕ್ಕಾಗುವುದಿಲ್ಲ. ಆದುದರಿಂದ ಅವರಿಗೆ ಈ ನಾಡವರೊಡನೆ ಶರೀರ ಸಂಬಂಧವು ಅನಿವಾರ್ಯವಾಯಿತು. ಕೆಲರಿಗೆ ಈ ಮಾತು ಒಪ್ಪಿಗೆಯಾಗದಿದ್ದರೂ ಅನುಲೋಮ ವಿವಾಹಗಳು ಧರ್ಮಸಮ್ಮತವಾಗಿದ್ದುವೆಂಬುದು ಸ್ಮೃತಿಗಳಿಂದಲೆ ಸಿದ್ಧವಾಗುತ್ತದೆ. ಬ್ರಾಹ್ಮಣನು ಬ್ರಾಹ್ಮಣೆಯಲ್ಲದವಳನ್ನು

ಮದುವೆಯಾಗುತ್ತಿದ್ದನು. ಅನುಲೋಮ ವಿವಾಹದ ಸಂತತಿಗೆ ಕೆಲವು ಕಾಲದ ವರೆಗೆ ತಂದೆಯ ಜಾತಿಯೆ ಪ್ರಾಪ್ತವಾಗುತ್ತಿತ್ತು. ಮೊದಲು ಅದಕ್ಕೆ ಸಾಮಾಜಿಕ ವಿರೋಧವಿದ್ದಿಲ್ಲ. ಜಮದಗ್ನಿಯು ರೇಣುಕೆಯನ್ನು ಮದುವೆಯಾದ; ಅವಳು ಕ್ಷತ್ರಿಯ ಕನ್ಯೆ. ಆದರೂ ಅವಳಲ್ಲಿ ಹುಟ್ಟಿದ ಪರಶುರಾಮನು ಬ್ರಾಹ್ಮಣನೆಂದೇ ಆಂದಿನವರು ಬಗೆಯುತ್ತಿದ್ದರು.

## ಆರಿಯರ ಉದಯ

ಪ್ರತಿಲೋಮ ವಿವಾಹವು ಶಾಸ್ತ್ರಸಮ್ಮತವಿದ್ದಿಲ್ಲ. ಆದರಿಂದ ಅಂತಹ ಸಂಬಂಧಗಳ ವಿವರಣೆಯು ದೊರೆಯುವುದು ದುರ್ಲಭ. ಆದರೂ ಯಯಾತಿ ಮತ್ತು ದೇವಯಾನಿಯ ಮದುವೆಯಾದುದನ್ನು ಪುರಾಣಗಳು ಹೇಳುತ್ತವೆ. ಯಯಾತಿಯಿಂದ ದೇವಯಾನಿಯು ಹೊಟ್ಟೆಯಲ್ಲಿ ಹುಟ್ಟಿದ ಹಿರಿಯ ಮಗನೆ ಯದುರಾಜನೆಂದು ಪುರಾಣ ಕತೆಯಿದೆ. ತುರ್ವಸುವು ಇವರ ಕಡೆಗೂನು. ದೇವಯಾನಿಯು ಶುಕ್ರಾಚಾರ್ಯನ ಮಗಳು. ಶುಕ್ರಾಚಾರ್ಯನು ಅಸುರರ ಎಂದರೆ ಆರ್ಯವಿರೋಧಿಗಳ ಗುರುವಾಗಿದ್ದನು. ಆ ಪಂಗಡದ ವೃಷಪರ್ವ ರಾಜನ ಮಗಳಾದ ಶರ್ಮಿಷ್ಠೆಯು ಯಯಾತಿಯ ಎರಡನೆಯ ಹೆಂಡತಿ. ಶರ್ಮಿಷ್ಠೆಯಿಂದ ಪೂರುವು ಹುಟ್ಟಿದನು. ಇವನು ಕೌರವ-ಪಾಂಡವರ ಮೂಲಪುರುಷನು. ಈ ತಳಿಯು ಅಸುರಪುತ್ರಿಯ ಸಂತತಿ

ಋಗ್ವೇದದಲ್ಲಿ ಯದು-ತುರ್ವಸುಗಳ ಹುಟ್ಟಿನ ಮಾತೆ ಬಂದಿಲ್ಲ. ಅಲ್ಲಿ ಇವರು ಇಂದ್ರನೊಡನೆ ಕಾದಿದ ಅಥವಾ ಇಂದ್ರನ ಬೆಂಬಲದಿಂದ ಅನೇಕ ವೈರಿರಾಜರನ್ನು ಸೋಲಿಸಿ ಓಡಿಸಿದ ವರ್ಣನೆಗಳು ಮಾತ್ರ ದೊರೆಯುತ್ತವೆ. ಮಹಾಭಾರತದ ಕಾಲಕ್ಕೂ ಋಗ್ವೇದ ಕಾಲಕ್ಕೂ ಎರಡುವರೆ ಸಾವಿರಕ್ಕಿಂತ ಹೆಚ್ಚಿನ ಕಾಲಾವಧಿಯ ಅಂತರವಿದೆ. ಭಾರತ ಮತ್ತು ಪುರಾಣಗಳಲ್ಲಿ ಮರೆತುಹೋಗುತ್ತಿದ್ದ ವೇದಕಾಲದ ಕತೆ, ನಡೆವಳಿಗಳನ್ನು ಸಂಗ್ರಹಿಸಿ ಸಾಧ್ಯವಾದಷ್ಟು ಅವನ್ನು ಜೀವಂತವಾಗಿ ಉಳಿಸಿಕೊಳ್ಳಲು ನಡೆದ ಪ್ರಯತ್ನವು ಕಂಡುಬರುತ್ತದೆ. ಅಂತಹ ಒಂದು ಪ್ರಯತ್ನವೆ ಯದು-ತುರ್ವರ ಕತೆಯ ಸಂಗ್ರಹವು.

ವೇದದಲ್ಲಿ ಕಾಣಿಸಿಕೊಳ್ಳುವ ಯದು-ತುರ್ವರು ಒಂದು ಜನಾಂಗ. ಯದುವಾಗಲಿ, ತುರ್ವಸುವಾಗಲಿ ಒಂದು ವ್ಯಕ್ತಿಯಲ್ಲ ಒಂದು ತಂಡ.

ಯದು ಮತ್ತು ತುರ್ವಸು ಎಂಬ ಹೆಸರಿಗೆ ಇರುವ ಅರ್ಥವನ್ನು (ಅದನ್ನು ಹಿಂದೆ ವಿವರಿಸಿದೆ, ಪು. ೭೬, ೭೭.) ನೋಡಿದರೂ ಸರಿ. ಅದು ಒಂದು ವ್ಯಕ್ತಿಯು ಇಟ್ಟ ಹೆಸರು ಎಂಬುದಕ್ಕಿಂತ ಒಂದು ಜನದ ಸಾಮಾನ್ಯ ನಾಮವೆಂದು ಬಗೆಯುವುದೆ ಲೇಸೆಂದು ತೋರುತ್ತದೆ. ಆದರೆ ಸು. ೨೫೦೦-೩೦೦೦ ವರುಷಗಳ ತರುವಾಯ ಸಂಗ್ರಹಿಸಿದ ಹಳೆಯ ಕತೆಯಲ್ಲಿ ನಡುವಿನ ಕಾಲಾವಧಿಯೊಳಗೆ ಆಗಿರುವ ಕೆಲವೊಂದು ಪರಿವರ್ತನಗಳ ಛಾಯೆಯೂ ಕಾಣಿಸಿಕೊಳ್ಳುವ ಸಂಭವವಿದೆ. ಆ ಪರಿವರ್ತನವೆಂದರೆ ಆರ್ಯರೂ ಮತ್ತು ಹಟ್ಟಿಕಾರರಲ್ಲಿ ನಡೆದಿರಬಹುದಾದ ವೈವಾಹಿಕ ಸಂಬಂಧ. ಪೌರಾಣಿಕ ಯದು-ತುರ್ವರ ಕತೆಯಲ್ಲಿ ಆ ಸೂಚನೆಯೆ ಇದೆ.

ಆರ್ಯರು ಹಟ್ಟಿಕಾರರ ಹೆಣ್ಣುಗಳನ್ನು ಮದುವೆಯಾದುದರಿಂದಾಗಲಿ, ಅಥವಾ ಹಟ್ಟಿಕಾರರು ಆರ್ಯರ ಕನ್ಯೆಗಳನ್ನು ಕೈಹಿಡಿಯುವುದರಿಂದಾಗಲಿ, ಹುಟ್ಟಿದ ಸಂತತಿಯಿಂದಲೆ ಮುಂದೆ ಆರಿಯರೆಂಬ ಜನವು ನಿರ್ಮಾಣವಾಯಿತು. ವ್ಯಾಸ, ಪರಶುರಾಮರಾದಿಗಳಂತೆ ಹಲವರಿಗೆ ತಂದೆಯ ಜಾತಿಯೆ ಒಂದು ಕಾಲಕ್ಕೆ ದೊರೆತರೂ ಈ ಸಂಪ್ರದಾಯವು ಸ್ಮೃತಿಕಾಲದ ಹೊತ್ತಿಗೆ ಸಂಪೂರ್ಣ ನಿಂತುಹೋಯಿತು. ಅನುಲೋಮವಿವಾಹಕ್ಕೆ ಸಮ್ಮತಿಸಿದರೂ ಶಾಸ್ತ್ರಗಳು ಅವರ ಮಕ್ಕಳಿಗೆ ತಂದೆಯ ಜಾತಿಯೆ ಪ್ರಾಪ್ತವಾಗುವುದೆಂಬುದನ್ನು ಒಪ್ಪಲಿಲ್ಲ. ಆ ಜಾತಿಯ ಹಕ್ಕು ಬರಬೇಕಾದರೆ ನಡುವೆ ಸಾಮಾನ್ಯವಾಗಿ ಅಶಕ್ಯವಾದ ಹಲವು ಅಡ್ಡಿಗಳನ್ನು ಹಾಕಲಾಯಿತು.

## ಬ್ರಹ್ಮ-ಕ್ಷತ್ರಿಯರು

ವಿಖ್ಯಾತ ಶ್ರವಣಬೆಳುಗೊಳದ ಗೊಮ್ಮಟೇಶ್ವರನನ್ನು ನಿಲ್ಲಿಸಿದ ಚಾವುಂಡರಾಯನು ಬ್ರಹ್ಮಕ್ಷತ್ರಿಯನು. ಬಂಗಾಳದಲ್ಲಿ ಆಳಿದ ಸೇನ-ಬಲ್ಲಾಳ ಮನೆತನದ ರಾಜರು ಕರ್ಣಾಟದ ಬ್ರಹ್ಮಕ್ಷತ್ರಿಯ ಕುಲದವರೆಂದು ಅವರ ವಂಶಾವಳಿಯಲ್ಲಿದೆ. ಮೊದಲು ಕ್ಷತ್ರಿಯರಿದ್ದು ಬ್ರಹ್ಮಜ್ಞಾನಿಗಳಾಗಿ ಬ್ರಹ್ಮ-ಕ್ಷತ್ರಿಯರೆಂದೆನಿಸಿದರೂ ಅಥವಾ ಮೊದಲು ಬ್ರಾಹ್ಮಣರಿದ್ದು ಬಳಿಕ ಕ್ಷತ್ರಿಯತ್ವವು ಇವರಿಗೆ ಬಂದಿತೆಂದು ಅರ್ಥಮಾಡಬೇಕೆ? ಕದಂಬ ಮಯೂರಶರ್ಮನು ಮೊದಲು ಬ್ರಾಹ್ಮಣನು. ಮುಂದೆ ಈ ರಾಜವಂಶ

ದವರು 'ವರ್ಮ' ಎಂದು ಹಚ್ಚಿಕೊಳ್ಳಲಾರಂಭಿಸಿ ತಾವು ಕ್ಷತ್ರಿಯರಾದುದನ್ನು ಸೂಚಿಸಿದ್ದಾರೆ.

## ವಂಶ ಮಿಶ್ರಣ

ಆರ್ಯರ ನಂತರದಲ್ಲೂ ದೇಶದಲ್ಲಿ ಅನೇಕ ಪರಕೀಯ ಜನಾಂಗಗಳು ನುಗ್ಗಿಬಂದಿವೆ ಅವರಲ್ಲಿ ಅನೇಕರು ಈ ದೇಶದಲ್ಲಿ ನೆಲಸಿ ನಾಡಿನ ಜನಗಳೊಡನೆ ಒಂದಾದರು ಹೊಸದಾಗಿ ಬಂದವರೊಡ ಮೊದಲು ವಿರೋಧೀ ಭಾವವು ಇರುವುದು ಸ್ವಾಭಾವಿಕವಾದರೂ ಹತ್ತಿರ ಹತ್ತಿರ ನೆಲಸಿದ ಬಳಿಕ ಒಬ್ಬರೊಬ್ಬರೊಳಗಿನ ಒಳ್ಳೆತನವು ತಿಳಿದು ಬಂದು ಅವರಲ್ಲಿ ಮನುಷ್ಯ ಸಹಜವಾದ ಸಹಾನುಭೂತಿ, ಸಹಕಾರ ಭಾವನೆ ತಲೆದೋರುವುದು. ಸಮಾನ ಸಂಸ್ಕೃತಿ, ಸಾಮಾಜಿಕ ಸ್ಥಾನಮಾನಗಳಲ್ಲಿಯ ಸಮಾನತೆಗೆ ಅನುಸರಿಸಿ ಅವರಲ್ಲಿ ವೈವಾಹಿಕ ಸಂಬಂಧಗಳು ಉಂಟಾದುವು. ಚಂದ್ರಗುಪ್ತನು ಸೆಲ್ಯುಕಸನ ಮಗಳನ್ನು ಮದುವೆಯಾದನು; ಅನೇಕ ಗ್ರೀಕರಾಜರು ಹಿಂದೂ ಧರ್ಮವನ್ನು ಸ್ವೀಕರಿಸಿ ಈ ದೇಶದಲ್ಲಿ ನೆಲಸಿದ್ದು ಕಾರ್ಲೆ, ಕಾನ್ಹೇರಿ ಮೊದಲಾದ ಕಡೆಯ ಶಾಸನಗಳಿಂದ ಗೊತ್ತಾಗುತ್ತದೆ (E.I VII.೫೩-೫೫) ದತ್ತಮಿತ್ರ, ಇಂದ್ರಾಗ್ನಿದತ್ತ ಎಂಬೀ ಬಗೆಯ ಹೆಸರುಗಳನ್ನೂ ಅವರು ಧರಿಸಿದರು ಹೆಲಿಯೊಡೋರಾನು ಗ್ವಾಲಿಯೇರಿಯಲ್ಲಿ ಸ್ಥಾಪಕಟ್ಟಿದ್ದಾನೆ. ವಾಸುದೇವನ ಸತ್ರುಕ್ಕಾಗಿ ಗರುಡಧ್ವಜವನ್ನು ನಿಲ್ಲಿಸಿರುವನು. ಅದರ ಮೇಲಿನ ಬರೆಹದಲ್ಲಿ ಈತನಿಗೆ 'ಭಾಗವತ' ನೆಂದು ಹೇಳಿದೆ.

ಹಿಂದೂ ಸಂಸ್ಕೃತಿಯ ಆಧಾರಸ್ತಂಭರಾಗಿ ಶಕಸ್ಥಾಪಕರಾದ ಸಾತವಾಹನರು ಕ್ಷತ್ರಪರೆಂಬ ಪರಕೀಯ ರಾಜರೊಡನೆ ಬೀಗತನ ಮಾಡಿದ್ದು ಜುನಾಗಡದ ಲೇಖದಿಂದ ಗೊತ್ತಾಗುತ್ತದೆ. ಆಭೀರರು ಭಾರತೀಯರಲ್ಲವಾದರೂ ಈ ದೇಶದಲ್ಲಿ ಬಂದು ನೆಲಸಿದ ಬಳಿಕ ತಾವೂ ಯದುವಂಶಿಗಳೆಂದು ಹೇಳಿಕೊಳ್ಳಲಾರಂಭಿಸಿದರು. ಎಮ್ಮೆಗರೂ ಒಂದು ಕಾಲಕ್ಕೆ ಬೇರೆ ಪಂಗಡದವರಾಗಿದ್ದರೂ ಮುಂದೆ ತುರುಕಾರರಲ್ಲಿ ಬೆರೆತಿರಬೇಕು. ಈಗ ಅವರ ಬೇರೆ ಹೆಸರೂ ಕೇಳಬರುವುದಿಲ್ಲ. ಆದರೆ, ಇಂದು ಹೆಸರು ಗೌಳಿಯಾಗಿದ್ದರೂ ಸಾಕುವುದು ಮುಖ್ಯವಾಗಿ ಎಮ್ಮೆಗಳನ್ನೇ. ಹೀಗೆ ಎಮ್ಮೆಗರು ಸೋತು ಗೆದ್ದರು; ತುರುಕಾರರು ಗೆದ್ದು ಸೋತರು.

## ಸಾಂಸ್ಕೃತಿಕ ಪರಿಣಾಮ

ಈ ಬಗೆಯಾದ ಸಮ್ಮಿಶ್ರಣದ ಪರಿಣಾಮವು ಜನಗಳ ನಡೆವಳಿ ಮತ್ತು ನುಡಿವಳಿಗಳ ಮೇಲೂ ಆಗದೆ ಎಂದೂ ಇರಲಾರದು. ಭಿನ್ನವಾದ ಎರಡು ಜನಗಳ ಬಳಕೆ, ಬೆರಕೆಯಾದಲ್ಲಿ ಒಬ್ಬರು ಸೋತು ಗೆದ್ದುದೂ ಇನ್ನೊಬ್ಬರು ಗೆದ್ದು ಸೋತುದೂ ಕಂಡುಬರುವುದು. ಹಟ್ಟಿಕಾರರು ಮತ್ತು ಆರ್ಯರಲ್ಲಿ ಕಂಡುಬರುವ ಪರಿಣಾಮವು ಇದೇ ಬಗೆಯದಾಗಿದೆ ಆದರೆ ಯಾವು ದೊಂದು ಪಕ್ಷಾಭಿಮಾನದಿಂದ ಕಣ್ಗುರುಡಾದವರು ಇನ್ನೊಂದು ಪಕ್ಷದ ಪರಿಣಾಮಗಳನ್ನು ಸೂಕ್ಷ್ಮವಾಗಿ ನೋಡಿ ತಿಳಿದುಕೊಳ್ಳುವುದಕ್ಕೆ ಅಸಮರ್ಥರಾಗುತ್ತಾರೆ. ಇನ್ನೊಬ್ಬರ ಪರಿಣಾಮವೇ ಆಗದೆ, ಕೇವಲ ಒಂದು ಜನದ ಸಂಸ್ಕೃತಿಯು ಉಳಿದು ಬೆಳೆದು ಬಂದ ಉದಾಹರಣವು ಸಿಕ್ಕುವುದೇ ಸಾಧ್ಯವಿಲ್ಲ. ಬೇರೆ ಬೇರೆ ಜನಗಳ ನಡೆವಳಿ, ನುಡಿವಳಿಗಳನ್ನು ಹೋಲಿಸಿ, ತೂಗಿ, ಬಗೆದು ಭಾವಿಸಿದಲ್ಲಿ ಒಬ್ಬರೊಬ್ಬರ ಮೇಲೆ ಅವರ ಪರಿಣಾಮವು ಹೇಗೆ ಆಗಿದೆಯೆಂಬುದು ಬಹುಮಟ್ಟಿಗೆ ತಿಳಿದುಬರಬಹುದಾಗಿದೆ.

## ಹಳೆಯ ಕೆಲವು ನಡೆವಳಿ:

### ೧ ಪರ್ವತ ಪೂಜೆ

ಪರ್ವತ ಪೂಜೆ ಇವರ ವೈಶಿಷ್ಟ್ಯ. ಇಂದ್ರನು ಮೊದಲು ಪರ್ವತದ ವೈರಿ. ಆತನು ತನ್ನ ವಜ್ರದಿಂದ ಪರ್ವತಗಳ ಪಕ್ಕಗಳನ್ನು ಕಡಿದ ಕತೆಯಿದೆ. ಆದರೆ ಋಗ್ವೇದದಲ್ಲಿ 'ಇಂದ್ರಾ-ಪರ್ವತಾ' ಎಂಬ ಜೋಡು ದೇವತೆಯು ಹಟ್ಟಿಕಾರರು ಮತ್ತು ಆರ್ಯರಲ್ಲಿ ಬಳಿಕ ಆದ ಒಡಂಬಡಿಕೆ ಹೊಂದಿಕೆಯ ನಿದರ್ಶಕವಾಗಿದೆ. ಯಾದವರು (ಭಾರತ ಕಾಲದಲ್ಲಿ) ಇಂದ್ರನ ಪೂಜೆ ಮಾಡದೆ ಆತನನ್ನು ಕೆರಳಿಸಿದರಂತೆ. ಆಗ ಅವರು ಗಿರಿ ಪೂಜಕರಾಗಿದ್ದರು. ಆಗ ಇಂದ್ರನು ಎಡೆಬಿಡದೆ ಮಳೆಗರೆದು ಅವರನ್ನು ಪೀಡಿಸಿದನು. ಆದರೆ ಕೃಷ್ಣನ ನೇತೃತ್ವದಲ್ಲಿ ಯಾದವರು (ಎಂದರೆ ಹಟ್ಟಿಕಾರರು) ಗಿರಿಯ ಆಶ್ರಯವನ್ನು ಪಡೆದು ಆ ಕುತ್ತಿನಿಂದ ಪಾರಾದರಂತೆ. ಆ ಪರ್ವತದ ಹೆಸರು ಗೋವರ್ಧನಗಿರಿ. ತಮ್ಮ ಗೋವುಗಳಿಗೂ ತಮಗೂ ಅನ್ನ-ನೀರುಗಳನ್ನಿತ್ತು ಸಲಹುವುದೆಂಬ ಸಂಪ್ತಭಾವನೆಯೆ ಹಟ್ಟಿಕಾರರ ಗಿರಿಪೂಜೆಯ ಮೂಲ ಕಾರಣ

ವಿರಬೇಕು. ಗುಡ್ಡಪ್ಪ, ಪರ್ವತಪ್ಪ, ಗಿರಿಯಪ್ಪ ಇವು ಇವರ ಮೆಚ್ಚಿಕೆಯ ಹೆಸರುಗಳು.

ಮಲೆಯೂರೆಂದು ಪರ್ವತೇಯರಿಗೆ ಹೆಸರು. ಎಲ್ಲ ಹಟ್ಟಿಕಾರರೂ ಇಂದ್ರನ ಪರಂಪರೆಗೆ ತಲೆವಾಗಲಿಲ್ಲ. ಇಂತಹರೊಡನೆ ಆದ ಕಲಹದ ಕತೆಯು ಮಲ್ಲಾರಿಯ ಪುರಾಣದಲ್ಲಿದೆ. ಮಲ್ಲಾಸುರನನ್ನು ಸಂಹರಿಸಿದಂತೆ ಇರುವ ವರ್ಣನೆಯೂ ಅದರಲ್ಲಿದೆ. 'ಮಲ್ಲಾರಿ' ಎಂದು ಆರಿಯರ ಪರಂಪರೆಯಲ್ಲಿರುವ ಹೆಸರು. ಇದೇ ದೇವತೆಗೆ ಹಟ್ಟಿಕಾರ ಜನಗಳು ಮಲ್ಲಯ್ಯನೆಂದು ಕರೆಯುತ್ತಾರೆ. ಪ್ರೇಮಪುರ (ಬೀದರ), ಮೈಲಾರ (ಯಾದಗಿರಿ) ಹಿಪ್ಪರಿಗಿ, ದೇವರಗುಡ್ಡ, ಮಣ್ಣಮೈಲಾರ, ಕಾರಿಮನೆ (ಬೆ. ಜಿ.), ಮಂಗಸೂಳಿ, ಜೆಜೂರಿ (ಪುಣೆ), ಶ್ರೀಶೈಲ, ಪಾಲಿ (ಸಾತಾರಾ), ಧಾಮಣಿ (ಪುಣೆ) ಮುಂತಾದುವು ಕ್ಷೇತ್ರಗಳು. ಅಲ್ಲದೆ ಮಲ್ಲರ ನೆನಹು ಕೊಡುವ ಮಲ್ಲಾಪುರ, ಹಿರೇಮಲ್ಲೂರು ಮೊದಲಾದ ಊರುಗಳಂತೂ ಸರಿಯೆ. ಈ ಮಲ್ಲಾರಿ ದೇವತೆಯು ಶಿವನ ಅವತಾರವೆಂದು ಗ್ರಹಿಕೆಯಿದ್ದರೂ ಆ ದೇವತೆಯ ವಾಹನಾದಿಗಳನ್ನು ನೋಡಿದರೆ ಅದರಲ್ಲಿ ಇಂದ್ರನ ಕುರುಹುಗಳೂ ಕಾಣುವುವು. (ಕ ಪೀ. ಕ್ಷ. ನೋಡಿ, ಪು ೧೦೪). ಹಟ್ಟಿಕಾರರಲ್ಲಿ ಕುರುವರು ಈ ದೇವತೆಯ ಉಪಾಸಕರು ಬಹಳ. ಮರ್ಹಾಟರು ಮಲ್ಲಾರಿ ಅಥವಾ ಖಂಡೋಬನೆಂಬ ಹೆಸರಿನಲ್ಲಿ ಆರಾಧಿಸುವ ದೇವತೆಯೂ ಇದೆ. ಶ್ರೀಶೈಲ ಅಥವಾ ಪರ್ವತಪ್ಪನ ಭಕ್ತರು ತುರುವರು ವಿಶೇಷ. ಗಿರಿ (ತಿರುಪತಿ) ಗೆ ನಾಡವರೂ ರಡ್ಡಿಗಳೂ ನಡೆದುಕೊಳ್ಳುವುದು ಹೆಚ್ಚು. ಬ್ರಾಹ್ಮರೂ ಈ ದೇವತೆಗಳನ್ನು ಸ್ವೀಕರಿಸಿದ್ದಾರೆ.

ಮಲ್ಲಯ್ಯ–ಮಲ್ಲಾರಿದೇವತೆಯು ಕಂನಾಡವರ ವೈಶಿಷ್ಟ್ಯ. ತೆಲುಗು, ತಮಿಳು ನಾಡಿನಲ್ಲಿ ಈ ದೇವತೆಯ ಪ್ರಾಶಸ್ತ್ಯವಿಲ್ಲ. ಈ ಕಾರಣದಿಂದಲೂ ಕಣ್ಣ ವಿಷಯವೆಂಬ—ಕರ್ನೂಲ ಜಿಲ್ಹೆಯಲ್ಲಿರುವ ಶ್ರೀಶೈಲವು ಅಥವಾ ಪರ್ವತದ ಮಲ್ಲಯ್ಯನು ಕಂನಾಡವರ ದೇವರು. ಹಟ್ಟಿಕಾರರ ಹಾಟಕೇಶ್ವರನೂ ಇವನು. ತೆಲುಗು ದೇಶದಲ್ಲಿ ಕರ್ಣಕುಲದ ಒಂದು ಜನವಿದೆ. ಅವರಿಗೆ ಪುರಗಿರಿ ಕ್ಷತ್ರಿಯರು, ಪರಶುರಾಮ ಕ್ಷತ್ರಿಯರು, ಪೆರಿಕೆ ಕ್ಷತ್ರಿಯರೆಂದು ನಾಮಾಂತರಗಳಿವೆ. ಇವರೆಲ್ಲ ಮಲ್ಲಯ್ಯನ ಭಕ್ತರು. ಪ್ರಾಚೀನ ಕಾಲದಲ್ಲಿ

ಕಂನಾಡನಿಂದ ಓಡಿ ಇತ್ತ ಬಂದುದಾಗಿ ಹೇಳುತ್ತಾರೆ. ಗಿರಿಮಲ್ಲ, ಸಿದ್ಧ ಮಲ್ಲ ಎಂಬೀ ತೆರನಾದ ಗೋತ್ರ ಸೂತ್ರಗಳುಂಟು ಇವರಲ್ಲಿ.

**೨ ವೃಕ್ಷಪೂಜೆ**

ಹಟ್ಟಿಕಾರರಲ್ಲಿ ಗಿಡಗಳಿಂದ ತಮ್ಮ ಬೆಡಗುಗಳನ್ನು ಹೇಳುವ ಸಂಪ್ರದಾಯವಿದೆ. 'ಕಲ್ಲೇ ದೈವ, ಮಡಕೆಯು ದೈವ, ಮರವೇ ದೈವ ...' ಎಂಬ ವಚನದಲ್ಲಿ ಶ್ರೀ ಬಸವಣ್ಣನವರು ಈ ಪದ್ಧತಿಯ ವಿಷಯದಲ್ಲಿ ತಮ್ಮ ಅಸಮ್ಮತಿಯನ್ನು ಸೂಚಿಸಿದ್ದಾರೆ. ಬಸವಣ್ಣವರ ಕಾಲದಲ್ಲೂ ಈ ಪದ್ಧತಿಯು ಪ್ರಬಲವಾಗಿದ್ದಿತೆಂದು ಆ ವಚನದಿಂದ ಗೊತ್ತಾಗುವುದು. ಮೊಹೆಂಜೋ ದಾರೊದ ಅವಶೇಷಗಳಿಂದ ಆ ಕಾಲದಲ್ಲಿಯೂ ಈ ಸಂಪ್ರದಾಯವು ಇದ್ದಿತೆಂದು ತಜ್ಞರು ಹೇಳುತ್ತಾರೆ.

ಒಂದೊಂದು ದೇವತೆಯೊಡನೆ ಸಂಬಂಧ ಜೋಡಿಸಿ, ಅಥವಾ ಬೇರೆ ಕಾರಣದಿಂದ ಮಹತ್ವದುವು, ಪವಿತ್ರವೆಂದೂ ಬಗೆದು ಪೂಜಿಸಿ ಕಾಪಾಡಿಕೊಂಡು ಬಂದ ಹಲವು ಗಿಡಗಳು ಮಾನವನ ನೆಮ್ಮದಿಗೆ ಸಹಾಯಕವಾಗಿವೆಯೆಂದು ಕಂಡುಬರುತ್ತದೆ. ಬಿಲ್ವ, ತುಳಸಿ, ಬೇವು, ತುಂಬೆ ಇಂತಹವುಗಳನ್ನು ಔಷಧಿಗೆ ಉಪಯುಕ್ತವೆಂದು ಇಂದಿನವರೂ ಕೂಡ ಕಾಪಾಡಿಕೊಂಡು ಬೆಳೆಸುವಹಾಗಿದೆ. ಬೇವು, ಬನ್ನಿ, ಆಲ, ಅರಳೆಗಳಂತಹ ಕೆಲವು ಗಿಡಗಳ ವಿಚಾರದಲ್ಲಿ ನಮ್ಮ ನಾಡಿಗರಲ್ಲಿ ದೆವ್ವಿನ ಅಥವಾ ದೇವತ್ವದ ಭಾವನೆಯು ಇದ್ದುದು ಕಂಡುಬರುತ್ತದೆ. ಮೊಹೆಂಜೋ ದಾರೋದ ಒಂದು ಅವಶೇಷದಲ್ಲಿ ಅರಳೆಯ ಗಿಡದ ಪೂಜೆಯು ನಡೆದ ಹಾಗೆ ಚಿತ್ರಿಸಿದ್ದುಂಟಂತೆ.

ಆರಿಯರೆನಿಸುವ ಮರ್ರಾಟರಲ್ಲಿಯೂ ಗಿಡಗಳಿಂದ ಬೆಡಗು ಹೇಳುವ ಸಂಪ್ರದಾಯವಿದೆ. ಆರಿ, ಬನ್ನಿ, ಮುತ್ತಲ, ಆಲ ಮೊದಲಾದವುಗಳು ಒಂದೊಂದು ಮನೆತನದ ಬೆಡಗುಗಳಿದ್ದು ಮದುವೆಯ ಕಾಲಕ್ಕೆ ಇವುಗಳನ್ನು ವಿಚಾರಿಸಿಯೇ ಹೆಣ್ಣು ಗಂಡು ಗೊತ್ತುಪಡಿಸುವರು. ಬ್ರಾಹ್ಮಣರಲ್ಲಿಯೂ ಆಲ, ಅರಳೆ, ತುಳಸಿ, ಬನ್ನಿಗಳ ಪೂಜೆ ಸೇರಿಕೊಂಡಿದೆ. ತುಳಸಗೇರಿ ಮೊದಲಾದ ಕೆಲವು ಊರ ಹೆಸರುಗಳು ನಮ್ಮ ನಾಡಿಗರ ವೃಕ್ಷಭಕ್ತಿಯ ಮೂಲಕವಾಗಿಯೂ ಬಂದಿರುವ ಸಂಭವವಿದೆ.

೬ ನರಬಲಿ

ಯಾವುದೇ ಒಂದು ಮಹಾಕಾರ್ಯದ ಸಿದ್ಧಿಗಾಗಿ ದೇವರಿಗೆ ಬಲಿಯನ್ನು—ಮನುಷ್ಯ ಬಲಿಯನ್ನು ಕೊಡುವ ಸಂಪ್ರದಾಯವಿದ್ದಿತು. ದೊಡ್ಡ ಕಟ್ಟಡ, ಕೋಟೆ, ಕೆರೆ ಮೊದಲಾದವುಗಳ ಪೂರ್ಣತೆಗೆ ಸಹ, ಪೂರ್ಣಾಹುತಿಯೆಂದು ಈ ಬಲಿದಾನದ ಅವಶ್ಯಕತೆಯಿದ್ದುದಾಗಿ ತಿಳುವಳಿಕೆಯಿತ್ತು. ಹಂಪೆಯ ವಿರೂಪಾಕ್ಷನ ಗುಡಿಯ ಮಹಾದ್ವಾರದ ಮೇಲಣ ಗೋಪುರವು ನಿಲ್ಲಲು ಅಡಕ್ಕೊಂಡು ಬಲಿಯನ್ನು ಅರ್ಪಿಸಬೇಕಾಯಿತಂತೆ. ಆ ಬಲಿಯನ್ನು ಕೊಟ್ಟ ಪುನೀತನದವರಿಗೆ ರಾಜರಿಂದ ಕೊಡುಗೆಯ ಭೂಮಿ ದೊರೆತಿದ್ದು, ಬಲಿದಾನಕ್ಕಾಗಿ ಕೊಟ್ಟ ಆ ಹೆಣ್ಣುಮಗಳ ದಿನವನ್ನು ಅವರು ಇಂದಿಗೂ ನೆನೆಯುವರು. ದೊಡ್ಡ ಕೆರೆ, ಕಟ್ಟೆಗಳು ಭದ್ರವಾಗಿ ನಿಲ್ಲುವುದಕ್ಕಾಗಿ ಕೊಟ್ಟ ಆಹಾರದ ಕತೆಗಳು ಎಲ್ಲೆಡೆಗೂ ಪ್ರಚಾರದಲ್ಲಿವೆ. ಹಳ್ಳಿಯ ಹಾಡಿನಲ್ಲಿ ಇವು ಸಂಸ್ಮರಣೀಯವಾಗಿ ಉಳಿದುದೂ ಉಂಟು.

ಜೋಕುಮಾರನ ಹುಟ್ಟು ದಿನ ಪಾಲಿಸುವಲ್ಲಿ ನರಬಲಿಯ ಕತೆಯೆ ಅಡಕವಾಗಿದೆ ಆತನು ಹೋದ ಬಳಿಕ ಮಳೆಯಾಗುವುದೆಂದು ನಂಬುಗೆಯಿದೆ. ಜೋಕುಮಾರನ ರುಂಡವನ್ನು ಅಗಸರ ಕಲ್ಲ ಬುಡದಲ್ಲಿ ಹುಗಿಯುವುದು ನರಬಲಿಯ ನಿಶ್ಚಿತ ಕುರುಹಾಗಿದೆ.

ಮಹಾರಾಷ್ಟ್ರದಲ್ಲಿ ಶಿಲಾಸಪ್ತಮಿ (ಶ್ರಾವಣ ಶು.) ದಿನವನ್ನು ಪಾಲಿಸುವ ಸಂಪ್ರದಾಯವಿದೆ. ಕೆರೆಗೆ ಆಹಾರವಾಗಿ ಕೊಟ್ಟ ಬಾಲಕನ ನೆನಪಿಗಾಗಿ ಆ ದಿನವಿದ್ದುದು, ಆ ಸಂಬಂಧದಲ್ಲಿ ಹೇಳುವ ಕತೆಯಿಂದ ಗೊತ್ತಾಗುತ್ತದೆ

ದೇವರ ತೇರಿನ ಬುಡದಲ್ಲಿ ಮಕ್ಕಳನ್ನು, ಅಥವಾ ಮನುಷ್ಯನನ್ನು ಬಲಿಕೊಡುವ ವಾಡಿಕೆಯಿತ್ತು. ದೇವಿಯ ಎದುರು ಸಿಡಿ ಹಾಯುವ ಪದ್ಧತಿಯನ್ನು ಸರಕಾರದವರು ಒತ್ತಾಯದಿಂದ ನಿಲ್ಲಿಸಿದರು. 'ಕಾಲಿಗೆ ಜೋತು ಬಲಿಕೊಟ್ಟವನು ವಾಗ್ಮಿಯಾಗುವನು; ಕುರಿಕೊಟ್ಟವನು ಕವಿಯಾಗುವನು; ಕೋಣಕೊಟ್ಟವನು ಸಿರಿವಂತನಾಗುವನು; ಹುಲ್ಲೆಕೊಟ್ಟವನು ಮೋಕ್ಷ ಪಡೆಯುವನು; ಪುರುಷಬಲಿಕೊಟ್ಟವನು ಅಷ್ಟೈಶ್ವರ್ಯವನ್ನೂ ಅಷ್ಟಸಿದ್ಧಿಯನ್ನೂ ಹೊಂದುವನು.' ಎಂದು ಶಾಕ್ತ ಮಾರ್ಗದಲ್ಲಿ ಹೇಳಿದೆ.

ಶಿರಾಳ ಅಥವಾ ಸಿರಿಯಾಳನು ಅತಿಥಿರೂಪದಿಂದ ಬಂದ ಪರಮಾತ್ಮನಿಗೆ ಉಣಬಡಿಸಲು ತನ್ನ ಮಗನನ್ನು ಕೊಯ್ದು ಅಡುಗೆ ಮಾಡಿದ ಕತೆ ಇದೆ.

ಹರಿಶ್ಚಂದ್ರನು ತನಗೆ ಮಗುವಾದರೆ ಆತನನ್ನು ವರುಣನಿಗೆ ಅರ್ಪಿಸಿ ಕೊಡುವುದಾಗಿ ಹರಕೆ ಹೊತ್ತಿದ್ದುದು ಬ್ರಾಹ್ಮಣ ಗ್ರಂಥದಲ್ಲಿ ಬರುತ್ತದೆ.

ಲಕ್ಷ್ಮೀಶನ ಜೈಮಿನಿಯಲ್ಲಿಯೂ ಇಂತಹ ಎರಡು ಲೋಕಕಥೆಗಳು ಒಂದಿವೆ. ಮಂತ್ರಿಯು ಚಂದ್ರಹಾಸನನ್ನು ಕಾಲಿಗೆ ಬಲಿಕೊಡುವ ಏರ್ಪಾಟ ಮಾಡಿದ್ದು ತಪ್ಪಿ ಆತನ ಮಗನೆ ಅಲ್ಲಿ ಆಹುತಿಯಾದನಂತೆ. ಇನ್ನೊಂದು ಕತೆ ಮಯೂರಧ್ವಜನದು. ಶ್ರೀಕೃಷ್ಣನು ಮಯೂರಧ್ವಜನ ಭಕ್ತಿಯ ಹಿರಿಮೆಯನ್ನು ಅರ್ಜುನನಿಗೆ ತೋರುವುದಕ್ಕಾಗಿ ಆತನನ್ನು ಮಯೂರಧ್ವಜನಲ್ಲಿಗೆ ಕರೆತಂದನು. ಇಬ್ಬರೂ ಬ್ರಾಹ್ಮಣವೇಷ ತಾಳಿದ್ದರು. ಮಯೂರಧ್ವಜನು ಬ್ರಾಹ್ಮಣನ ಬೇಡಿಕೆಯನ್ನು ಪೂರೈಸಲು ತನ್ನ ಅರ್ಧ ದೇಹವನ್ನು ಕೊಯ್ದು ಕೊಡಲು ಆನಂದದಿಂದ ಸಿದ್ಧನಾದನೆಂದು ವರ್ಣನೆಯು ಬರುತ್ತದೆ.

ಇಂತಹ ಕತೆಗಳಿಗೆ ನಮ್ಮ ನಾಡಿನಲ್ಲಿ ಕೊರತೆಯಿಲ್ಲ. ಮೈಮೇಲಣ ಲಿಂಗವು ಕಳೆದುಹೋದರೆ ಕಂಬಕ್ಕೆ ಕತ್ತಿಯನ್ನು ಕಟ್ಟಿ ಇರಿದುಕೊಳ್ಳಬೇಕೆಂಬ ಉಗ್ರವೀರದ ವಚನಗಳೂ ದೊರೆಯುತ್ತವೆ.

ಜೀವದ ಹಂಗು ಇಲ್ಲದ ವೀರರ ನಾಡಿದು. ತನ್ನ ಊರ ಕಾಯಲು, ತನ್ನ ಒಡೆಯನ ಕಾರ್ಯಸಿದ್ಧಿಯನ್ನು ಮಾಡಲು ತನ್ನ ತನುವನು ಈಡಾಡಿ ಸ್ವರ್ಗವನ್ನೇರಿದ ವೀರರ ನೆನಹು ಕೊಡುವ ಕಲ್ಲುಗಳು ಕಂನಾಡಿನ ಎಲ್ಲ ಭಾಗದಲ್ಲೂ ಉಂಟು. ಮರ್ಹಾಟರಲ್ಲಿ ಇವಕ್ಕೆ 'ವೀರಗಳ' ಎಂದು ಹೇಳುವರು. ಅರ್ಥವನ್ನರಿಯದೆ ಹೋದರೂ ಬೀರರ ಪೂಜೆ ಅವರಲ್ಲೂ ಇದೆ. ಈ ವೀರಗಲ್ಲಿನ ಸಂಪ್ರದಾಯವು ಮರ್ಹಾಟರಲ್ಲಿ ಇಲ್ಲವಾದರೂ ನಾಸಿಕ ಜಿಲ್ಹೆಯ ಹಲವು ತಾಲ್ಲೂಕುಗಳಲ್ಲಿ ಇವು ಅಲ್ಲಲ್ಲಿ ಬಹಳವಿದ್ದುದು ಅಲ್ಲಿಯ ಗ್ಯಾಝೆಟಿಯರುಗಳಿಂದ ತಿಳಿದು ಬರುತ್ತದೆ! ( ಈ ವೀರಗಲ್ಲುಗಳ ಮೇಲಿಂದ ಇದೂ ಒಂದು ಕಾಲದ ಕಂನಾಡವರ ನೆಲೆವೀಡೆಂದು ಹೇಳಿದರೆ ತಪ್ಪೇನು? ಕಂ. ನೆಲೆ ಪು. ೧೩೨,೧೭೩,೧೨೪ ).

ಸತಿ ಹೋಗುವ ಪದ್ಧತಿಯೂ ಆತ್ಮಬಲಿಯ ಒಂದು ರೂಪ. 'ಮಾಸತಿ' ಊರುಗಳು, ಇಂತಹ ಹೆಣ್ಣುಮಕ್ಕಳ ಸ್ಮಾರಕಗಳಾಗಿವೆ. ಮಾಸತಿ ಕಲ್ಲಿನ ಪೂಜೆ, ಜಾತ್ರೆ ನಡೆವ ಎಡೆಗಳೂ ಹಲಕೆಲವು ಉಂಟು.

ತಮ್ಮ ಜೀವಿತ ಕಾರ್ಯವು ಮುಗಿದ ಮೇಲೆ, ಕೂಳಿಗೆ ಕಾಳರಾಗಿ, ಭೂಮಿಗೆ ಭಾರವಾಗಿ ಬದುಕುವುದು ಹೀನ ಬಾಳು. ಮೈಯಲ್ಲಿ ಕರ್ತೃತ್ವ ಶಕ್ತಿ, ಲೋಕಕಲ್ಯಾಣದ ಕಾರ್ಯವು ನಡೆಯುತ್ತಿರುವ ವರೆಗೆ ಬಾಳಿದರೆ ಬಾಳಬೇಕು. ಇಲ್ಲವಾದರೆ ಕೂಡಲೆ ದೇಹತ್ಯಾಗಕ್ಕೆ ಸಿದ್ಧರಾಗಬೇಕೆಂಬ ಉಗ್ರ ಗಂಭೀರ ಸಂಕಲ್ಪವೊಂದು ಈ ನಾಡಿನಲ್ಲಿ ಜೀವಂತವಾಗಿ ವ್ಯವಹಾರದಲ್ಲಿದ್ದಿತೆಂದು ಹಲವು ಉದಾಹರಣಗಳಿಂದ ತಿಳಿದುಬರುತ್ತದೆ. ೧೧ ನೆಯ ಶತಮಾನದ ಕೊನೆಯ ಭಾಗದಲ್ಲಿ ಕಲ್ಯಾಣ ಚಾಲುಕ್ಯರಾಜ ಸೋಮೇಶ್ವರನು ಈ ಬಗೆಯಾಗಿ ಕರುವತ್ತಿಯ ಹತ್ತಿರ ತುಂಗೆಯಲ್ಲಿ ಜಲಸಮಾಧಿಯನ್ನು ಹೊಂದಿದ ಉದಾಹರಣವುಂಟು.

ಜೈನ ಯತಿಗಳಲ್ಲಿ ಸಲ್ಲೇಖನಾದಿ ವ್ರತಗಳಿಂದ ಮುಡಿಪಿಗೊಂಬುವ ಈ ಪರಂಪರೆಯು ಬಹಳ ಪುರಾತನಕಾಲದಿಂದ ಇದೆ. ಶ್ರವಣಬೆಳುಗೊಳದ ಶಾಸನಗಳಲ್ಲಿ ಇಂತಹ ಉದಾಹರಣಗಳು ಸಿಕ್ಕುತ್ತವೆ.

ಉಳಿದ ಬಗೆಯವರಲ್ಲಿಯೂ ಸನ್ಯಾಸಿಗಳು ಇದೇ ರೀತಿಯಿಂದ ತಾವಾಗಿಯೆ ಸಮಾಧಿಪ್ರವೇಶ ಮಾಡುವ ವಾಡಿಕೆಯು ಕಂಡುಬರುತ್ತದೆ. ಇದಕ್ಕೆ ಗುಹಾಪ್ರವೇಶನೆಂದೂ ಹೆಸರಿದ್ದಿತು. ವಿದ್ಯಾರಣ್ಯರು ಗುಹಾಪ್ರವೇಶ ಮಾಡಿದರೆಂದು ಹೇಳುತ್ತಾರೆ ಮಹಾರಾಷ್ಟ್ರದಲ್ಲಿ ಜ್ಞಾನೇಶ್ವರನ ಗುಹಾಪ್ರವೇಶದ ಸಮಾರಂಭದ ರೋಮಾಂಚಕಾರಿಯಾದ ವರ್ಣನೆಯು ದೊರೆಯುತ್ತದೆ. ಮಂತ್ರಾಲಯದ ರಾಘವೇಂದ ಸ್ವಾಮಿಗಳ ಕಥೆಯೂ ಹೀಗಿದೆ. ತುಕಾರಾಮನು ಇಂದ್ರಾಯಣಿ ನದಿಯ ಮಡುವಿನಲ್ಲಿ ತನ್ನನ್ನು ತೂರಿಕೊಂಡನು. ಶ್ರೀಮದಲ್ಲಮ ಬಸವಾದಿ ಪ್ರಮಥರು ಇದೇ ರೀತಿಯಿಂದ ಒಂದೊಂದು ತೆರನಾಗಿ ಲಿಂಗೈಕ್ಯರಾದರು.

ಆದರೆ, ರಾಯಬಹಾದ್ದೂರ ರಾಮಪ್ರಸಾದ ಚಂದಾ ಇವರ ಅಭಿಪ್ರಾಯದಂತೆ ಇದು ಆರ್ಯರ ನಡೆವಳಿಯಲ್ಲ. ತನ್ನನ್ನು ತಾನೆ ಮುಡಿಪಿಕೊಳ್ಳುವುದಾಗಲಿ, ಎರಡನೆಯವರು ತಂದು ಕೊಡುವ ನರಬಲಿಯಾಗಲಿ

ಬ್ರಾಹ್ಮಣ ಧರ್ಮಕ್ಕೆ ತೀರ ಅಸಮ್ಮತವಾದ ರೂಢಿಯೆಂದು ಅವರು ವೇದಾದಿಗಳಿಂದ ಆಧಾರವನ್ನು ಕೊಟ್ಟು ಇದು ಆರ್ಯಪೂರ್ವ ಜನಾಂಗದವರ ವಾಡಿಕೆಯಾಗಿರಬೇಕೆಂದು ಪ್ರತಿಪಾದಿಸಿದ್ದಾರೆ ( Survival of the Prehistoric Civilisation of the Indus Valley, No 41, 1942, pp. 14-24 ). ನಿಸರ್ಗದತ್ತ ಆಯುಷ್ಯವನ್ನು, ತನ್ನ ಪಾಲಿನ ಕರ್ತವ್ಯ ಕರ್ಮಗಳನ್ನು ನಿರಪೇಕ್ಷಬುದ್ಧಿಯಿಂದ ಸತ್ಯ ( ಆತ್ಮ ) ಸಾಕ್ಷಿಯಿಂದ ನೆರವೇರಿಸುತ್ತ ಅದುವೆ ಯಜ್ಞವೆಂದು, ಸಂಪೂರ್ಣವಾಗಿ ಮಾಡುವುದೇ ವೇದವಿಹಿತ ಧರ್ಮ. 'ಜಿಜೀವಿಷೇತ್ ಶತಂ ಸಮಾಃ'. ಇದಕ್ಕೆ ವಿರುದ್ಧವಾಗಿ ತನ್ನನ್ನು ತಾನೆ ಕೊಂದುಕೊಳ್ಳುವುದು ಅಧರ್ಮವೆಂದು ಬ್ರಾಹ್ಮಣರ ವಿಚಾರ.

ಲಕ್ಷ್ಮೀಶನ ಕೃಷ್ಣನು ಮಯೂರಧ್ವಜನ ಬಲಿ—ನರಬಲಿ ಕೇಳಿದನು. ಆದರೆ ವ್ಯಾಸಭಾರತದ ಕೃಷ್ಣನು ನರಬಲಿಯ ವಿರೋಧಿಯಾಗಿದ್ದಾನೆ! ಜರಾಸಂಧನು ನರಬಲಿ ಕೊಡುವುದಕ್ಕಾಗಿ ೧೦೦ ರಾಜರನ್ನು ಕಲೆಹಾಕುವ ಉದ್ಯೋಗದಲ್ಲಿ ತೊಡಗಿದ್ದನೆಂದು ಮಹಾಭಾರತದಲ್ಲಿದೆ ಜರಾಸಂಧನು ಗಿರಿವ್ರಜವೆಂಬ ತನ್ನ ರಾಜಧಾನಿಯಲ್ಲಿ ೮೬ ರಾಜರನ್ನು ಇದಕ್ಕಾಗಿ ಸೆರೆಯಲ್ಲಿ ಇರಿಸಿ, ಇನ್ನು ೧೪ ಜನ ರಾಜರನ್ನು ಬೇಗನೆ ಸಂಗ್ರಹಿಸಬೇಕೆಂಬ ಆತುರದಲ್ಲಿದ್ದನು.

ಆದರೆ ಇಷ್ಟರಲ್ಲಿ ಶ್ರೀಕೃಷ್ಣನು ಅರ್ಜುನ ಮತ್ತು ಭೀಮರೊಡನೆ ಜರಾಸಂಧನಲ್ಲಿ ಹೋಗಿ ಆತನನ್ನು ಈ ಅನ್ಯಾಯದ ಘೋರ ಕೃತ್ಯವನ್ನು ಎಸಗದಿರಲು ಬೇಡಿಕೊಂಡರು ( ೨ ೨೨. ೯—೧೧ ).

'ಎಲೈ ರಾಜಾಧಿರಾಜನೆ. ಒಬ್ಬ ರಾಜನು ಸನ್ಮಾರ್ಗದಲ್ಲಿರುವ ಇನ್ನೊಬ್ಬ ರಾಜನನ್ನು ಹೀಗೆ ಕೊಲ್ಲಬೇಕು? ರಾಜರನ್ನು ಸೆರೆಹಿಡಿದು ಬಳಿಕ ಅವರನ್ನು ರುದ್ರನಿಗೆ ಬಲಿಯೆಂದು ಅರ್ಪಿಸಬೇಕೆಂದಿರುವೆಯಾ?.......... ನರಬಲಿಯು ಎಂದೂ ನಡೆದು ಬಂದಿಲ್ಲ. ಶಂಕರನಿಗೆ ನೀನು ಅವರನ್ನೇಕೆ ಬಲಿಗೊಡುವೆ?'

ಶ್ರೀಕೃಷ್ಣನು ಜರಾಸಂಧನನ್ನು ಸೆರೆಯಲ್ಲಿರುವ ಅರಸರ ಬಿಡುಗಡೆ ಮಾಡಲು ಕೇಳಿಕೊಂಡನು. ಆದರೆ ಜರಾಸಂಧನು ನರಬಲಿಯು ನ್ಯಾಯವಾದದ್ದೆಂದು ಹೇಳಿ ತನ್ನ ಕೃತ್ಯದ ಮಂಡನ ಮಾಡಿಕೊಂಡನು. 'ಪುರುಷ

ಮೇಧವು ಕ್ಷತ್ರಿಯರ ನಡೆವಳಿಯೆಂದು ಪೂರ್ವಕಾಲದಿಂದಲೂ ಹೇಳಲಾಗಿದೆ. ತನ್ನ ತೋಳ್ಬಲದಿಂದ ಗೆದ್ದು ತಂದ ರಾಜರನ್ನು ತನ್ನ ಮನಬಂದಂತೆ ನಡಸಿಕೊಳ್ಳುವ ಹಕ್ಕು ವಿಜಯಶಾಲಿಯಾದವನಿಗೆ ಇದೆ. ನಾನು ಸತ್ಕಾರ್ಯಕ್ಕಾಗಿಯೆ ಈ ರಾಜರನ್ನು ಸೆರೆಹಿಡಿದು ತಂದಿದ್ದೇನೆ. ಕ್ಷತ್ರಿಯೋಚಿತವಾದ ವ್ರತವನ್ನೆ ನಾನು ಕೈಕೊಂಡಿದ್ದು, ಈಗ ಹೆರವರ ಹೆದರಿಕೆಯಿಂದ ನಾನು ಇವರನ್ನು ಬಿಟ್ಟುಗೊಡಲೆ?' ಎಂದು ಜರಾಸಂಧನು ಪ್ರಶ್ನೆ ಮಾಡಿದನು.

ಜರಾಸಂಧನು ತನ್ನ ಕೃತಿಯ ಬೆಂಬಲಕೆ ಶ್ರುತಿ, ಸ್ಮೃತಿಗಳ ಆಧಾರವನ್ನು ಹೇಳಹೋಗಿಲ್ಲವೆಂಬ ಮಾತನ್ನು ಶ್ರೀ ಚಂದಾ ಅವರು ಎತ್ತಿ ತೋರಿಸಿದ್ದಾರೆ. ಅಗ್ನಿಚಯನಾದಿ ಯಜ್ಞಗಳಲ್ಲಿ ನರಬಲಿಯ ಮಾತು ಬರುವುದೂ ನಿಜವಾದರೂ ಅದನ್ನು ವೇದಕಾಲದಲ್ಲಿಯೆ ಮುಂದೆ ಬಿಟ್ಟುಬಿಟ್ಟುದನ್ನು ಶ್ರೀ ಚಂದಾ ಅವರು ವಿವರಿಸಿದ್ದಾರೆ (ಪು. ೧೮). ನರಬಲಿಯು ಪಾಪಕೃತ್ಯವೆಂದು ಬ್ರಾಹ್ಮಣರು ಬಿಟ್ಟುಕೊಟ್ಟ ಮೇಲೂ ಕ್ಷತ್ರಿಯರು ಅದನ್ನು ಹಾಗೆಯೆ ನಡೆಸಿಕೊಂಡು ಬಂದರು. ಇದರಲ್ಲಿ ಇವೆರಡೂ ಪಂಗಡಗಳ ಮನೋರಚನೆ, ನಡೆವಳಿಗಳಲ್ಲಿ ಇರುವ ಭಿನ್ನತೆಯೆ ಸ್ಪಷ್ಟವಾಗುತ್ತದೆ, ಎಂದು ಶ್ರೀ ಚಂದಾ ಅವರು ತಮ್ಮ ಪ್ರಬಂಧದಲ್ಲಿ ಕಾಣಿಸಿದ್ದಾರೆ.

ಸತಿ ಹೋಗುವ ಪದ್ಧತಿಯನ್ನು ಬ್ರಾಹ್ಮಣರು ನಿಷೇಧಿಸುತ್ತಲಿ ಬಂದಿದ್ದರೂ ಉಳಿದವರಲ್ಲಿ ಅದು ಹಾಗೆಯೆ ನಡೆದು ಬಂದುದರ ಕಾರಣವೇನು? ಇವೆರಡೂ ಜನಗಳ ಭಿನ್ನ ಮನಸ್ಥಿತಿ, ಭಿನ್ನ ಸಂಪ್ರದಾಯಗಳೇ ಕಾರಣ. ಶ್ರೀ ಚಂದಾ ಅವರು ಸಾಧಾರವಾಗಿ ತೋರಿಸಿರುವಂತೆ ಸುಮಾರು ೧೦ನೆಯ ಶತಮಾನದ ಮೇಧಾತಿಥಿ ಎಂಬ ಮನುಸ್ಮೃತಿಯ ಟೀಕಾಕಾರನ ಕಾಲದ ವರೆಗೂ ಅಕೃತ್ಯವೆನಿಸಿದ ಸತಿಪದ್ಧತಿಯು, ೧೨ನೆಯ ಶತಮಾನದಲ್ಲಿ ಯಾಜ್ಞವಲ್ಕ್ಯ ಸ್ಮೃತಿಗೆ ಟೀಕೆ ಬರೆದ ವಿಜ್ಞಾನೇಶ್ವರನಿಗೆ ಸುಕೃತ್ಯವೆನಿಸಿತು! ಏಳನೆಯ ಶತಮಾನದಲ್ಲಾಗಿ ಹೋದ ಬಾಣಭಟ್ಟನಂತೂ ಸತೀ ಪದ್ಧತಿಯನ್ನು ಸಂಪೂರ್ಣವಾಗಿ ಅಲ್ಲಗಳೆದಿದ್ದಾನೆ. ಮಹಾಶ್ವೇತೆಯು ಗಂಡನು ಮರಳಿ ಬರುವ ದಾರಿಯನ್ನು ಕಾಯುತ್ತ ಇರುವಾಗ, ಅವಳು ತಾನು ಸತಿ ಹೋಗುವುದಿಲ್ಲವೆಂದು ನಿರ್ಧರಿಸಿರುವಾಗಲೂ ಚಂದ್ರಾಪೀಡನು ಅವಳಿಗೆ

ಸತೀಪದ್ಧತಿಯು ಎಷ್ಟು ಅವಿಚಾರದ್ದೂ, ತಲೆತಿರುಕತನದ್ದೂ ಆಗಿದೆಯೆಂಬು ದನ್ನು ಹೇಳುವನು. ಸತೀ ಪದ್ಧತಿಗೆ ಬಾಣಭಟ್ಟನು ಎಷ್ಟು ವಿರೋಧಿ ಯಾಗಿದ್ದನೆಂಬುದು ಇದರಿಂದ ಗೊತ್ತಾಗುತ್ತದೆ. ಆದರೂ ಬ್ರಾಹ್ಮಣರು ಲೋಕರೂಢಿಗೆ ಹೇಗೆ ತಲೆವಾಗಬೇಕಾಗುತ್ತಿದ್ದಿತೆಂಬುದಕ್ಕೆ ವಿಜ್ಞಾನೇಶ್ವರನು ಸತಿ ಪದ್ಧತಿಗೆ ಕೊಟ್ಟ ಸಮ್ಮತಿಯೆ ಸಾಕ್ಷಿಯಾಗಿದೆ.

ಪುರಾಣಗಳು, ಲೋಕಕಥೆಗಳು, ಹಳ್ಳಿಯ ಹಾಡುಗಳು, ಕಾವ್ಯಾದಿ ಸಾಹಿತ್ಯಗಳಲ್ಲೂ ಇತಿಹಾಸದಲ್ಲೂ ಇಂತಹ ಉದಾಹರಣಗಳ ವರ್ಣನೆಗಳು ಸಿಕ್ಕುತ್ತವಲ್ಲದೆ ಶಿಲ್ಪದಲ್ಲೂ ಇಂತಹ ಒಂದು ಚಿತ್ರವು ಗೋವೆಯಲ್ಲಿ ದೊರೆ ಯುತ್ತದೆ. ಒಬ್ಬ ವೀರನು ಶಸ್ತ್ರಪಾಣಿಯಾಗಿ ನಿಂತುಕೊಂಡು ತನ್ನ ರುಂಡವನ್ನು ಹಾರಿಸಿಕೊಂಡಿದ್ದಾನೆ. ಅದು ಬದಿಯಲ್ಲಿಯೇ ಬಿದ್ದಿದೆ. ಅದರ ಮೊಗದಲ್ಲಿ ನಗೆಯು ಸೂಸುತ್ತಿದೆ. ಎರಡನೆಯ ವೀರಬಲ್ಲಾಳ ಹೊಯ್ಸಳರಾಜನು ಮಡಿದೊಡನೆ ಆತನ ವೈಗಾಪಿನ ಸಾವಿರಮಂದಿ ಗರು ಡರು ಹೀಗೆಯೆ ತಮ್ಮ ದೇಹಗಳನ್ನು ಈಡಾಡಿದ ವರ್ಣನೆಯು ಶಾಸನಲ್ಲಿ ದೊರೆಯುತ್ತದೆ. 'ರಣಮೂರ್ಖ'ರೆಂಬ ಬಿರುದನ್ನು ಹೆಮ್ಮೆಯಿಂದ ತಾಳಿದ ವೀರರು ನಮ್ಮಲ್ಲಿ ಆಗಿದ್ದಾರೆ!

**೪. ಯತಿಗಳೂ ಸಿದ್ಧರೂ**

(ಜಂಗಮ) ಯತಿಗಳ ನಡೆವಳಿ ವೈದಿಕ ಪದ್ಧತಿಗೆ ಹೊಸದೆಂದು ಶ್ರೀ. ಚಂದಾ ಅವರು ಮೇಲೆ ಹೇಳಿದ ತಮ್ಮ ಪ್ರಬಂಧದಲ್ಲಿ ಪ್ರತಿಪಾದಿ ಸಿದ್ದಾರೆ (ಪು. ೩೨). ಛಾಂದೋಗ್ಯ ಮತ್ತು ಬೃಹದಾರಣ್ಯಕಗಳಲ್ಲಿ ಹೇಳಿದ ದೇವಯಾನ ಅಥವಾ ಪಿತೃಯಾನಗಳೆಂಬ ಎರಡು ಮಾರ್ಗಗಳಿಂದ ಇದು ಭಿನ್ನವಾಗಿದೆ. 'ಅಡವಿಯಲ್ಲಿದ್ದು ಶ್ರದ್ಧಾಯುಕ್ತರಾಗಿ ಸತ್ಯವದ ಉಪಾಸನೆಯನ್ನು ಮಾಡುವುದು ದೇವಯಾನ. ಇವರು ಮುಕ್ತರಾಗಿ ಜನ್ಮ ಮರಣರಹಿತರಾಗುವರು' (ಬೃ. ೬-೨-೧೫); ಯಜ್ಞ, ದಾನ, ತಪಗಳಿಂದ ಸಾಧನ ಮಾಡುವುದು ಪಿತೃಯಾನ. ಈ ದಾರಿಯಿಂದ ನಡೆಯುವವರು ಸ್ವರ್ಗವನ್ನು ಪಡೆಯುವರು. ಪುಣ್ಯವು ತೀರಿದ ಬಳಿಕ ಮತ್ತೆ ಭೂಲೋಕ ದಲ್ಲಿ ಜನ್ಮತಾಳುವರು. (ಬೃ. ೬-೨-೧೫-೧೬). ಇದರಲ್ಲಿ ಯೋಗಮಾರ್ಗದ ಸಮಾವೇಶವಾಗಿಲ್ಲ. ಹಠಯೋಗವನ್ನು ವೈದಿಕರು ಈಗಲೂ ತಿರಸ್ಕರಿಸುವರು.

ಧ್ಯಾನಯೋಗದ ಉಲ್ಲೇಖವು ಕೂಡ ವೈದಿಕ ಸಾಹಿತ್ಯದಲ್ಲಿ ಬಹಳ ಮುಂದಿನ ಕಾಲಕ್ಕೆ ಬರುವುದು. ಯಜ್ಞಯಾಗಾದಿ ವಿಧಿವಿಧಾನಗಳಲ್ಲಿ ಯೋಗಸಾಧನೆಗೆ ಇಂಬಿಲ್ಲ.

ವ್ರಾತ್ಯರ ನಿಂದಾ-ಸ್ತುತಿಯುಕ್ತವಾದ ಸೂಕ್ತಗಳು ಅಥರ್ವವೇದದಲ್ಲಿವೆ. ಅಲ್ಲಿಯ ವರ್ಣನೆಯಿಂದ ವ್ರಾತ್ಯರೆಂದರೆ ಯತಿಗಳೆಂದು ಕಂಡು ಬರುತ್ತದೆ. "ವ್ರಾತ್ಯನು ಒಂದು ವರುಷದ ವರೆಗೆ ನೆಟ್ಟಗೆ ನಿಂತಿದ್ದನು. 'ವ್ರಾತ್ಯನೇ ಏಕೆ ಹೀಗೆ ನಿಂತಿರುವೆ?' ಎಂದು ದೇವನು ಕೇಳಿದನು. 'ಅವರೆಲ್ಲ ಕೂಡಿ ನನಗಾಗಿ ಆಸನವನ್ನು ತರಲಿ' ಎಂದನು. ಅವರು ವ್ರಾತ್ಯನಿಗಾಗಿ ಆಸನವನ್ನು ತಂದರು. ವ್ರಾತ್ಯನು ಆ ಆಸನವನ್ನಲಂಕರಿಸಿದನು." ಅಥರ್ವವೇದದೊಳಗಿನ ವ್ರಾತ್ಯನ ಇಂತಹ ಹಲವು ವರ್ಣನೆಗಳಿವೆ. ಇವನ್ನೋದಿದರೆ ನಮ್ಮ ನಾಡಿನ ಜಂಗಮ ಯತಿಗಳ ನಡೆವಳಿಕೆಯ ಹೋಲಿಕೆಯು ಕಂಡುಬರುತ್ತದೆ. ಮನೆಗೆ ಬಂದ ವ್ರಾತ್ಯನನ್ನು ಉಪಚರಿಸಿ ಸತ್ಕರಿಸಿದರೆ ಅದರಿಂದ ಎಣೆಯಿಲ್ಲದ ಐಶ್ವರ್ಯಾದಿಗಳು ಲಭಿಸುವವೆಂದು ಅಲ್ಲಿ ಹೇಳಿದೆ.

ಮೊಹೆಂಜೊದಾರೊದಲ್ಲಿ ದೊರೆತ ಕಲ್ಲಿನ ಎರಡು ಅರ್ಧ ಪುತ್ಥಳಿಗಳು ಧ್ಯಾನಮೂರ್ತಿಗಳಾಗಿರುವುವೆಂದು, ಕಲಕತ್ತೆಯ ಆರ್ಕಿಯಾಲಾಜಿಕಲ್ ಮ್ಯೂಸಿಯಮ್ಮಿನ ಸುಪರಿಂಟೆಂಡೆಂಟರಾದ ಶ್ರೀ ಚಂದಾ ಅವರು ತಮ್ಮ ಪ್ರಕಟನೆಯಲ್ಲಿ ವಿವರಿಸಿದ್ದಾರೆ. ಇವು ವೇದ ಪೂರ್ವಕಾಲದ ಸಿದ್ಧ-ಯತಿಗಳ ಮೂರ್ತಿಗಳಾಗಿರಬೇಕೆಂದು ಅವರ ಅಭಿಪ್ರಾಯವಾಗಿದೆ ( ಪು. ೭೩ ) ಇಂದ್ರನು ಯತಿಗಳನ್ನು ನಾಶಮಾಡಿದಹಾಗೂ ಅವರಲ್ಲಿ ಕೇವಲ ಮೂವರು ಮಾತ್ರ, ಇಂದ್ರನಿಗೆ ಮಗುಗಳಂತೆ ಮೊರೆಯಿಟ್ಟುದರಿಂದ ಉಳಿದರೆಂದೂ ತೈತ್ತೀರಿಯ ಸಂಹಿತೆಯಲ್ಲಿ [೨. ೪. ೯. ೨ ) ವರ್ಣನೆಯಿದೆ. ಐತರೇಯ ಬ್ರಾಹ್ಮಣ, ಪಂಚವೀಂಶ ಬ್ರಾಹ್ಮಣಗಳಲ್ಲೂ ಇಂತಹ ಕಥೆಯುಂಟು. ಜೈಮಿನೀಯ ಬ್ರಾಹ್ಮಣದಲ್ಲಿ ಉಳಿದ ಮೂವರು ಯತಿಗಳು ರಾಯೋವಾಜ, ಪೃಥುರಶ್ಮಿ, ಬೃಹದ್ಗಿರಿ ಇವರು ಇಂದ್ರನನ್ನು ಸ್ತುತಿಸಿದ್ದುದನ್ನು ವರ್ಣಿಸಿದೆ.

ಧ್ಯಾನಬುದ್ಧ ಮೂರ್ತಿಗಳನ್ನೂ, ಜಿನಬಿಂಬಗಳನ್ನೂ, ಗೊಮ್ಮಟೇಶ್ವರನನ್ನೂ ನೋಡಿದಲ್ಲಿ ವೇದಪೂರ್ವಕಾಲದ ಆ ಸಿದ್ಧಯತಿಗಳ ಪರಂಪರೆಯೆ

ಮುಂದೆ ಈ ಬಗೆಯಾಗಿ ಸಾಗಿಬಂದಿರಬೇಕೆಂದು ತೋರುತ್ತದೆ; ಎಂದು ಶ್ರೀ ಚಂದಾ ಅವರ ಅಭಿಪ್ರಾಯವಿದೆ. ಲಿಂಗವಂತ ಜಂಗಮ ಯತಿಗಳ ಪರಂಪರೆಯೂ ಈ ಸಂದರ್ಭದಲ್ಲಿ ಮನನೀಯವಾಗಿದೆ. ಅಲ್ಲದೆ ಸಿದ್ಧರ ಒಂದು ಪೀಳಿಗೆಯು ನಮ್ಮ ನಾಡಿನಲ್ಲಿ ಆಗಿದೆ. ರೇವಣಸಿದ್ಧ, ಅಮೋಘಸಿದ್ಧ, ಕಾಡಸಿದ್ಧ ಮೊದಲಾದ ಅವರ ಹೆಸರುಗಳು ಸುಪ್ರಸಿದ್ಧವಾಗಿವೆ. ಸೊನ್ನಲಿಗೆಯ ಸಿದ್ಧರಾಮನೂ ಈ ಸಂಗಡಕ್ಕೆ ಸೇರಿದವನೆ. ಹಾಲುಮತದಲ್ಲಿ ಕುರುಬರಲ್ಲಿ ಈ ಸಿದ್ಧರು ಹೆಚ್ಚು. ಆಧುನಿಕ ಸುಪ್ರಸಿದ್ಧ ತತ್ವಜ್ಞಾನಿಗಳೂ ಅನುಭಾವಿಗಳೂ ಎಂದು ಹೆಸರಾದ ಪ್ರೊ. ರಾನಡೆ ರಾಮರಾಯರ ಗುರುಪರಂಪರೆಯಲ್ಲಿ ಶ್ರೀ ಕಾಡಸಿದ್ಧ ಮೊದಲಾದವರ ಹೆಸರುಗಳು ಬರುತ್ತವೆ.

ಯೋಗಸಿದ್ಧರು, ಜಂಗಮ ಯತಿಗಳು ಮೊದಲಾದ ಈ ಪರಂಪರೆಗಳು ಆರಂಭದಲ್ಲಿ ವೈದಿಕ-ಮಾರ್ಗದಿಂದ ತೀರ ಭಿನ್ನವಾಗಿದ್ದುವು. ನಾವು ಸ್ಮರಣೆಯ ಭಕ್ತಿಪಂಥವೂ ಇದೇ ಬಗೆಯದೆಂದು ಹೇಳಬಹುದಾಗಿದೆ. ವೈದಿಕ ಪರಂಪರೆಯ ಅಭಿಮಾನಿಗಳು ಈ ಬಗೆಯ ಭಕ್ತಿಪಂಥವನ್ನು ಕೀಳ್ಬಗೆಯುತ್ತಾರೆ. ವ್ಯಾಸಕೂಟ, ದಾಸಕೂಟಗಳಲ್ಲಿರುವ ಭೇದವು ಈ ಬಗೆಯದೆ ಆಗಿದೆ. ಗುರುವಿನಲ್ಲಿ ಸರ್ವ ಸಮರ್ಪಣ ಮಾಡಬೇಕೆಂಬ ತಿಳುವಳಿಕೆಯು ಅತಿರೇಕಕ್ಕೆ ಮುಟ್ಟಿ ಹೊಲ-ಮನೆ-ಧನಗಳಂತೆ ಮಡದಿಯನ್ನೂ ಗುರುವಿಗೆ ಅರ್ಪಿಸುವ ನಡೆವಳಿಯು ೧೨ನೆಯ ಶತಮಾನದಲ್ಲ ಕರ್ನಾಟಕ, ಮರಹಟ್ಟಗಳಲ್ಲಿ ಇದ್ದುದಕ್ಕೆ ಆಧಾರಗಳು ಸಿಕ್ಕುತ್ತವೆ. ಉಪನಿಷತ್ತು ಗುರುವಿನ ಗುಲಾಮನಾಗಲು ಬೋಧಿಸುವುದಿಲ್ಲ ‘ ಯಾನ್ಯನವದ್ಯಾನಿ ಕರ್ಮಾಣಿ ತಾನಿ ಸೇವಿತವ್ಯಾನಿ; ನೋ ಇತರಾಣಿ; ಯಾನಿ ಅಸ್ಮಾಕಂ ಸುಚರಿತಾನಿ ತಾನಿ ತ್ವಯೋಪಾಸ್ಯಾನಿ; ನೋ ಇತರಾಣಿ’ ಎಂದು ತೈತ್ತಿರೀಯೋಪನಿಷತ್ತಿನ ಆಜ್ಞೆಯಿದೆ (೧ ೧೧.೨) ಆದರೂ ಬಾಯ್ತಂಬುಲ, ಮತ್ತು ಮುಡುಗೂಳು ಪ್ರಸಾದವೆಂದು ಸ್ವೀಕರಿಸುವುದೂ, ಬೀಳುಡೆ (ಶೇಷವಸ್ತ್ರ) ಧರಿಸುವುದೂ, ಚರಣತೀರ್ಥವನ್ನು ಕುಡಿಯುವುದೂ ನಡೆವ ಭಕ್ತಿಪಂಥಗಳೂ ಈಗಲೂ ಇಲ್ಲದಿಲ್ಲ.

**೫ ಧರ್ಮಗಳು**

ನಮ್ಮದೇ ಸನಾತನಧರ್ಮ; ಅದು ಎಂದಿನಿಂದಲೂ ಇದ್ದ ಕಿದ್ದ[illegible]

ಏನೂ ಬದಲಿಲ್ಲದೆ ನಡೆಯುತ್ತ ಬಂದಿದೆಯೆಂಬ ಹೆಮ್ಮೆಯ ಮಾತುಗಳು ನಾಡಿನಲ್ಲಾದ ಐತಿಹಾಸಿಕ ಪರಿವರ್ತನಗಳನ್ನು ಅರಿತುಕೊಂಡವರ ಬಾಯಿಂದ ಎಂದೂ ಬಾರವು. ಇಂದ್ರಾಗ್ನಿ ಪೂಜೆಯೆ ವೈಶಿಷ್ಟ್ಯವಾಗಿದ್ದ ವೈದಿಕ ಧರ್ಮವು ಲುಪ್ತವಾದುದನ್ನು ಒಪ್ಪಿಕೊಳ್ಳಲೇಬೇಕು. ವೈದಿಕ ಧರ್ಮಾಭಿಮಾನವು ನಖ-ಶಾಖಾಂತವಾಗಿದ್ದರೂ ವೇದದ ಒಂದು ಋಚೆಯ ಅರ್ಥವೂ ತಿಳಿಯದಿರುವವರಿದ್ದಾರೆ. ವೇದಗಳ ಅರ್ಥವು ತಿಳಿಯದಾದುದರಿಂದಲೋ ಅಥವಾ ಬೇರೆ ಕಾರಣಕಾಗಿಯೋ ವೈದಿಕ ಮಂತ್ರಗಳು ಹಿಂದೆ ಬಿದ್ದು, ಪುರಾಣೋಕ್ತ, ಆಗಮೋಕ್ತ, ತಂತ್ರೋಕ್ತ ಕ್ರಿಯೆಗಳು ನಡೆಯಹತ್ತಿ ಅವುಗಳ ಪಠಣವೇ ಆಗ ನಡೆಯುವುದುಂಟು. ಈಗ ಇವುಗಳ ಅರ್ಥವೂ ತಿಳಿಯದ್ದರಿಂದ ದೇಶಭಾಷೆಯಲ್ಲಿ ಮಂತ್ರ ಹೇಳುವ ಅವಶ್ಯಕತೆಯುಂಟಾಗಿದೆ.

ಜೈನ-ಬೌದ್ಧಧರ್ಮಗಳು ಅವೈದಿಕ ಪಂಥಗಳೆಂದು ಸಾರಿದರೂ ಅವುಗಳ ವಿಚಾರದ ಪರಿಣಾಮವು ವೈದಿಕ ಧರ್ಮದ ಮೇಲೆ ಆಗದೆ ಹೋಗಿಲ್ಲ. ಶ್ರೀ ಶಂಕರಾಚಾರ್ಯರ ಪಂಥಕ್ಕೆ ಪ್ರಚ್ಛನ್ನ ಬೌದ್ಧಮತವೆಂದೂ ಶ್ರೀ ಮಧ್ವಾಚಾರ್ಯರ ಪಂಥಕ್ಕೆ ಪ್ರಚ್ಛನ್ನ ಜೈನಮತವೆಂದೂ ಇರುವ ಆಕ್ಷೇಪವನ್ನು ತೀರ ಅಲ್ಲಗಳೆಯುವುದಕ್ಕಾಗುವುದಿಲ್ಲ. ವೈದಿಕರು ರುದ್ರನನ್ನು ಹೇಗೋ ಸ್ವೀಕರಿಸಿದ್ದರೂ (' ಶಿವ ರಹಸ್ಯ ' ನೋಡಿ) ಲಿಂಗ ಪೂಜಕರನ್ನು 'ಶಿಶ್ನೋದೇವ' ರೆಂದು ಹೀಯಾಳಿಸಿ ದೂರಮಾಡುತ್ತಿದ್ದರು. (ಲಿಂಗ, ಯೋಗಿಗಳ ಆಕಾರಗಳು ಮೊಹೆಂಜೋದಾರದಲ್ಲಿ ದೊರೆತಿವೆ.) ಆದರೆ ಆ ಪಂಥಗಳು ಬ್ರಾಹ್ಮಣರನ್ನು ತನ್ನಲ್ಲಿ ಸೆಳೆದುಕೊಳ್ಳದೆ ಬಿಡಲಿಲ್ಲ. ವೇದಪೂರ್ವ ಕಾಲದಲ್ಲಿ ರೂಢವಾಗಿದ್ದ ಒಂದೊಂದು ವಿಚಾರವೂ ಈ ತೆರನಾಗಿ ಮುಂದೆ ಒಂದೊಂದು ಧರ್ಮ-ಪಂಥದ ರೂಪತಾಳಿ ಕಾಲೋಚಿತವಾದ ಹಲವು ಮಾರ್ಪಾಟಗಳೊಂದಿಗೆ ಇಂದಿನವರೆಗೆ ಉಳಿದುಕೊಂಡಿದ್ದು ಕಂಡುಬರುತ್ತದೆ. ಕಾಲಪರಿಸ್ಥಿತಿಯ ಕಾವಿನಲ್ಲಿ ಭಾರತದ ವೈದಿಕ-ಅವೈದಿಕ ಮತಗಳು ಒಂದು ಮುಸಿಯಲ್ಲಿ ಕರಗಿ ಒಂದುಗೂಡಿ ಇಂದು ಭಾರತಿಯ ಧರ್ಮ-ಹಿಂದೂ ಧರ್ಮವೆಂಬ ಒಂದು ದಿವ್ಯ ಘಟ್ಟಿಯು ಸಿದ್ಧವಾಗಿದೆ; ಆಗುತ್ತಲೂ ಇದೆ. ಆಗುತ್ತಲೂ ಇದೆ ಎನ್ನುವುದಕ್ಕೆ ಒಂದು ಕಾರಣವಿದೆ. ಇದು ಉಳಿದ ಧರ್ಮಗಳಂತೆ ಕೇವಲ ಭೂತಮೂರ್ತಿಯಲ್ಲ. ಭವ್ಯಮೂರ್ತಿ.

‘ ಯದ್ಭೂತಂ ಯಚ್ಚ ಭವ್ಯಂ ’ ಎಲ್ಲವೂ ಆ ಸಹಸ್ರಶೀರ್ಷನಾದ ಅನಂತನ,
ಸತ್ವದ ರೂಪಗಳು; ಎಂಬುದು ಭಾರತೀಯರ ಪರಮ ಶ್ರದ್ಧೆ. ಈ ಶ್ರದ್ಧೆಯ
ಬಲದಿಂದಲೆ ಅವರು ಬಂದುದನ್ನೆಲ್ಲ ತಿಳಿಮಾಡಿ ಅರಗಿಸಿಕೊಂಡಿದ್ದಾರೆ.
ಇನ್ನು ಮುಂದೆ ಅರಗಿಸಿಕೊಳ್ಳುತ್ತಾರೆ. ಈ ಅದ್ಭುತ ಶಕ್ತಿಯೆ ಭಾರತ
ಸಂಸ್ಕೃತಿಯನ್ನು ಅಮರವಾಗಿ ಮಾಡಿದೆ.

ಕಂನಾಡಿನಲ್ಲಿರುವ ಅನೇಕ ಊರಗಳು ಮೇಲ್ಕಾಣಿಸಿದ ಸಿದ್ಧಪುರುಷರ
ಪ್ರಭಾವದ ಸೂಚಕವಾಗಿವೆ. ಕುರುವರಿಂದ ಭಾರತ ಸಂಸ್ಕೃತಿಗೆ ಇನ್ನೊಂದು
ದೇವತೆಯ ಕಾಣಿಕೆ ದೊರೆತಿದೆಯೆಂದು ನನ್ನ ಗ್ರಹಿಕೆ. ಕುರುವರು ವೀರ
ಶಿವನ ಭಕ್ತರು. ಇವರು ವೀರ ‘ ನಾಯಕರು. ’ ಆದಕಾರಣ ಬೀರನಲ್ಲಿ ಭಕ್ತಿ.
ಈ ಬೀರನೇ ಮತ್ತೆ ಸಂಸ್ಕೃತ ರೂಪ ತಾಳಿ ಭೈರವೇಶ್ವರನಾಗಿರಬೇಕೆಂದು
ನನ್ನ ಊಹೆ. ಭೈರವನು ಕ್ಷೇತ್ರಪಾಲಕ ದೇವತೆಯಂತೆ; ಸರಿ. ಇವನು
ಊರ ಕಾವಲುಗಾರ. ಆದುದದರಿಂದಲೇ ಊರ ಹಳಬ-ಕುರುಬ.
ಉಳಿದ ಪ್ರಾಂತಗಳಿಗಿಂತಲೂ ಕಂನಾಡಿನಲ್ಲಿ ಭೈರನ ಹೆಸರು ಹೆಚ್ಚು ಪ್ರಚಾರ
ದಲ್ಲಿದೆಯೆಂದು ನನ್ನ ತಿಳುವಳಿಕೆಯಾಗಿದೆ. ಹಳೆಯ ಶಾಸನಗಳಲ್ಲಿ ಈ ಹೆಸರು
ಸು. ೧೦ನೆಯ ಶತಮಾನದಿಂದ ಮುಂದೆ ಅಡಿಗಡಿಗೆ ಬರುತ್ತದೆ ಭೈರನ
ಹಳ್ಳಿ, ಭೈರಗಿಕೊಪ್ಪ, ಭೈರಾಖ್ಯಪುರ, ಭೈರಾಪುರ, ಭೈರಸಾಂದ್ರ, ಭೈರ
ವಾಡಿ, ಭೈರವಾಪಟ್ಟಣ, ಭೈರನಪುಟ್ಟಿ ಮೊದಲಾದ ಎಡೆಗಳಿವೆ. ಈ
ಸಂಪ್ರದಾಯದಲ್ಲಿ ನಾಥ ಪಂಥದ ಪ್ರಭಾವವೂ ಒಂದಿಷ್ಟು ಕಂಡುಬರು
ವುದು. ಭೈರವ ಮೂರ್ತಿಯು ನಾಥಯತಿಯ ಒಂದು ಪ್ರತೀಕವೆಂದರೂ
ಸರಿ.

ಕಂನಾಡು ಜೈನಧರ್ಮದ ತವರ್ಮನೆಯಾಗಿತ್ತು. ಊರ ಹೆಸರುಗಳಲ್ಲಿ
ಜಿನರಾಳ, ಜೈನಾಪುರ, ಬಸದಿಕೊಪ್ಪ, ಬಸ್ತಿವಾಡ ಮುಂತಾದುವು ಜೈನ
ಧರ್ಮದ ಸ್ಪಷ್ಟವಾದ ಕುರುಹುಗಳಾಗಿವೆ. ಇನ್ನು ಕೆಲವು ಹೆಸರುಗಳು ಜೈನ
ರವೆಂದು ತಿಳಿಯದಂತಹ ಸ್ಥಿತಿಯು ಒಂದಿದೆ. ಆ ಊರಲ್ಲಿ ಜೈನರ ಕರುಹು
ಗಳು ದೊರೆಯದೆ ಇದ್ದರೂ ಊರ ಹೆಸರು ಜೈನರ ಪ್ರಾಚೀನ ವರ್ಚಸ್ಸಿನ
ಸಾಕ್ಷಿಯಾಗಿದೆ. ಉದಾಹರಣಾರ್ಥವಾಗಿ ಸವಣೂರು, ಇದು ಶ್ರಮಣರ
ಊರೆಂದು ಆ ಹೆಸರೆ ಸಾರುತ್ತಲಿದೆ.

## ೬ ಕೆಲದೇವತೆಗಳೂ ಪಂಥಗಳೂ

ಶಿವಸಂಬಂಧದ ಅನೇಕ ಊರುಗಳು ಇಲ್ಲಿಯ ಶೈವಪಂಥದ ಪ್ರಚಾರ, ವಿಸ್ತಾರದ ದ್ಯೋತಕವಾಗಿವೆ. ಹಳ್ಳಿಹಳ್ಳಿಗೆ ಮೂಲಸ್ಥಾನದೇವರು ಮೂಲಸ್ಥಾನ ಕಲ್ಲೇಶ್ವವೆಂಬ ದೇವಸ್ಥಾನವು ಇಲ್ಲದ ಭಾಗಗಳು ಇಲ್ಲ. ಮಲ್ಲಯ್ಯನಂತೆ ಕಲ್ಲೇಶ್ವರ, ಕಲ್ಮೇಶ್ವರ ಅಥವಾ ಕಲ್ಲಿನಾಥವೆಂಬ ಹೆಸರಿನ ದೇವಸ್ಥಾನಗಳು ಪರ್ವತದ ಪೂಜೆಯ ಸೂಚಕವಾಗಿರಬೇಕೆಂದು ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು 'ಸಂಭಾವನೆ' ಗ್ರಂಥದ ಲೇಖನದಲ್ಲಿ ಬರೆದಿರುವರು. ಆದರೆ ಇದನ್ನು ಒಪ್ಪಿಕೊಳ್ಳಲು ಒಂದು ತೊಂದರೆಯಿದೆ. ಮೈಲಾರಗಳು ಬಹುತರವಾಗಿ ಎಲ್ಲವೂ ಮಲೆಯ (ಎಂದರೆ ಗುಡ್ಡ, ಪರ್ವತ)ವಾಗಿವೆ. ಹಾಗೆ ಕಲ್ಲೇಶ್ವರ ಅಥವಾ ಕಲ್ಮೇಶಗಳ ಒಂದು ಪ್ರಖ್ಯಾತ ದೇವಸ್ಥಾನವಾದರೂ ಪರ್ವತದ ಮೇಲೆ ಇದ್ದುದು ನನಗೆ ದೊರೆತಿಲ್ಲ. ಈ ಕಲ್ಮೇಶ್ವರದ ಸಂಬಂಧದ ಕತೆಗಳಲ್ಲಿ ಕೆಲವೆಡೆಗೆ, 'ಗೋವು ಒಂದು ಹುತ್ತಿನಮೇಲೆ ಹೋಗಿ ಹಾಲು ಕರೆಯುತ್ತಿತ್ತು. ಅಲ್ಲಿ ಹುಡುಕಿ ನೋಡಲು ಶಿವಲಿಂಗವು ದೊರೆತಿತು. ಅದುವೆ ಈ ಕಲ್ಲಿನಾಥ' ಎಂಬೀ ಬಗೆಯ ಪವಾಡ-ಕತೆಗಳುಂಟು. ಈ ಕತೆಯೊಳಗಿನ ಹಾಲಿನ ಸಂಬಂಧವನ್ನು ಇನ್ನು ಕೆಲವು ದೇವತೆಗಳಿಗೂ ಹೇಳುವ ವಾಡಿಕೆಯಿದೆ. ಆದರೆ ಇಲ್ಲಿ ಮುಖ್ಯವಾಗಿ ಶಿವನೊಡನೆ ಹಾಲಿನ ಸಂಬಂಧವು ಬಂದುದರಿಂದಲೇ ಕಲ್ಲೇಶ (ಕಳ್ಳೇಶ) ಎಂದು ಹೆಸರು ಉಂಟಾಗಿರಬೇಕೆಂದು ನನ್ನ ಊಹೆ. ಕಳ್ ಎಂದರೆ ಹಾಲು; ಕಲ್ಲಿನಾಥ, ಕಲ್ಮೇಶ್ವರ ಎಂದರೆ ಹಾಲಪ್ಪನೆಂದರ್ಥ. ಕಲ್ಲಿನಾಥನಿರುವ ದೇವಸ್ಥಾನಗಳಿಗೇ ಮೂಲಸ್ಥಾನದ ದೇವರೆಂಬ ಪರ್ಯಾಯ ನಾಮವಿದ್ದುದು ಬಹಳ ಮಹತ್ವದ್ದಾಗಿದೆ. ಈ ನಾಡ ಮೂಲಿಗರು ಕಳವರು. ಇದು ಅವರ ಮೂಲಿಗರ, ಮೂಲಸ್ಥಾನದ ದೇವರೆಂದು ಅರ್ಥವಾಗುತ್ತದೆ. ಈ ಕಲ್ಲೇಶನಿಗೆ ಕಣ್ಣೇಶನೆಂದು ಇನ್ನೊಂದು ಹೆಸರು. ಕಣ್ಣೇಶ್ವರನ ಹಲವು ದೇವಸ್ಥಾನಗಳಿವೆ. ಅವನ್ನು ಅನೇಕರು ಪುರಾತನ ಐತಿಹಾಸಿಕ ಹಿನ್ನೆಲೆ ತಿಳಿಯದೆ ಕಣ್ವೇಶ್ವರವೆಂದು ಭಾವಿಸಿದ್ದುಂಟು. ಕನ್ನಂಬಾಡಿಗೆ ಇಂತಹ ದೇವಸ್ಥಾನವುಂಟು. ಹಾನಗಲ್ಲ ತಾಲೂಕಿನಲ್ಲಿ ಕಣ್ಣೇಶ್ವರವೆಂಬ ಊರಿದೆ. ಕನ್ನೂರು, ಕಣ್ಣಪುರ ಮೊದಲಾದ ೬ನೆಯ ಅಧ್ಯಾಯದಲ್ಲಿ ಕೊಟ್ಟ ಊರುಗಳೆಲ್ಲವೂ ಈ ಬಗೆಯಾಗಿ

ಶಿವಾಲಯುಗಳೇ ಇವೆ. ಇವೇ ಕಣ್ಣ ದೇವಸ್ಥಾನಗಳು. ಕಣ್ಣೇಶ್ವರ ಕಲ್ಲೇಶ್ವರ ದೇವಸ್ಥಾನಗಳು.

ಶಿವನ ಇನ್ನೂ ಹಲವು ಹೆಸರಿನ ಊರುಗಳು ದೊರೆಯುವುವು. ಅದರಂತೆ ವಿಷ್ಣುವಿನ ನಾನಾತರದ ಹೆಸರಿನ ಊರುಗಳಿವೆ. ವೆಂಕಟ, ವಿಠ್ಠಲ, ನರಸಿಂಹಾದಿ ದೇವತೆಗಳ ಕ್ಷೇತ್ರಗಳಿವೆ. ಬ್ರಹ್ಮನ ಹೆಸರಿನ ಊರು ಉಂಟು ( ಪು. ೨೮ ನೋಡಿ ). ಶಂಕರನಾರಾಯಣ, ಹರಿಹರ ಎಂಬೀ ಹೆಸರುಗಳು ಶೈವ ಮತ್ತು ವೈಷ್ಣವ ಪಂಥದ ಸಮನ್ವಯದ ಸೂಚಕಗಳಾಗಿವೆ. ವೈಷ್ಣವ ಪಂಥವು ಶೈವ ಪಂಥದನಂತರ ಇಲ್ಲಿ ವಿಶೇಷ ಪ್ರಚಾರದಲ್ಲಿ ಬಂತು. ದ. ಕನ್ನಡ ಜಿಲ್ಲೆಯ ಹಲವು ಊರ ಹೆಸರುಗಳು ಶಿವಸೂಚವಾಗಿದ್ದೂ ವೈಷ್ಣವ ಮತದ ಪ್ರಚಾರದ ಕಾಲದಲ್ಲಿ ಅಲ್ಲಿಯ ಶಿವಾಲಯುಗಳು ಹಿಂದೆ ಬಿದ್ದು ವಿಷ್ಣು-ಕೃಷ್ಣರ ದೇಗುಲಗಳಿಗೆ ಪ್ರಾಶಸ್ತ್ಯಬಂದುದು ಇಲ್ಲಿಯ ಶಾಸನಾದಿಗಳಿಂದ ತಿಳಿದು ಬರುತ್ತದೆ. ಪಂಡರಿಗೆ ( ಪಂಢರಪುರ ), ಉಡುಪಿ ಇಂತಹ ಮಹತ್ವದ ಸ್ಥಾನವಾಗಿವೆ. ಶೈವ ವೈಷ್ಣವರು ಹಲವು ಜೈನ ಮಂದಿರಗಳನ್ನು ಆಕ್ರಮಿಸಿ ತಮ್ಮ ದೇಗುಲಗಳನ್ನಾಗಿ ಮಾರ್ಪಡಿಸಿದ್ದೂ ಉಂಟು. ಒಂದು ಕಾಲದಲ್ಲಿ ತ್ರೈಪುರುಷ ದೇವಾಲಯುಗಳು ನಮ್ಮ ನಾಡಿನಲ್ಲಿ ಇದ್ದುವು. ಶಿವ-ವಿಷ್ಣು-ಬ್ರಹ್ಮ, ಅಥವಾ ಬ್ರಹ್ಮನ ಬದಲು ಸೂರ್ಯರನ್ನು ಸಮಾನವಾಗಿ ಇಟ್ಟು ಯಾವ ಭೇದವನ್ನೆಣಿಸದೆ ಪೂಜಿಸುತ್ತಿದ್ದ ಕಾಲವೊಂದಿತ್ತು. ಬಾದಾಮಿ ಚಾಲುಕ್ಯರು, ಮತ್ತು ಮಳಖೇಡಿನ ರಾಷ್ಟ್ರಕೂಟರುಗಳ ಕಾಲದನಂತರ ಇಂತಹ ದೇವಾಲಯುಗಳು ಹಿಂದೆ ಬಿದ್ದು ಒಂದೇ ವಿಶಿಷ್ಟ ದೇವತೆಯ ವಿಪರೀತ ಅಭಿಮಾನವು ಚಿಗಿತುಕೊಂಡಿತು. ಮುಂದಿನ ಕಾಲದಲ್ಲಿ ಸೂರ್ಯೋಪಾಸನೆಯಂತೂ ಸಂಪೂರ್ಣ ಹೋಯಿತು. ನೇಸರಿಗೆ, ಭಾನಾಪೂರಗಳಂತಹ ಊರ ಹೆಸರುಗಳು ಸೂರ್ಯಭಕ್ತಿಯ ಸಾಕ್ಷಿಯಾಗಿವೆ.

ಇಲ್ಲಿ ಶಾಕ್ತ ಪಂಥವೂ ವಿರಿಕೆಯಲ್ಲಿತ್ತು. ದೇವಿಗೆ 'ಭಗವತಿ' ಎಂದು ಪ್ರಾಚೀನಕಾಲದಲ್ಲಿ ಕರೆವ ವಾಡಿಕೆಯಿತ್ತು. ಪಂಪನು ' ಭಗವತಿ ವಿರುವೇಳ್ವ ತೆರದಿಂ' ಎಂಬ ಪದ್ಯದಲ್ಲಿ ಈ ಹೆಸರನ್ನು ಬಳಸಿದ್ದಾನೆ. ವಿಜಾಪೂರ ಜಿಲ್ಲೆಯಲ್ಲಿ 'ಭಗವತಿ' ಎಂಬ ಹೆಸರಿನ ಊರು ಉಂಟು. ಈಗ 'ಭಗವತಿ ಎಂದರೆ ಅರ್ಥವಾಗುವದೋ ಸಂದೇಹ! ಭಗವತಿ ಎಂಬ ಸಂಪ್ರದಾಯವು

ಮರ್ಹಾಟದಲ್ಲಿ ಈಗಲೂ ಉಂಟು. ಲಕ್ಷ್ಮಿ ಮತ್ತು ಪಾರ್ವತಿದೇವಿಯನ್ನು ಒಂದೇಯೆಂದು ನೋಡುತ್ತಿದ್ದುದು ಕೊಲ್ಹಾಪುರದ ದೇವಿಗೆ ಇರುವ ಹೆಸರುಗಳಿಂದ ಕಂಡು ಬರುವುದು. 'ಕೊಲ್ಹಾಪುರದ ಮಹಾಲಕ್ಷ್ಮಿ' ಎಂದು ಹೇಳುವ ವಾಡಿಕೆಯಿರುವಂತೆ, ಗೊಂದಲಿಗರಲ್ಲಿ 'ಕೊಲ್ಹಾಪುರದ ಅಂಬಾಭವಾನಿ' ಎಂಬ ಸಾಂಪ್ರದಾಯವು ಇದೆ. ೧೧೪೯ ಕ್ರಿ. ಶ. ದ ಒಂದು ಶಾಸನದಲ್ಲಿ ಇದಕ್ಕೆ ಆಧಾರವು ದೊರೆಯುತ್ತದೆ. ಬಾಗಲಕೋಟೆ ತಾಲೂಕಿನ ಶಿರೂರ ಶಾಸನ. 'ರುದ್ರಾರ್ಧಾಂಗೋತ್ಸಂಗ ನಿವಾಸಿನೀ, ಸಿಂಹವಾಹಿನೀ, ಶ್ರೀಮತ್ ಕೊಲ್ಹಾಪುರ ಪೀಠಾಧಿಷ್ಠಿತೇ, ಶ್ರೀಮನ್ಮಹಾಲಕ್ಷ್ಮೀ ದೇವ್ಯಾಪಾದ-ಪದ್ಮೋಪಜೀವಿ ಪಾಶುಪತಾಚಾರ್ಯ ಪ್ರಭು ರಾಜವರ್ಮನ' ಹೆಸರು ಅದರಲ್ಲಿ ಬಂದಿದೆ. ಪಾಶುಪತರ ಉಲ್ಲೇಖವು ಅಲ್ಲಿ ಬಂದಿರುವುದರಿಂದ, ನಮ್ಮಲ್ಲಿ ಆಗ ಆ ಸಂಪ್ರದಾಯವು ಪ್ರಚಾರದಲ್ಲಿದ್ದುದು ಗೊತ್ತಾಗುತ್ತದೆ. ಮಂಗಳೂರಿನ ಮಂಗಳಾದೇವಿಯೂ ಬಾದಾಮಿಯ 'ಬನದೇವಿ'ಯೂ ಕಾಪಾಲಿಕರಿಂದಲೂ ಪೂಜೆಗೊಳ್ಳುತ್ತಿರಬೇಕು. ಮಹಾಕೂಟದಲ್ಲಿ ಕಾಪಾಲಿಕರನ್ನು ಚಿತ್ರಿಸಿದಂತಹ ಕೆತ್ತನೆಯೊಂದಿದೆ.

ಕರ್ನಾಟಕ ಶಾಕ್ತರಲ್ಲಿ ಶ್ರೀ ಚಕ್ರದ ಆರಾಧನೆಯು ವಿಶೇಷವಾಗಿದ್ದುದನ್ನು ಕೇಳಿದ್ದೇನೆ. ನಮ್ಮ ನಾಡಿನಲ್ಲಿರುವ ನೂರಾರು 'ಸಿರಿ'ಪೊಳಲು, ಪುರ ಊರು ಹಟ್ಟಿ, ಹಾಳ ಗ್ರಾಮ (ಗಾವ) ಗಳು ಶ್ರೀದೇವಿಯ ಉಪಾಸನೆಯ ಕುರುಹುಗಳಾಗಿವೆ. ಇದು ಕರ್ನಾಟಕ ವೈಶಿಷ್ಟ್ಯವೇನೋ. ಪುಣೆಜಿಲ್ಲೆಯಲ್ಲಿ ಶಿರೂರ ಎಂಬ ತಾಲೂಕಿನ ಸ್ಥಳವಿದೆ. 'ಶಿರೂರ'ದ ಕೊನೆಯ ಊರು ಕರ್ನಾಟಕದ ಅಚ್ಚಳಿಯದ ಮುದ್ರೆಯಾಗಿದೆ. ಶಿರಾಳ, ಶಿರಟೆ, ಎಂಬೀ ಬಗೆಯ ರೂಪತಾಳಿದುವಂತೂ ಎಷ್ಟೋ ಇವೆ.

ಲಕ್ಷ್ಮಿಯ ಹೆಸರಿನ ಎಡೆಗಳು ತೀರ ಕಡಿಮೆ; ಇದ್ದರೂ ಅವು ಬಹಳ ಇತ್ತೀಚಿನವು. ಶ್ರೀದೇವಿ ಭೂದೇವಿ ಎಂದು ವಿಷ್ಣುದೇವರ ಹೆಂಡಿರೆಂದು ಹೇಳುವುದು ಹಳೆಯ ವಾಡಿಕೆ. ಶಿನ್ ಎಂಬ ಕಂದಮೀಳ ವರ್ಗದ ಶಬ್ದ-ಬೀಜದದಿಂದ ಉಂಟಾದ ಶಬ್ದಮಾಲಿಕೆಯಲ್ಲಿ ಶ್ರೀ ಎಂಬ ಸಂಸ್ಕೃತ ರೂಪವೂ ಒಳಗೊಳ್ಳುವುದೆಂದು ನನ್ನ ನಂಬುಗೆಯಾಗಿದೆ. ಶ್ರೀ ಸೂಕ್ತದಲ್ಲಿ ಲಕ್ಷ್ಮಿಗೆ ಎಂದರೆ ಶ್ರೀದೇವಿಗೆ 'ಚಂದ್ರಾ', 'ಚಂದ್ರಾಭಾ' ಎಂದು ವರ್ಣಿಸಿದೆ.

ಶ್ರೀ-ಶಕ್ತಿಯ ಪೂಜೆಯ ಮುಖ್ಯ ದಿನವು ಹುಣ್ಣಿವೆ. (ದಕ್ಷಿಣ ಕನ್ನಡ ಜಿಲ್ಹೆಯಲ್ಲಿ 'ತಿಂಗಳ'ಎಂಬ ಊರಲ್ಲಿ ದೇವಿಯ ಸ್ಥಾನವಿದೆ). 'ಹಿರಣ್ಯವರ್ಣಾಂ' ಎಂದು ಶ್ರೀದೇವಿಯ ಬಣ್ಣವನ್ನು ಶ್ರೀ ಸೂಕ್ತವು ಹೇಳುವುದು. ಶಿನ್-ಚಿನ್-ಕೆನ್ ಎಂಬುವಲ್ಲಿಯೇ ಈ ಅರ್ಥವು ಅಡಕವಾಗಿದೆ. ಸಂಸ್ಕೃತ ಭಾಷೆಯಿಂದ ಅದರ ಅರ್ಥವು ಸ್ಪಷ್ಟವಾಗದೆ. ಇದ್ದುದರಿಂದ 'ಹಿರಣ್ಯವರ್ಣಾಂ' 'ಹೇಮಮಾಲಿನೀಂ' ಎಂದು ಅದರ ಸ್ಪಷ್ಟೀಕರಣ ಮಾಡಬೇಕಾಗಿದೆ. ಶಿನ್ ದಿಂದ ಶ್ರೀಶಬ್ದವು ನಿಷ್ಪನ್ನವಾಗಿರುವುದೆಂದು ನನ್ನ ಗ್ರಹಿಕೆಯಾಗಲು ಇದೊಂದು ಮುಖ್ಯವಾದ ಕಾರಣವು. ಶಿನಿವಾಲಿ ಎಂದರೆ ಚಿಂದಿರನ ಒಂದು ಹೆಸರು. ಚಂದ್ರವೆಂಬುದರ ವ್ಯುತ್ಪತ್ತಿಯೂ ಇಲ್ಲಿ ಸೂಚಿತವಾಗುತ್ತದೆ. ಶಿನ್-ಚಿನ್-ಕೆನ್ನ, ಚಿಂದ; ಇದುವೆ ಸಂಸ್ಕೃತದಲ್ಲಿ ಚಂದ್ರವಾಗಿದೆಯೆಂದು ಗ್ರಹಿಸಲು ಏನು ಬಾಧಕ?

ಉತ್ತರ ಕಂನಡ ಜಿಲ್ಹೆಯ ನಾಡವರಲ್ಲಿ ಕೆಂಗಲಾ ಪರಮೇಶ್ವರಿಯ ಪೂಜೆಯಿದೆ. ದೇಶಸ್ಥ ಬ್ರಾಹ್ಮಣರಲ್ಲಿ ಹಲವರಲ್ಲಿ ಚಿಂದಲಾ ಪರಮೇಶ್ವರಿಯುಂಟು. ಖಾನದೇಶದಲ್ಲಿ ಚಾಂಗದೇವಿಯ ಮಹೋತ್ಸವಗಳು ಹಳ್ಳಿ ಹಳ್ಳಿಗೆ ನಡೆಯುತ್ತವೆ. ಇವಳಿಗೆ ಚಿಂಗಳಿಕೆಮ್ಮನೆಂದು ನಮ್ಮ ನಾಡಿನಲ್ಲಿ ಹೆಸರು. ಹೀಗೆ ಇವೆಲ್ಲ ಶ್ರೀ ದೇವಿಯ ಹೆಸರುಗಳೆ ಆಗಿವೆ. ಶಿನ್ (ಶ್ರೀ) ಎಂಬುದರ ಬಳಗದ ನುಡಿಗಳವು ಕೆನ್ ಮತ್ತು ಚೆನ್ ಎಂದು. ಶಿರೂರೂಗಳಂತೆ ಕೆಂದೂರುಗಳುಂಟು. ಪುಣೆ ಜಿಲ್ಹೆ ಶಿರೂರು ತಾಲ್ಲೂಕಿನಲ್ಲಿ ಒಂದು ಕೆಂದೂರು ಇದೆ. ಚಿಂದೂರುಗಳೂ ಹಲವಿವೆ. ಮಹಾರಾಷ್ಟ್ರದಲ್ಲಿ ಚಾಂದ, ಚಾಂದೋರ, ಚಾಂದೋರಿ, ಚಾಂದೋರೆ ಎಂಬ ಊರುಗಳು ೧೫ಕ್ಕೆ ಮಿಗಿಲಾಗಿವೆ. ಖಾನದೇಶದಲ್ಲಿ ಚಾಂದಸರ, ವರ್ಧಾದಲ್ಲಿ ಚಾಂದಾ; ನಾಸಿಕದಲ್ಲಿ 'ಚಾಂದೋರ' ಮಹಾಲ; ಚಾಂದೋರಿ; ಪುಣೆಯಲ್ಲಿ ಚಂದ; ಚಂದಿವಲಿ: ರತ್ನಾಗಿರಿಯಲ್ಲಿ ಚಾಂದೋರ; ಎಂದು ಮುಂತಾದುವು ಇದಕ್ಕೆ ಉದಾಹರಣ. ಮಹಾರಾಷ್ಟ್ರ ಭಾಗದ ಶಿನೋಳಿ, ಶೇಣವಲಿ; ಶೇಣೀ; ಶಿಂಗಿ, ಶಿಂಗೋಲಿ, ಶೇಂದುರಣಿ, ಸಿನ್ನರ; ನಮ್ಮಲ್ಲಿ ಶಿನವಾಡ ಶ್ಯಾನವಾಡ ಎಂಬೀ ಊರುಗಳ ಹೆಸರಿನಲ್ಲಿ ಶಿನ್ ಎಂಬ ಮೂಲರೂಪವೆ ಕಂಡುಬರುತ್ತದೆ ಇಂತಿವೆಲ್ಲವೂ ಶ್ರೀ ದೇವಿಯ ವಿವಿಧ ಹೆಸರಿನ ಊರುಗಳು. ಶಿಂಗಿಯ ನಿಜವಾದ ಅರ್ಥ ತಿಳಿಯದೆ ಹಲವರು ಶೃಂಗಿ ಎಂದು ಅದನ್ನು ತಿದ್ದುತ್ತಾರೆ!

ಶಿನ್ (ಚಿನ್) ದೇವಿ ಶ್ರೀ ದೇವಿಯು ಕೇವಲ ಆರಾಧಕರು ನಮ್ಮ ನಾಡಿನಲ್ಲಿ ಪಾಂಚಾಳರು! ಶಿರಸಂಗಿ (ಅಥವಾ ಶಿಂಗಿ?) ಕಾಳಮ್ಮನ ಪರಮ ಭಕ್ತರು. ಈ ಕಾಳಮ್ಮನೆಂದರೆ ಉಗ್ರಕಾಲಿಯಾಗಿರಲಾರಳು. ಏಕೆಂದರೆ ಅವರಲ್ಲಿ, ಸಿರಸಂಗಿಯಲ್ಲಿ ಹಿಂಸೆಗೆ ಎಡೆಯಿಲ್ಲ, ಪಾಂಚಾಲರು ಕಲಾವಿದರು. ಕಾರಣ ಕಲಾದೇವಿಯ ಉಪಾಸನೆಯಾಗಿರಬೇಕು. ಅವರು ಸುವರ್ಣಕಾರರು. ಆದುದರಿಂದ ಶ್ರೀ ದೇವಿ, ಶಿಂಗಿದೇವಿಯ ರೂಪದಲ್ಲೂ ಅವಳನ್ನು ಕಾಣುತ್ತಿರಬೇಕು.

ಕಂನಾಡಿನಲ್ಲಿ ೧೦–೧೫ ಹರದಾರಿಯೊಳಗಾಗಿ ಒಂದಿಲ್ಲೊಂದು ದೇವಿಯ ಸ್ಥಾನವು ಇದ್ದೇ ಇದೆ. ರಾಜರಾಜೇಶ್ವರಿ, ದುರ್ಗಾಪರಮೇಶ್ವರಿ, ಶಾಂತಾದುರ್ಗಾ, ಚಂಡಿ, ಚಾಮುಂಡಿ, ಚೌಂಡೇಶ್ವರಿ, ಚೆಂಗಳಿಕವ್ವ, ಕಾಲಿ, ಕರೆಮ್ಮ, ಮಾಯವ್ವ, ಮಾರೆಮ್ಮ, ದೇಮವ್ವ, ಮುಂತಾದ ಹೆಸರಿನಲ್ಲಿ ದೇವಿಯು ಜನರಿಂದ ಪೂಜೆಗೊಳ್ಳುತ್ತಿದ್ದಾಳೆ. ಈ ಶಾಕ್ತ ಪಂಥದ ಸಂಬಂಧವು ದಕ್ಷಿಣದಲ್ಲಿ ಕಾಂಚಿಯ ವರೆಗೆ ಹೋಗಿ ಮುಟ್ಟುತ್ತದೆ. ಕಾಂಚಿಯೆಂಬಲ್ಲಿ ಕಾಂಚನ ಅಥವಾ ಕೆನ್ ಎಂಬುದರ ಭಾವವು ಇರಬೇಕು. ಕಾಂಚಿಯು ಶಾಕ್ತರ ಒಂದು ವಿಖ್ಯಾತ ಕೇಂದ್ರ. ಕಂನಾಡಿನೊಳಗಿನ ಹಲವು ಅಮ್ಮನವರ ದೇವಸ್ಥಾನದಲ್ಲಿ ಕಾಂಚಿಯ ನೆನಹು ಈಗಲೂ ಇದೆ. ಕಾಂಚಿಕಾಪರಮೇಶ್ವರಿ ಎಂದು ಕೆಲವೆಡೆಗೆ ನಮ್ಮ ದೇವಿಯರ ಹೆಸರಿದೆ. ಶಿರಸಂಗಿ ಕಾಳಮ್ಮನ ಸುಪ್ರಸಿದ್ಧ ದೇವಸ್ಥಾನದಲ್ಲಿ ಚೈತ್ರಮಾಸದ ವಾರ್ಷಿಕ ಉತ್ಸವವುಂಟು. ಆಗ ಗುಡಿಪಾಡಿವದ ಬೆಳಗಿನ ಜಾವದಲ್ಲಿ ಅರ್ಚಕರು ಬುತ್ತಿಯ ಉಂಡೆಗಳನ್ನು ದೇವಿಯ ಎದುರು ತೂರುತ್ತಾರೆ. ಅವುಗಳಲ್ಲಿ ಒಂದು ಕಾಂಚಿಗೆ ಹೋಗಿ ಬೀಳುವುದೆಂಬ ಭಾವಿಕರ ನಂಬುಗೆಯಿದೆ. ಈ ಉಂಡೆಯು ಕಾಂಚಿಯಲ್ಲಿ ಬಿದ್ದೊಡನೆ ಅಲ್ಲಿಯ ರಥೋತ್ಸವವು ಆರಂಭವಾಗುವುದಂತೆ. ಈ ಸಂಗತಿಗಳಿಂದ ಕಾಂಚಿಯೊಡನಿದ್ದ ಕಂನಾಡವರ ನಿಕಟಸಂಬಂಧವು ಗೊತ್ತಾಗುತ್ತದೆ. ಚಲುಕ್ಯ. ರಾಷ್ಟ್ರಕೂಟರ ಕಣ್ಣು ಯಾವಾಗಲೂ ಕಾಂಚಿಯ ಮೇಲೆಯಿರುತ್ತಿದ್ದಿತೆಂಬ ಐತಿಹಾಸಿಕ ಘಟನೆಗಳನ್ನು ಇದರೊಡನೆ ಅಭ್ಯಾಸ ಮಾಡುವಂತಿದೆ. ಶ್ರೀ ವಿದ್ಯಾರಣ್ಯರು ಕೆಲಕಾಲ ಕಾಂಚಿಯಲ್ಲಿದ್ದರು. ಮಯೂರಶರ್ಮನ ಕತೆಗೂ ಕಾಂಚಿಯಿಂದಲೆ ಆರಂಭ

ವಾಗುತ್ತದೆ. ಕಾಂಚಿಯೊಡನೆ ಇದ್ದ ಕಂನಾಡಿನ ಸಾಂಸ್ಕೃತಿಕ ಸಂಬಂಧವು ಸ್ಪಷ್ಟವಾದಷ್ಟು ಹಳೆಯ ಐತಿಹಾಸಿಕ ಘಟನೆಗಳ ಸ್ಪಷ್ಟೀಕರಣವಾಗಲಿದೆ. ಶೇಡಿಂಬ(ನಿ. ಕಂ.)ದಲ್ಲಿ ದೊರೆತ ಚಲುಕ್ಯತ್ರಿಭುವನಮಲ್ಲನ ಕಾಲದ ಒಂದು ಶಾಸನದಲ್ಲಿ 'ಕಾಂಚೀ ಪುರದ್ವಾರ ಕವಾಟ ಪುಟ ಭೇದನಾಭಿಚಾರ ಹೋಮ ಸಾಧಕರುಂ, ಹೇಮ ಕುಂಡಳ ಜ್ವಾಳಿನೀ ದೇವ್ಯಾಕರ್ಷಣರುಂ' ಎಂದು ಒಬ್ಬ ಶಾಕ್ತನ ವರ್ಣನೆಯಿದೆ. ಕಾಂಚಿಯನ್ನು ಗೆಲ್ಲುವ ಆಸಕ್ತಿಯು ಇದರಲ್ಲಿ ಕಂಡು ಬರುವುದಲ್ಲದೆ ಶಾಕ್ತರನ್ನು ರಾಜರು ಏಕೆ ಪೋಷಿಸುತ್ತಿದ್ದರೆಂಬುದೂ ಈ ಶಾಸನದಿಂದ ಸ್ಪಷ್ಟವಾಗುತ್ತದೆ.

ದೇವಿಗಿರುವ ದೇಮವ್ವ ಎಂಬ ಹೆಸರು ಕಂನಾಡಿನಲ್ಲಿಯೆ ಪ್ರಚಾರ ದಲ್ಲಿ ಬಂದಿರಬೇಕೆಂದು ನನ್ನ ಗ್ರಹಿಕೆ. ದೇವ ಇದರಿಂದಲೆ ದೇಮ ಆಗಿರು ವುದು ಸ್ಪಷ್ಟವಿದ್ದರೂ ಇದು ಯಾವ ವ್ಯಾಕರಣನಿಯಮಕ್ಕನುಸರಿಸಿ ಆಗಿ ದೆಯೊ ತಿಳಿಯದು. ಆ ವ್ಯಾಕರಣ ನಿಯಮವು ನಮ್ಮ ಹಳೆಯ ವೈಯಾ ಕರಣಿಗಳ ಗ್ರಂಥದಲ್ಲಿ ದೊರೆಯದೆ ಹೋದಲ್ಲಿ 'ದೇಮ' ಇದನ್ನು ದೇವ ದಿಂದ ಬಂದಿತೆಂದು ಒಪ್ಪುವದಕ್ಕೂ ಕೆಲರು ಸಂಕೋಚಪಡಬಹುದಾಗಿದೆ. ಅದೇನೆ ಇದ್ದರೂ ಈ ಹೆಸರಿನ ಗಂಡು ದೇವರಿಲ್ಲವಾದರೂ ಹೆಣ್ಣುದೇವತೆ— ಗ್ರಾಮದೇವತೆ ಇದ್ದುದು ನಿಜ. ಗಂಡು ಹೆಣ್ಣುಗಳಿಗೆ ಈ ಹೆಸರನ್ನು ಅಕ್ಕರೆ ಯಿಂದ ಇಡುತ್ತಿದ್ದುದೂ ಕಂಡುಬರುತ್ತದೆ. ವಿಜಯನಗರದ ದೇವರಾಯನ ರಾಣಿ ದೇಮಾಂಬಿಕೆಯೆಂಬವಳೊಬ್ಬಳಿದ್ದಳು (E. K. III MC 121) ೧೨ನೆಯ ಶತಮಾನದಲ್ಲಿ ಮರ್‍ಹಾಟದ ವರೆಗೂ ಈ ಹೆಸರಿದ್ದಿತೆಂದು ಚಕ್ರಧರನ ಲೀಲಾ ಗ್ರಂಥದಿಂದ ಕಂಡುಬರುತ್ತದೆ ಮಹಾನುಭಾವ ಪಂಥದ ಶಿಷ್ಯರಲ್ಲಿ 'ದೇಮಾಯಿ'ಯು ಇದ್ದಳು. ಆದರೆ ದೇಮವ್ವನ ಜಾತ್ರೆ ಮೊದಲಾದುವು ಈಗ ಮರ್‍ಹಾಟದಲ್ಲಿ ಆಗುವುದಿಲ್ಲ. ದೇಮಲಾಪುರ, ದೇಮಲಿಗೆ ನಾಡು, ದೇಮಲವ್ವನ ಹಳ್ಳಿ ಎಂಬೀ ಬಗೆಯ ಹಳ್ಳಿಗಳು ನಮ್ಮ ನಾಡಿನಲ್ಲಿಯೆ ಇವೆ.

ಇಂದು ಶಾಕ್ತರೆನಿಸಿಕೊಳ್ಳಲು ಒಪ್ಪದ ಬ್ರಾಹ್ಮಣರಲ್ಲಿಯೂ ಕೂಡ ಒಂದಿಲ್ಲೊಂದು ದೇವಿಯ ಉಪಾಸನೆಯಿಲ್ಲದ ಮನೆಗಳಿಲ್ಲ. ಪಂಚಮಕಾ ರಾದಿ ಕೃತಿಗಳ ಮೂಲಕ ಶಾಕ್ತಪಂಥಕ್ಕೆ ಸಮಾಜದಲ್ಲಿ ಗೌರವಸ್ಥಾನವು ಇಲ್ಲದಾಗುತ್ತ ಬಂದಿತು. ಆದರೂ ಆ ಭಾಗವನ್ನುಳಿದು ಈಗಲೂ ದೇವಿ ಪೂಜೆ ಸರ್ವಸಮ್ಮತವಾಗಿ ಉಳಿದಿದೆ.

ರೇವಾ ತೀರದಿಂದ ಮೈಸೂರ ವರೆಗೂ ಎಲ್ಲಮ್ಮನ ಭಕ್ತರುಂಟು. ೧೨ನೆಯ ಶತಮಾನದಲ್ಲಿ ಖಾನದೇಶ-ವರ್ಹಾಟದಲ್ಲಿ 'ಎಲ್ಲೂ ಆಯಿ' ಈ ಹೆಸರಿನಿಂದಲೇ ರೇಣುಕೆಯು ಅಲ್ಲಿಯ ತನ್ನ ಭಕ್ತರಿಂದ ಪೂಜೆಗೊಳ್ಳುತ್ತಿದ್ದಳು. ಮರ್ಹಾಟಿಯ ಆದಿ ಕವಿತ್ರಿಯೊಬ್ಬಳ ತಾಯಿ ಹೆಸರು ಎಲ್ಲೂ ಆಯಿಯೆಂದಿದೆ. ಆ ಭಾಗದಲ್ಲಾದ ಮಹಾನುಭಾವ ಪಂಥದ ಸ್ಥಾಪಕ ಚಕ್ರಧರನ ಶಿಷ್ಯರಲ್ಲಿ ಎಲ್ಲಂಭಟ್ಟ ಈ ಹೆಸರಿನವರಿದ್ದಾರೆ. ಶಿಲ್ಪಕಲೆಯ ಆದರ್ಶವೆಂದು ಹೆಸರಾದ 'ಎಲ್ಲೋರಾ' ಎಂಬ ಊರ ನಿಜವಾದ ಹೆಸರು 'ಎಲ್ಲೂರು'! ಎಲ್ಲಮ್ಮನೆಂದರೆ ಎಲ್ಲರ ತಾಯಿ. ಇದು ಭೂದೇವಿಯ ಪೂಜೆಯಾಗಿದೆಯೆಂದು ಶ್ರೀ ಅರಟಾಳ ರುದ್ರಗೌಡರು ಹಿಂದೆ ಬರೆದಿದ್ದಾರೆ ಅದು ನಿಜವಿದೆ. ರಂಡೆಹುಣಿವೆ ಚಳಿಗಾಲದಲ್ಲಿ ಬೆಳೆ ಕೊಯ್ದಾಗ! ಹೊಸ ವರ್ಷದ ಆರಂಭ, ಚೈತ್ರದಲ್ಲಿ ವಸಂತಾಗಮದಲ್ಲಿ ಮುತ್ತೈದೆ ಹುಣ್ಣಿವೆ. ಪರಶುರಾಮನು ತನ್ನ ತಾಯಿಯನ್ನು ಹರಣ ಮಾಡಿದ್ದಕ್ಕೆ ಕ್ರೋಧಾವಿಷ್ಟನಾದನು. ಇದು ಕಾರ್ತವೀರ್ಯನು ತಮ್ಮ ನಾಡು ಸುಲಿದುದಕ್ಕಾಗಿ ಉಂಟಾದ ಸಿಟ್ಟು, ಆತನ ದೇಶಾಭಿಮಾನದ ಸೂಚಕ. ಇದನ್ನು ತಾಯಿ ರೇಣುಕೆಗೂ ಜೋಡಿಸಿ ಕಕಿಕಟ್ಟಿದ್ದಾರೆ. ಧಾರ್ಮಿಕ ರೂಪದಲ್ಲಿರುವ ದೇಶಾಭಿಮಾನದ ಹಳೆಯ ರೀತಿಯಿದು.

ಕಾಳಾಮುಖರ ಪಂಥವೂ ಇಲ್ಲಿ ಬಹಳ ಹಬ್ಬಿದ್ದಿತು. ಆ ಕಾಲದ ಅನೇಕ ವಿದ್ವಾಂಸರು ಪಾಶುಪತ, ಕಾಳಾಮುಖಾದಿ ಪಂಥಗಳಲ್ಲಿ ಇದ್ದರು. ಕಾಶ್ಮಿರಪಂಡಿತ, ಜ್ಞಾನರಾಶಿದೇವ, ರುದ್ರಶಕ್ತಿಜೀಯ, ಮಲೆಯಾಳ ಪಂಡಿತಾದಿ ಹೆಸರುಗಳು ದೊರೆಯುತ್ತವೆ. ಇವರ ಪ್ರಭಾವವು ಜನಸಾಮಾನ್ಯರ ಮೇಲೆ ವಿಶೇಷವಾಗಿತ್ತು. ನಾಥ ಸಂಪ್ರದಾಯವು ಇಲ್ಲಿಯೆ ಹುಟ್ಟಿದುದಲ್ಲವಾದರೂ ಕಂನಾಡಿನಲ್ಲಿ ಅದಕ್ಕೆ ಎಡೆಯು ದೊರೆಯದೆ ಹೋಗಿಲ್ಲ. ಮಂಗಳೂರಿನ ಹತ್ತಿರದ ಕದ್ರೆಯಲ್ಲಿ ಈಗಲೂ ಈ ಪಂಥದ ಒಂದು ಮಠವಿದೆ. ಅಲ್ಲಿಯ ಹಳೆಯ ಶಾಸನಗಳಲ್ಲಿ ಮಂಗಳನಾಥ, ಚಂದ್ರನಾಥ ಹೆಸರಿನವರು ಕಾಣಿಸಿಕೊಳ್ಳುತ್ತಾರೆ. ಗೋರಕ್ಷಕನಾಥನ ನೈವೇದ್ಯಕ್ಕೆ ಕೊಟ್ಟ ತೋಟದ ಉಲ್ಲೇಖವಿದೆ (ಕ್ರಿ. ಶ. ೧೩೮೬). ಬೆಳಗಾವಿಯ ಹತ್ತಿರದ ವೈಜನಾಥವು ಒಂದು ಕಾಲಕ್ಕೆ ನಾಥಪಂಥದ ಒಂದು ಕೇಂದ್ರವಾಗಿತ್ತು. ಸಹ್ಯಪರ್ವತದ

ಗುಂಟ ನಾಥರ ಹಲಕೆಲವು ಎಡೆಗಳು ದೊರೆಯುತ್ತವೆ. ಜೋಗಿಹಳ್ಳಿ, ಜೋಗಿಮಡ್ಡಿಗಳಿವೆ. ಜೋಗಣ್ಣ, ಜೋಗರಸ, ಜೋಗಿನಾಯಕರ ಹಳೆಯ ಶಾಸನಗಳ ಉಲ್ಲೇಖಗಳಿವೆ.

ಹಠಯೋಗ ಪ್ರದೀಪಿಕೆಯೆಂಬ ಗ್ರಂಥದ ಪೀಠಿಕೆಯಲ್ಲಿ ಹೇಳಿದ ಆ ಪಂಥದ ಗುರುಪರಂಪರೆಯಲ್ಲಿ ಶ್ರೀ ಅಲ್ಲಮಪ್ರಭುವಿನ ಹೆಸರು ಬಂದಿದೆ. ಆದುದರಿಂದ ಈತನು ಶೂನ್ಯಸಿಂಹಾಸನಾಧಿಷ್ಠಿತನಾಗಿ ಲಿಂಗವಂತ ಮತದ ಅಧ್ವರ್ಯುವಾಗುವ ಮೊದಲು ನಾಥಪಂಥದಲ್ಲಿಯೂ ಹೆಸರಾದ ಮುಂದಾಳಾಗಿದ್ದನೆಂದು ಕಾಣುತ್ತದೆ. ಅನಿಮಿಷನು ಶ್ರೀ ಪ್ರಭುದೇವರ ಗುರುವಂತೆ. ಈ ಅನಿಮಿಷನೆಂದರೆ ಮತ್ಸ್ಯೇಂದ್ರನಾಥನಾಗಿರಬೇಕೆಂದು ಕೆಲರ ಊಹೆಯಿದೆ. ಮಹಾನುಭಾವ ಪಂಥದ ಚಕ್ರಧರನ ಗುರು ಗುಂಡಮಪ್ರಭುವು ಘೋಡಾಚೂಲಿಯ ಶಿಷ್ಯನಂತೆ. ಹಠಯೋಗ ಪ್ರದೀಪಿಕೆಯಲ್ಲಿ ಅಲ್ಲಮನ ನಂತರ ಘೋಡಾಚೂಲಿಯ ಹೆಸರುಂಟು. ಮಹಾರಾಷ್ಟ್ರದ ಸಂತಪಂಥದ ಅಗ್ರಣಿಯೆನಿಸಿದ ಶ್ರೀ ಜ್ಞಾನೇಶ್ವರನ ಗುರುಪರಂಪರೆಯು ನಾಥಸಂಪ್ರದಾಯದಿಂದಲೆ ದೀಕ್ಷೆಹೊಂದಿದ್ದಾಗಿದೆ. ಆತನು ನಾಥಪಂಥವನ್ನು ತನ್ನಲ್ಲಿ ಅಳವಡಿಸಿಕೊಂಡು ಸಂತಪಂಥದ ಉದ್ಧಾರಕನಾದನು. ಅದೇ ಮೇರೆಗೆ ನಾಥ ಸಂಪ್ರದಾಯದಿಂದ ಸ್ಫೂರ್ತಿಪಡೆದು ಶ್ರೀ ಪ್ರಭುದೇವರೂ ಲಿಂಗವಂತ ಮತದ ಉದ್ಧಾರಕರಾಗಿರುವ ಸಂಭವವಿದೆ. ಜ್ಞಾನೇಶ್ವರಿಯಲ್ಲಿ ಲಿಂಗಾಯತ ಪಂಥದ ಪರಿಭಾಷೆಯನ್ನೂ ತನ್ನ ಮತಪ್ರಾಗನೆಗೆ ಶ್ರೀ ಜ್ಞಾನೇಶ್ವರನು ಬಳಸಿಕೊಂಡಿದ್ದಾನೆ. ಹೀಗೆ ಈ ನಾಡಿನಲ್ಲಿ ನಾಥಪಂಥವು ಸ್ವತಂತ್ರವಾಗಿ ವಿಶೇಷ ಮೆರೆಯಲಿಲ್ಲ. ಬೇರೆ ಪಂಥಗಳಲ್ಲಿ ಹುದುಗಿಕೊಂಡಿತು. ಆದರೂ ಈ ಪಂಥದ ಬಾವಾ, ಬೈರಾಗಿ, ಜೋಗಿಮ-ಹಂತರುಗಳು ನಮ್ಮ ನಾಡಿನಲ್ಲಿ ಇಲ್ಲದಿಲ್ಲ.

ಕರ್ನಾಟಕದ ಉತ್ತರ ಮೇರೆಯಲ್ಲಿ ೧೫ ನೆಯ ಶತಮಾನದ ಸುಮಾರಿಗೆ ವಿಶೇಷ ಪ್ರಚಾರದಲ್ಲಿ ಬಂದ ದತ್ತ ಸಂಪ್ರದಾಯದ ಮೇಲೂ ನಾಥಪಂಥದ ಪರಿಣಾಮವಾವು ಬಹಳವಾಗಿದೆ. ಇದಕ್ಕೆ ಅವಧೂತ ಮಾರ್ಗವೆಂದೂ ಹೇಳುವರು. ಇದು ಮುಖ್ಯವಾಗಿ 'ಯತಿ' ಪಂಥವು. ಯತಿ ಸಂಪ್ರದಾಯವು ವೇದಗಳಿಗೆ ಅಷ್ಟು ಸಮ್ಮತವಲ್ಲವೆಂದು ಈ ಮೊದಲೆ ಸೂಚಿಸಿದೆ.

ಆದರೆ ದತ್ತಸಂಪ್ರದಾಯವು ಯತಿಪಂಥವಾದರೂ ಸನಾತನ ವೇದಾಭಿಮಾನವು ಅದರ ವಿಶೇಷವಾಗಿದೆ. ಹೀಗಿದೊಂದು ಎರಡು ಸಂಸ್ಕೃತಿಗಳ ಕೂಡಲಸಂಗಮ. ಇದರಲ್ಲಿ ಮುಸಲ್ಮಾನ ಧರ್ಮದ ಬಾವಾ–ಫಕೀರ ವೃತ್ತಿಯ ಛಾಯೆಯೂ ಕಾಣಿಸಿಕೊಳ್ಳುವುದು. ಮೈಸೂರ ಸಂಸ್ಥಾನದಲ್ಲಿರುವ ದತ್ತ ಕ್ಷೇತ್ರಕ್ಕೆ ಬಾಬಾ ಬುಡನಗಿರಿ ಎಂಬ ಹೆಸರು ಇದೆ. ದತ್ತ ಸಂಪ್ರದಾಯ ಕ್ಷೇತ್ರಗಳೆಲ್ಲ ಮುಖ್ಯವಾಗಿ ಕಂನಾಡಿನಲ್ಲಿಯೆ ಇವೆ. ವಾಡಿ (ನೃಸಿಂಹ ಸರಸ್ವತಿಗಳ) ಕ್ಷೇತ್ರ, ಗಾಣಿಗಪುರ, ಕುರುಗಡ್ಡೆ ಇವೆಲ್ಲ ಕೃಷ್ಣೆಗುಂಟ ಇವೆ. ವಿಜಾಪುರದ ಆಲ್ಲಿ ಆದಿಲಶಾಹನ ಕಾಲದಲ್ಲಿ ಈ ಸಂಪ್ರದಾಯದ ಒಬ್ಬ ಯತಿಗಳು ಪವಾಡಪುರುಷರೆಂದು ಹೆಸರಾದರು. ಬಾದಶಹನು ಇವರಲ್ಲಿ ಭಕ್ತಿಯನ್ನಿಟ್ಟಿದ್ದನಂತೆ.

ಬೆನಕನಕಟ್ಟಿ, ಗಣೇಶವಾಡಿಗಳು ಗಣಪತಿಯ ಉಪಾಸನೆಯ ಸೂಚಕವಾಗಿವೆ. ಶ್ರೀ ಶಂಕರಾಚಾರ್ಯರು ಎದುರಿಸಿದ ಪಾಶುಪತಾದಿ ಹಲವು ಪಂಥಗಳಲ್ಲಿ ಗಾಣಾಪತ್ಯರ ಹೆಸರೂ ಬರುವುದು. ಶ್ರೀ ಸಿದ್ಧಿವಿನಾಯಕನ ಒಕ್ಕಲು ಕಡಲತೀರದಲ್ಲಿ ಹೆಚ್ಚೆಂದು ತೋರುತ್ತದೆ. ಹಲವು ಹವ್ಯಕರಲ್ಲಿ ಚಿತ್ಪಾವನರಲ್ಲಿ ಗಣಪತಿಯು ಕುಲದೇವತೆಯಾಗಿದೆ. ಟರಾವು (ಮಂಗಳೂರು), ಮಂದಪುರ (ದ. ಕ.), ಇಡಗುಂಜಿ (ಉ. ಕ.), ಪುಳೆ (ಕೊಂಕಣ) ಇಲ್ಲಿಯ ಗಣಪತಿ ದೇವಸ್ಥಾನಗಳು ಪ್ರಸಿದ್ಧವಾಗಿವೆ.

ಭೂತಪಿಶಾಚಾದಿಗಳ ಸಿದ್ಧಿಗೆ ಹಾತೊರೆವ ಸುಡುಗಾಡಸಿದ್ಧರು ಈ ನಾಡಿನಲ್ಲಿ ಇದ್ದರು. ಬಳ್ಳಾರಿ, ಬ್ಯಾತನಾಳ, ಭೂತಸಾಳಗಳು ಭೂತಪೂಜೆಯ ನೆನಪುಕೊಡುತ್ತವೆ. ಕಂನಡ ಜಿಲ್ಹೆಯಲ್ಲಿ, ತುಳುನಾಡಿನಲ್ಲಿ ಭೂತಪೂಜೆ ಇನ್ನೂ ಜೀವಂತ ಸ್ಥಿತಿಯಲ್ಲಿದೆ.

ಯಕ್ಷಪೂಜೆಗೂ ನಮ್ಮಲ್ಲಿ ಸ್ಥಾನವಿದ್ದಿತು. ಜಖಬಾಳ, ಜಕ್ಕಸಾಂದ್ರ, ಜಕ್ಕಲಿ ಮುಂತಾದುವು ಯಕ್ಷರ ಸ್ಮಾರಕಗಳಾಗಿವೆ. ಜೈನರಲ್ಲಿ ಯಕ್ಷಿಣಿಯ ಆರಾಧನೆಯಿದೆ. ಮದುವೆ ಮುಂಜಿಗಳ ಮೊದಲು ಅಥವಾ ಮನೆಯಲ್ಲಿ ಅನಿಷ್ಟವು ಒದಗಬಾರದೆಂದು ಬ್ರಾಹ್ಮಣರ ಮನೆಗಳಲ್ಲಿಯೂ 'ಜಖಿಣಿ' ಆರಾಧನೆ ನಡೆಯುವುದು.

---

# ೧೧. ಸಂಸ್ಕೃತಿ ವಿಚಾರ

(ಮುಂದೆ ಸಾಗಿದ್ದು)

**ಇತಿಹಾಸ ಮತ್ತು ಪುರಾಣ**

ರಾಮಾಯಣ, ಮಹಾಭಾರತಗಳು ಮೂಲದಲ್ಲಿ ಇತಿಹಾಸಗಳಾದರೂ ಅವುಗಳು ನಮ್ಮ ಪಾಲಿಗೆ ಪುರಾಣಗಳಾಗಿವೆ, ಪವಾಡಗಳಿಂದ ಕೂಡಿವೆ. ಕನ್ನಾಡಿನಲ್ಲಿ ರಾಮಾಯಣ, ಮಹಾಭಾರತದ ನೆನಹು ಕೊಡುವ ಸ್ಥಳಗಳು ಎಲ್ಲೆಲ್ಲೂ ತುಂಬಿವೆ. ಹಂಪೆ ಮತ್ತು ಆವನಿ (ಮೈ.) ಇವೆರಡು ರಾಮಾಯಣದ ಕುರುಹುಗಳಿಗಾಗಿ ವಿಶೇಷ ವಿಖ್ಯಾತವಾಗಿವೆ. ಗೋಕರ್ಣ ಮೊದಲಾದ ಇನ್ನೂ ಕೆಲವು ಸ್ಥಳಗಳನ್ನೂ ಇದರೊಡನೆ ಹೇಳಬಹುದು. ಆದರೆ ರಾಮಾಯಣಕ್ಕಿಂತ ಭಾರತದ ನೆನಹು ದೋರುವ ಎಡೆಗಳೆ ಹೆಚ್ಚು. ಯದುಕುರ್ವರ ಪೀಳಿಗೆಯವರ ನಾಡೆಂದು ಇವು ವಿಶೇಷವಾಗಿರುವ ಸಂಭವವಿದೆ.

ರಾಮ ಮತ್ತು ಕೃಷ್ಣರು ನಮ್ಮ ಲೋಕಕ್ಕೆ ಮಾಡಿದ ಉಪಕಾರಗಳನ್ನು ನೆನೆದು ಕೃತಜ್ಞತೆಯಿಂದ ಅವರನ್ನು ದೇವಾಂಶರು, ಏಕೆ ಪ್ರತ್ಯಕ್ಷ ದೇವರೆಂದೇ ಭಜಿಸುವ ವಾಡಿಕೆಯಿದೆ. ರಾಮನು ಪರಕೀಯ ದಾಳಿಯಿಂದ ನಾಡನ್ನು ಉಳಿಸಿದನು. ಕೃಷ್ಣನ ಕಾಲದಲ್ಲಿ ಪರಕೀಯರ ಹೆದರಿಕೆಯಿಲ್ಲದಿದ್ದರೂ ಸ್ವಕೀಯರ ಅನಾಚಾರ, ಕ್ರೂರ ನಡೆವಳಿಗಳನ್ನು ನಿಷೇಧಿಸಿ, ನಿಗ್ರಹಿಸಿ, ನಾಡಿಗೊಂದು ಹಿರಿದಾದ ಸಮ್ಯಕ್ ತತ್ವಜ್ಞಾನವನ್ನು ಬೋಧಿಸಿ ಅದರ ಪುರಸ್ಕರ್ತನಾಗಿ ಅಜನ್ಮ ಹೆಣಗಿದನು. ಇಂತಹ ಅಮೋಘವಾದ ಉಪಕಾರಗಳಿಗಾಗಿ ಕೃತಜ್ಞತೆಯಿಂದ ಬ್ರಾಹ್ಮಣನೂ ಕ್ಷತ್ರಿಯವೀರರನ್ನು ದೇವರಂತೆ ಪೂಜಿಸಹತ್ತಿದ್ದುದು ಕೌತುಕಾಸ್ಪದವಾಗಿದೆ. ವೀರರ ಪೂಜೆ ನಮ್ಮ ನಾಡವರು ಎಂದಿನಿಂದ ಮಾಡುತ್ತಲೆ ಇದ್ದಾರೆ. ಇಂದ್ರಾದಿ ದೇವತೆಗಳ ಸ್ಥಳದಲ್ಲಿ ರಾಮ, ಕೃಷ್ಣರು ಬಂದರು. ಇದು ಸಾಂಸ್ಕೃತಿಕ ಸಮ್ಮಿಲನದ ದೃಷ್ಟಿಯಿಂದ ಅತ್ಯಂತ ಮಹತ್ವದ ಸಂಗತಿಯಾಗಿದೆ.

ವೈದಿಕ ಋಷಿಗಳು ವೇದಗಳ ಮುಖಾಂತರವಾಗಿ ತಮ್ಮ ಕಾಲದ ಕೆಲವೊಂದು ಚರಿತೆಯನ್ನು ಬರೆದಿರುವುದರ ಬಗೆಗೆ ಸಂದೇಹವೆ ಇಲ್ಲ. ಆದರೆ ಅವರ ಆ ನಿವೇದನದ ರೀತಿಯು ಬಹಳ ತೊಡಕಿನದಾಗಿದೆ. ಕವಿಗಳು,

ಮನೀಷಿಗಳು ಬರೆದ ಕತೆಯದು; ಕೇವಲ ಇತಿಹಾಸವಲ್ಲ. ಆದುದರಿಂದ ಅದು ಒಂದು ಕಾವ್ಯ. ಆದುದನ್ನು ಆದಂತೆಯೇ ಹೇಳದೆ ಅದನ್ನು ರೂಪಕದಿಂದ, ಸಂಕೇತದಿಂದ, ತಾತ್ವಿಕಪುಟ್ಟದಿಂದ ಬಗೆಬಗೆಯಾಗಿ ಬರೆದಿರುವರು. ನೆಲದ ಮೇಲಿನ ಸಂಗತಿಯನ್ನು ಹೇಳಹೇಳುತ್ತಲೆ ಮುಗಿಲಿಗೆ ಹಾರುವರು. ಋಗ್ವೇದದೊಳಗಿನ ದಾಶರಾಜ್ಞದ ಯುದ್ಧವರ್ಣನೆ (VII. ೧೮), ಇಂದ್ರನು ತಮ್ಮನ್ನು ಕಾಪಾಡುವನೆಂಬ ಪ್ರಾರ್ಥನೆ (I. ೩೦. ೪) ಮತ್ತು (VII ೧೮ ೬) ಇಂತಹ ಎಡೆಗಳಲ್ಲಿ ಈ ಮಾತು ನಿದರ್ಶನಕ್ಕೆ ಬರುವುದು. ಋಷಿಗಳು ವರ್ಣಿಸುವುದು ಭೂಮಿಯ ಮೇಲಿನ ಸಂಗತಿಗಳನ್ನೊ, ಅಥವಾ ಅದ್ಭುತ ಪವಾಡಗಳನ್ನೊ ಇಲ್ಲವೆ ಒಡಪದಂತಿರುವ ಸತ್ಯವನ್ನೊ ಏನೆಂಬುದೇ ಗೊತ್ತಾಗುವುದು ಕಷ್ಟನಾಗುತ್ತದೆ. ಇವುಗಳ ಹಿನ್ನೆಲೆಯಲ್ಲಿ ಈ ಲೋಕದ ಕೆಲವೊಂದು ಆಗು-ಹೋಗುಗಳು ಇರುವುದಂತೂ ಮನಸಿಗೆ ಹೊಳೆಯುತ್ತಿರುತ್ತದೆ. 'ಬ್ರಾಹ್ಮಣೋಽಸ್ಯ ಮುಖಮಾಸೀತ್' ಎಂಬ ಮಂತ್ರವನ್ನು ನೋಡಿದರೆ ಅದು ಆ ಕಾಲದಲ್ಲಿದ್ದ ಸಮಾಜದೊಳಗಿನ ನಾಲ್ಕು ವರ್ಗಗಳನ್ನು ವರ್ಣಿಸಿದ್ದುದು ಸ್ಪಷ್ಟವಿದೆ. ಆದರೆ ಆ ವರ್ಣನೆಯ ರೀತಿ ಕಾವ್ಯಮಯವೂ ಸಾಂಕೇತಿಕವೂ ಆಗಿರುವುದರಿಂದ ಅದನ್ನು ವಾಸ್ತವ (fact) ವೆಂದು ಸ್ವೀಕರಿಸಲಿಕ್ಕೆ ಹಲವರಿಗೆ ಸಂಕೋಚವೆನಿಸುತ್ತದೆ.

ಇಷ್ಟೆಲ್ಲ ವಿವರವನ್ನು ಹೇಳುವುದರ ಕಾರಣವೆಂದರೆ, ನಮ್ಮ ದೇಶದಲ್ಲಿ ಮುಂದಿನ ಕಾಲದಲ್ಲಿ ಬರೆಯಲಾದ ಇತಿಹಾಸಗಳಲ್ಲಿ ಕೂಡ ಎಲ್ಲರೂ ವೈದಿಕ ಋಷಿಗಳ ಈ ಮಾದರಿಯಲ್ಲಿಯನ್ನೇ ಅನುಸರಿಸಿದುಂಟು. ವಾಲ್ಮೀಕಿಯ ರಾಮಾಯಣ, ವ್ಯಾಸರ ಭಾರತಗಳಂತೂ ಸರಿಯೆ. ಬಸವಪುರಾಣ, ಶಂಕರ ದಿಗ್ವಿಜಯ, ಸುಮಧ್ವವಿಜಯ, ಪ್ರಭುಲಿಂಗ ಲೀಲೆ ಎಲ್ಲವುಗಳ ಬಗೆಯೂ ಒಂದೇ. ಪ್ರತಿಯೊಬ್ಬರೂ ತಮ್ಮ ತಮ್ಮ ಯೋಗ್ಯತೆಯಂತೆ ಹೇಳುವ ರೀತಿಯಲ್ಲಿ ವೈದಿಕ ಋಷಿಗಳ ಕೃತಿಗಳನ್ನು ಅನುಸರಿಸುವ ಪ್ರಯತ್ನಪಟ್ಟಿದ್ದಾರೆ.

ನಮ್ಮ ನಾಡಿನ ಸ್ಥಳಪುರಾಣಗಳಲ್ಲೂ ಇದೇ ಹಾಡು. ಈ ಆಲಂಕಾರಿಕ ರೀತಿಯಲ್ಲಿ ಅಲಂಕಾರವಾವುದು, ವಾಸ್ತವವಾವದೆಂಬುದನ್ನು ಅರಿತುಕೊಳ್ಳುವ ಶಕ್ತಿಯು ನಮ್ಮ ಜನರಲ್ಲಿ ಬರಬರುತ್ತ ಸಂಪೂರ್ಣವಾಗಿ ಲೋಪ

ವಾಯಿತು. ದೇಶದ ತೀರ ಅಧೋಗತಿಗೆ ಇಳಿದ ಲಕ್ಷಣವದು. ರಾಮನಿಗೆ ಮಂಗಗಳು ನೆರವಾದುವು, ಎಂದೊಡನೆ ಜನ, ಅಲ್ಲಿ ಅವನ್ನು ಮಂಗಗಳೆಂದೇ ನಂಬಿಬಿಟ್ಟುದು ಕಂಡು ಬರುತ್ತದೆ! ನಮ್ಮ ಪಾಲಿಗೆ ಭೂತ(ಕಾಲ)ವು ಇಷ್ಟು ವಿಕೃತವಾಯಿತು. ಆದರಿಂದ ನಮ್ಮ ನಾಡಿನ ಜನಗಳಲ್ಲಿ ಹಿಂದಿನ ಇತಿಹಾಸದ ಬಗೆಗೆ ವಿಚಾರದ ಸ್ಪಷ್ಟತೆಯು ಉಳಿಯದೆ ಗೊಂದಲಗೇಡಿತನವು ಹೆಚ್ಚಾಯ್ತು. ಕರ್ನಾಡಿನ ಊರೂರಿಗೂ ಒಂದೊಂದು ಕ್ಷೇತ್ರ, ತೀರ್ಥವಿದೆ. ಅವುಗಳ ವಿಷಯಕ್ಕೆ ನೈಜಸಂಗತಿಗಳು ಮರೆಯಲ್ಲುಳಿದು ಅದರ ಮೇಲಿನ ಪವಾಡ, ಅದ್ಭುತ ರಮ್ಯಕತೆಗಳ ಹೊದಿಕೆಯೆ ಹೆಚ್ಚಾಗಿಬಿಟ್ಟಿದೆ.

ನಮ್ಮ ನಾಡಿನಲ್ಲಿ ಇಂದ್ರನ ನೆನಪುಕೊಡುವ ಹರೀಂದ್ರಾಳ, ಸುರಪುರ, ಅಮರಾವತಿ, ಅಲಕಾಪುರ ಮೊದಲಾದ ಎಡೆಗಳಿವೆ. ದೇವನೂರು ಮೊದಲಾದ ಸಾಮಾನ್ಯವಾದ ದೇವರ ಹೆಸರಿನ ಸ್ಥಳಗಳಂತೂ ಮಿತಿಯಿಲ್ಲ. ಯಕ್ಷರ ಹೆಸರಿನ ಊರುಗಳನ್ನೂ ಹಿಂದೆ ಹೇಳಿದೆ. ಕಿನ್ನರೀಪುರವುಂಟು. ಕಿಂಪುರುಷದ ಹೆಸರೂ ಬರುವುದು (E. K. Cm. ೧೦೩). ಅಪ್ಸರಗೊಂಡವೆಂಬ ಊರೂ ಇದೆ ಗಂಧರ್ವಪುರವಿದೆ.

ನಮ್ಮ ನಾಡಿನಲ್ಲಾಳಿದ ರಾಜರ ನೆನಹುಗೊಡುವ ಎಡೆಗಳು ಸಾಕಷ್ಟಿವೆ. ಆದರೆ ಅವರಲ್ಲಿ ಚಾಲುಕ್ಯರವು ಸರಿಯಾಗಿ ದೊರೆಯುವುದಿಲ್ಲ. ಇವರಿಗೆ ಕುಂತಲಾಧಿಪತಿಗಳೆಂದು ಹೆಸರಿದ್ದಿತು. ಕುಂತಳವೆಂಬುದು ಕ್ರಿಸ್ತಶಕದ ಆರಂಭದಿಂದಲೂ ಕೇಳಬರುತ್ತದೆ. ಚಲುಕ್ಯರಿಂದಲೆ ಆರಂಭವಾದುದಲ್ಲ. ಕುಂತಳವೆಂಬ ಹೆಸರಿನ ಔಚಿತ್ಯವೇನೆಂಬುದರ ಬಗೆಗೆ ಇನ್ನೂ ಚರ್ಚೆಗಳು ಆಗಬೇಕಾಗಿವೆ. ಕುಂತಲವೆಂಬುದು ಕೂಂದಲವೆಂಬುದರ ಸಂಸ್ಕೃತೀಕರಣವೆಂದು ಕಿಟ್ಟೆಲ್ಲರ ಅಭಿಪ್ರಾಯವಿದೆ. ಮಿಾಸಿಪ್ರಿಯರು ನಮ್ಮ ಹಟ್ಟಿಕಾರರು (ಕ. ವೀ. ಕ್ಷ ಪು.). ಇದರಿಂದ ಈ ನಾಡವರಿಗೆ ಕುಂತಲರೆಂಬ ಹೆಸರು ಬಂದಿರಬಹುದೆ? ಅಥವಾ ಕುಂತಲವೆಂದರೆ ಬರ್ಚಿ, ಈಟಿ. ಇದು ಹಟ್ಟಿಕಾರ-ದನಗಾರರ ಕೈಯೊಳಗಿನ ಪ್ರೀತಿಯ ಆಯುಧ. ಈ ಕಾರಣದಿಂದಲೂ ಕುಂತಲರು (ಬರ್ಚಿಧಾರಿಗಳು) ಎಂದು ಹೆಸರು ಬಂದಿರುವ ಸಂಭವವಿದೆ.

ಕದಂಬ ದಶಸಹಸ್ರ ನಾಡಿನ ಹೆಸರು ಬರುವುದು; ಕದಂಬರಿಗೆ ನಾಡು,

ಕದಂಬಗಟ್ಟ, ಕದಂಬಪುರ, ಕದಂಬೂರು, ಕದಂಬಿಹಳ್ಳಿಗಳೆಂಬ ಉಲ್ಲೇಖ ಗಳು ಶಾಸನಗಳಲ್ಲಿ ದೊರೆಯುತ್ತವೆ. ಗಂಗನಾಡು, ಗಂಗವಾಡಿ, ಸಾತ ವಾಹನಿ ಹಾರ, ಸಾತವಾಹನಿ ರಠ, ರಟ್ಟಪಾಡಿ, ಲಟ್ಟಲೂರು ಮುಂ. ಹೊಯಿಸಳನಾಡು, ಹೊಯಿಸಣಕಟ್ಟೆ, ಹೊಯಿಸಳಗಟ್ಟ ಮುಂತಾದುವು ಆಯಾ ರಾಜರ ಕುರುಹುಗಳು. ವಿಜಯನಗರದವರ ಕುರುಹುಗಳು ಇನ್ನೂ ಒಂದು ಬಗೆಯವಾಗಿವೆ ಈ ರಾಜರಿಗೆ ಕರ್ಣಾಟ ಸಿಂಹಾಸನಾಧೀಶ್ವರ ರೆಂದು ಹೇಳುವ ವಾಡಿಕೆಯ ಮೂಲಕ ಇವರು ಆಳುತ್ತಿರುವ ಹೊರಗಿನ ಭಾಗಕ್ಕೂ 'ಕರ್ಣಾಟ'ವೆಂಬ ಹೆಸರು ಬಂತು. ಆರ್ಕಾಟದ ಭಾಗಕ್ಕೆ ಕರ್ಣಾಟವೆಂಬ ಹೆಸರು ಬರಲು ಇದೇ ಕಾರಣ.

ಈ ರಾಜರಲ್ಲಿ ಹಲಕೆಲವು ಅರಸು-ಅರಸಿಯರ ವೈಯಕ್ತಿಕ ಹೆಸರಿನ ಪಟ್ಟಣಗಳು ಉಂಟು. ಇವರು ಕಟ್ಟಿಸಿದ ಬಸದಿ, ಗುಡಿ, ಕೆರೆ ಮೊದ ಲಾದುವುಗಳಿಗೂ ಇವರಿಂದ ಬಂದ ಹೆಸರುಗಳಿವೆ.

ರಕ್ಕಸ-ತಂಗಡಗಿಯಂತಹ ಅದೆಷ್ಟೊ! ಘೋರ ಸಂಗ್ರಾಮಗಳು ಆಗಿ ದ್ದರೂ 'ಕುರುಕ್ಷೇತ್ರ' ದಂತೆ, 'ಪಾಣಿಪತ್ತಿ'ನಂತೆ ರಣಭೂಮಿಯೆಂಬ ಹೆಸರಿ ನಿಂದ ಪ್ರಸಿದ್ಧಿಯನ್ನು ಹೊಂದಿದ ಕಾಳಗದ ಕಣಗಳ ನೆನಹು ವಿಶೇಷವಾಗಿ ಉಳಿದುಕೊಂಡು ಬಂದಿಲ್ಲ, ರಾಜರ, ರಾಯರ ಊರುಗಳು ಅವರ ನಿಯೋಗಿ ಗಳ ಊರುಗಳು ಇವೆ (ಪು೩೧, ೩೨).

## ಸಮಾಜ

ಚಾತುರ್ವರ್ಣಗಳು, ಚತುರಾಶ್ರಮಗಳು ನಮ್ಮ ಸಮಾಜದ ವೈಶಿಷ್ಟ್ಯ ವೆಂದು ಹೇಳಲ್ಪಡುವುದಾದರೂ ಎಂದಾದರೂ ಕೇವಲ ನಾಲ್ಕೇ ವರ್ಣಗಳು ಇದ್ದುವೆಂದು ನಂಬುವುದಕ್ಕೂ ಕಷ್ಟವಾಗಿದೆ. ವೇದದಲ್ಲಿಯೆ ನಿಷಾಧಾದಿ ಹಲವು ಬೇರೆ ಜಾತಿಗಳ ಹೆಸರು ಬರುತ್ತವೆ. ಜಾತಿಗಳು ಎಷ್ಟೇ ಇದ್ದರೂ ಅವನ್ನೆಲ್ಲ ನಾಲ್ಕು ವರ್ಗಗಳಲ್ಲಿ ವಿಂಗಡಿಸಬಹುದೆಂದು ಕೆಲರ ಅಭಿಪ್ರಾಯ ವಿರಬಹುದು. ಹಾಗಾದಲ್ಲಿ ಜಾತಿ ಮತ್ತು ವರ್ಣಗಳನ್ನು ಬೇರೆ ಬೇರೆಂದು ಎಣಿಸಬೇಕಾಗುವುದು. ಗೀತೆಯಲ್ಲಿ ಹೇಳಿದಂತೆ ಗುಣ ಮತ್ತು ಕರ್ಮದಿಂದ ವರ್ಣಗಳನ್ನು ನಿರ್ಧರಿಸುವುದಾದರೆ ಹಾಗೆ ಮಾಡಲು ಅಡ್ಡಿಯಿಲ್ಲ. ಆದರೆ ತಕ್ಕ ಗುಣ ಮತ್ತು ಕರ್ಮದ ಅವಶ್ಯಕತೆಯಿಲ್ಲದೆ ಹುಟ್ಟಿನೊಡನೆಯೆ ಶ್ರೇಷ್ಠ

ಜಾತಿಯವರೆಂದೆನಿಸಿಕೊಳ್ಳುವುದಕ್ಕೆ ಸಿಕ್ಕುವವರು, ಗೀತೆಯ 'ಚಾತುರ್ವರ್ಣ್ಯಂ ಮಯಾಸೃಷ್ಟಂ ಗುಣಕರ್ಮ ವಿಭಾಗಶಃ' ಎಂಬ ವಾಕ್ಯಕ್ಕೆ ಬೇರೆ ಅರ್ಥ ಹಚ್ಚಿದ್ದರೆ ಸೋಜಿಗವಲ್ಲ. ಬ್ರಾಹ್ಮಣನ ಮಗನು ಬ್ರಾಹ್ಮಣ, ರಾಜನ ಮಗನು ರಾಜ, ಗೌಡನ ಮಗನು ಗೌಡನಾಗಿಯೆ ಉಳಿಯಲು ಹಂಬಲಿಸುವುದು ಸ್ವಾಭಾವಿಕವಾಗಿದೆ. ಇದರಿಂದ ವರ್ಣಗಳೂ ಜಾತಿಗಳೇ ಆದುವು.

ಅನೇಕ ಜಾತಿಗಳು ಉದ್ಯೋಗ, ವ್ಯವಸಾಯಗಳಿಂದಲೆ ಹುಟ್ಟಿವೆ. ಮಗನಿಗೆ ತೀರ ಹೊಸವಿದ್ಯೆ ಕಲಿಯುವುದಕ್ಕಿಂತ ತಂದೆಯ ಉದ್ಯೋಗವನ್ನು ನಡಸುವುದು ಹೆಚ್ಚು ಅನುಕೂಲವಾಗಿರುವುದರಿಂದ ಒಂದೊಂದು ಕಸಬೂ ಒಂದೊಂದು ಜಾತಿಯ ಸೊತ್ತಾಯಿತು. ಈ ಕಸಬುಗಳನ್ನು ಬದಲಿಸಲು ಸಾಮಾನ್ಯವಾಗಿ ಸಾಮಾಜಿಕ ವಿರೋಧವು ಕಂಡುಬಂದುದರಿಂದಲೂ, ಅದಕ್ಕೆ ಹಲವೆಡೆಗೆ ರಾಜನ ಬೆಂಬಲವೂ ದೊರಕಿದ್ದರಿಂದಲವೂ ಒಂದೊಂದು ಬಗೆಯವರಲ್ಲಿ ಒಂದು ಹೋರೆಯು ತಲೆತಲಾಂತರಗಳಿಂದ ನಡೆದು ಬಂದುದುಂಟು. ಇಂತಹ ಬೇರೆ ಬೇರೆ ಕಸಬಿನವರು ಮುಖ್ಯರಾಗಿರುವುದರಿಂದ ಹಲವು ಊರುಗಳಿಗೆ ಅವರ ಹೆಸರುಗಳೇ ಬಂದುದನ್ನು ಕಾಣಬಹುದು. ಅಂತಹ ಊರುಗಳು ಆ ಕಸಬಿನವರ ಜಾಣ್ಮೆಗಾಗಿ ಉಂಬಳಿಯಾಗಿ ದೊರೆತುವೂ **ಇರಬಹುದು** (ಪು ೩೨, ೩೩).

ಹಿಂದಿನ ಸಾಮಾಜಿಕ ಜೀವನದಲ್ಲಿ ಗುಂಪುಗೂಡಿ, ತಂಡಗಳಾಗಿ ಬಾಳುವುದು ಅವಶ್ಯಕವೆ ಆಗಿದ್ದಿತು. ಗಣಗಳಾಗಿರುತ್ತಿದ್ದರು. ಇದು ಹಟ್ಟಿಕಾರರ ವೈಶಿಷ್ಟ್ಯ. ಗಣಗಳಲ್ಲಿ ರಾಜಪದ್ಧತಿಯಿದ್ದಿಲ್ಲ. ಒಬ್ಬ ಹಿರಿಯನನ್ನು ಆರಿಸಿಕೊಂಡು ಒಂದು ಕುಟುಂಬಿಯರಂತೆ ಇರುತ್ತಿದ್ದರು. 'ದೈವದವರು,' ಕೂಡಿ ಸಮಾಜವನ್ನು ಆಳುವುದು ಎಂದಿನಿಂದಲೂ ಬಂದ ವಾಡಿಕೆ. ಪುರಾತನಕಾಲದ ಯಾದವರಲ್ಲಿ ಇದೇ ಬಗೆಯಾದ ನಡೆವಳಿಯಿದ್ದುದು ಮಹಾಭಾರತಾದಿಗಳಿಂದ ಗೊತ್ತಾಗುತ್ತದೆ. ವೃಷ್ಣಿಗಳಲ್ಲಿ ರಾಜನಿಲ್ಲ (ಶಾಂತಿ ಪ ೩೭ ೫) ಯದು-ತುರ್ವರಿಗೆ 'ಅರಾಜಭಾಕ್ ರಾಗಿರೆಂದು ಒಂದು ಶಾಪ ಇದ್ದಂತೆ ಹೇಳಿದೆ. ಆದರೆ ವಾಸ್ತವ ಸತ್ಯವನ್ನು ಶಾಪದ ನಿಮಿತ್ತದಿಂದ ಹೇಳಿದಹಾಗಿದೆ ಕಂದಮಿಳ ಭಾಷೆಯಲ್ಲಿ 'ರಾಜ' ಶಬ್ದವಿಲ್ಲವೆಂದು ಕಂಡುಬರುತ್ತಿರುವುದಕ್ಕೂ ಇದೇ ಕಾರಣವಿರಬೇಕು. ಕೃಷ್ಣನು ಯಾದವರ

ಒಂದು ಗುಂಪಿನ ಅಧ್ಯಕ್ಷನಾಗಿದ್ದನು. 'ಹಿಂದೂ ಪೊಲಿಟಿ' ಎಂಬ ಗ್ರಂಥ ದಲ್ಲಿ ಶ್ರೀ ಜಯಸ್ವಾಲರು ಇದನ್ನು ಸವಿಸ್ತಾರವಾಗಿ ಸಾಧಾರವಾಗಿ ಚರ್ಚಿ ಸಿದ್ದಾರೆ (ಪು. ೩೬).

ನಾಡಿಗೆ ಯಾವ ರಾಜರೆ ಒಡೆಯರಾಗಿರಲಿ; ಹಳ್ಳಿಹಳ್ಳಿಗಳಲ್ಲಿ ಈ ಬಗೆಯ ಪ್ರಜಾಪ್ರಭುತ್ವದ ಆಡಳಿತವೆ ಎಂದಿನಿಂದಲೂ ನಮ್ಮಲ್ಲಿ ನಡೆದು ಬಂದಿದೆ ಬ್ರಿಟಿಶರು ಈ ಪದ್ಧತಿಯನ್ನು ಬುದ್ಧಿಪೂರ್ವಕವಾಗಿ ಮುರಿದು ಬಿಟ್ಟರು. ಹಟ್ಟಿಗಳಲ್ಲಿ ಹಟ್ಟಿಕಾರ ಜನದೊಡನೆ ಬೇರೆ ಪಂಗಡಗಳೂ ಜಾತಿ ಮತಗಳೂ ವ್ಯಾಪಾರ ಉದ್ಯೋಗಗಳೂ ಬೆಳೆದುಬಂದಂತೆ ಅವರ ಸಮಿತಿ, ಸಂಘಗಳು ನಿರ್ಮಾಣವಾದುವು. ಅವರೆಲ್ಲರೂ ಪರಸ್ಪರರ ಸಹಕಾರದಿಂದ ತಮ್ಮ ಬಾಳನ್ನು ನಡಿಸಿಕೊಂಡು ಬರುತ್ತಿದ್ದರು. ಶಿಲಾಶಾಸನಗಳಲ್ಲಿ ಈ ಬಗೆಯ ಜೀವನ ಚಿತ್ರಗಳು ಬೇಕಾದಷ್ಟು ದೊರೆಯುತ್ತವೆ. ಊರ ರಕ್ಷಣೆ ಗಾಗಿ, (ಊರ ತುರುಗಳನ್ನು ಹರಿಸಿಕೊಂಡೊಯ್ವರನ್ನು ಎದುರಿಸಿ) ತನ್ನ ಜೀವವನ್ನೂ ಧಾರೆಯೆರೆಯಲು ಅಂಜದ ವೀರರ ಸ್ಮಾರಕಗಳು ಸಿಕ್ಕುತ್ತವೆ. ಇಂತಹ ವೀರ ಬಂಟರ ಹೆಸರಿನ ಊರುಗಳು ಇವೆ; ಊರ 'ಮಹಾಜನರು', ಗ್ರಾಮದ 'ಸಮಸ್ತ ಹಲರು' ಕೂಡಿ ತಮ್ಮೂರ ಆಡಳಿತವನ್ನು ನಡಸು ತ್ತಿದ್ದರು. ಇದರಿಂದ ಪ್ರತಿಯೊಂದು ಹಳ್ಳಿಯಲ್ಲಿ ಒಂದು ಗಣರಾಜ್ಯವು ಆಚರಣೆಯಲ್ಲಿತ್ತು. 'ಗಣ' ಶಬ್ದವು ಸಂಸ್ಕೃತವಲ್ಲವೆಂದೂ ಕಂಡವಿಳ (ದ್ರಾವಿಡ) ವರ್ಗಕ್ಕೆ ಸೇರಿದುದೆಂದೂ ಡಾ. ಸುನೀತಿಕುಮಾರ ಚಟರ್ಜಿ ಯವರ ಅಭಿಪ್ರಾಯವಿದೆ.

## ಕುಟುಂಬ ಪದ್ಧತಿ

ಹಟ್ಟಿಕಾರರಲ್ಲಿ ಹೆಣ್ಣು ದೇವರ ಆರಾಧನೆ ವಿಶೇಷ. ಆರ್ಯರಲ್ಲಿ ದೇವೀ ಪೂಜೆಗೆ ಪ್ರಾಧಾನ್ಯವಿಲ್ಲ. ಕುಟುಂಬ ಪದ್ಧತಿಯಲ್ಲಿಯೂ ಈ ವ್ಯತ್ಯಾಸವು ಕಂಡುಬರುತ್ತದೆ. ಮಾತೃ ಪ್ರಧಾನವಾದ ಕುಟುಂಬ ಪದ್ಧತಿಯು ಹಟ್ಟಿ ಕಾರರದು ಅಳಿಯ ಸಂತಾನದ ಕಟ್ಟು ತುಳುವ ನಾಡವರಲ್ಲಿ ಈಗಲೂ ಉಂಟು. ಮಗಳ ಮಗನೆ ಮನೆಯ ಒಡೆಯನಾಗತಕ್ಕವನು. ಮಗನು ಹೊಂಗಿನವನಾಗುತ್ತಾನೆ. ಅದರಿಂದ ಅಳಿಯ ಮತ್ತು ಮಾವಂದಿರಲ್ಲಿ

ಈರ್ಷೆ-ಅಸೂಯೆಗಳಿಗೆ ಇಂಬುದೊರೆಯುವುದು ಸಹಜ. ಕೃಷ್ಣ ಮತ್ತು ಕಂಸರಲ್ಲಿ ಇದು ಹುಟ್ಟಿಕೊಳ್ಳಲು ಇದುವೆ ಮುಖ್ಯ ಕಾರಣ. ಆದರೆ ಅಳಿಯ ಸಂತಾನದ ಕಟ್ಟನ್ನು ಅರಿಯದವರಿಗೆ ಅವರೊಳಗಿನ ಈ ಹುಟ್ಟು ಹಗೆತನದ ಅರ್ಥ ಆಗದು. ಅಭಿಮನ್ಯುವು ಮುಂದೆ ತನ್ನನ್ನು ಕೊಲ್ಲಬಹುದೆಂಬ ಹೆದರಿಕೆಯಿಂದ ಕೃಷ್ಣನು ಆತನನ್ನು ರಣದಲ್ಲಿಯೆ ಮಡಿಯಗೊಟ್ಟನೆಂದು ಜಾನಪದಗೀತದಲ್ಲಿ ಕೇಳಲು ದೊರೆಯುತ್ತದೆ. ಈ ಕಾರಣದಿಂದ ಯಾದವರು ಆರ್ಯೀಕರಣದಲ್ಲಿ ಆರ್ಯರಂತೆ ಪಿತೃಪ್ರಧಾನ ಕುಟುಂಬ ಪದ್ಧತಿ ಮೊದಲಾದ ನಡೆವಳಿಗಳನ್ನು ಸ್ವೀಕರಿಸಲಾರಂಭಿಸಿದ್ದರೂ ಹಳೆಯ ರೂಢಿಗಳು ಒಮ್ಮೆಲೆ ಹೋಗುವುದಿಲ್ಲ. ತುಳುನಾಡವರಲ್ಲಿ ಅಳಿಯ ಸಂತಾನದ ಕಟ್ಟು ಈಗ ಇದೆ. ಮಡವಳಿಯೊಳಗಿನ 'ಅಳಿಯ', 'ಅತ್ತೆ', 'ಮಾವ', 'ಸೊಸೆ' ಎಂಬ ಮಾತುಗಳು (ಅಕ್ಕನ ಮಗ, ಅಕ್ಕ, ಅಕ್ಕನ ಗಂಡ, ತಮ್ಮನ ಮಗಳು ಇವರಿಗೆ ಇರುವ ಹೆಸರುಗಳು) ಹಾಗೆಯೆ ನಡೆದುಬಂದಿವೆ. ಸಂಸ್ಕೃತದ ಬಂಧುವಾಚಕ ಪದಗಳಲ್ಲಿ ಈ ಬಗೆಯ ವೈವಾಹಿಕ ಸಂಬಂಧವನ್ನು ತೋರಿಸುವ ಪದಗಳು ಇಲ್ಲ. ಅಕ್ಕನ ಮಗನಿಗೆ ಜಾಮಾತೃ (ಅಳಿಯ) ನೆಂದು ಕರೆವ ವಾಡಿಕೆಯಿಲ್ಲ. ಇಷ್ಟೆ ಅಲ್ಲ, ಮಾತುಲ ಕನ್ಯಾವಿವಾಹವನ್ನು ಸ್ಮೃತಿಗಳು ನಿಷೇಧಿಸುತ್ತವೆ. ಆದರೂ ದಕ್ಷಿಣಾಪಥದ ಎಂದರೆ ಹಟ್ಟಿನಾಡಿನ ಬ್ರಾಹ್ಮಣರಲ್ಲಿ ಈ ನಡೆವಳಿ ಸೇರಿಕೊಂಡಿದೆ. ಔತ್ತರೇಯರಲ್ಲಿ ಇದು ಇಲ್ಲ.

ಬ್ರಾಹ್ಮಣರಲ್ಲಿ ಪಿತೃಪ್ರಧಾನ ಕುಟುಂಬ ಪದ್ಧತಿಯು. ಹೆಣ್ಣುಮಕ್ಕಳಿಂದ ವಂಶದ ಹೆಸರು ಹೇಳುವ ವಾಡಿಕೆಯು ಇಲ್ಲ. ಆದರೆ ಅದು ನಮ್ಮನಾಡಿಗರಲ್ಲಿ ಕಂಡುಬರುತ್ತದೆ. ಸಾತವಾಹನರಲ್ಲಿ ಗೋತಮಿಪುತ್ರ, ವಾಸಿಷ್ಠಿಪುತ್ರರಿದ್ದಾರೆ. ಪ್ರೊ. ಕುಂದಣಗಾರರು ತಾವು ಸಂಪಾದಿಸಿದ ಶಾಸನದ ಮುನ್ನುಡಿಯಲ್ಲಿ ಸೂಚಿಸಿರುವಂತೆ ನಮ್ಮಲ್ಲಿ ಹನುಮಕ್ಕನವರ, ಮಾಯಕ್ಕನವರ, ಭಾಯವ್ವನವರ ಎಂದು ಮುಂತಾಗಿ ಕುಟುಂಬದ ಹೆಸರುಗಳು ಬಳಕೆಯಲ್ಲಿವೆ (ಪು. ೨೮). ಮತ್ತು ಮುತ್ತಗೆ (ವಿಜಾಪೂರ ಜಿ.) ಯ ಮಲ್ಲಿಕಾರ್ಜುನ ಗುಡಿಯಲ್ಲಿರುವ ಶಾಸನದಿಂದ ಇಂತಹ ಎರಡು ಉದಾಹರಣಗಳನ್ನೂ ಎತ್ತಿತೋರಿಸಿದ್ದಾರೆ (ಪು. ೫೧, ೫೨). ಈ ಶಾಸನವು

ಕ್ರಿ. ಶ. ೧೧೬೬ ಸುಮಾರಿನದು. ಅದರಲ್ಲಿ ಸಿರಿದೇವಿಯಕ್ಕನ ಮಗ ಬಾಚಯ್ಯನು, ಹೊಂನಿಯಕ್ಕನ ಮಗ ಮಬುದ್ದಯ್ಯನು ಉಲ್ಲೇಖಿತರಾಗಿದ್ದಾರೆ. ಕುರುವರಲ್ಲಿ ಮತ್ತು ಯಾದವರಲ್ಲಿ ಈ ಪದ್ಧತಿಯೆ ರೂಢಿವಾಗಿತ್ತು. ದೇವಕೀನಂದನ ಕೃಷ್ಣ, ಪಾರ್ಥ, ಕೌಂತೇಯ, ಕುಂತಿಭೋಜ ಮೊದಲಾದ ಹೆಸರುಗಳು ಈ ಬಗೆಯುವೆ ಆಗಿವೆ

ಕಂನಾಡಿನಲ್ಲಿರುವ ಬಳಗಡವರಿಂದ ಬಂದ ಹೆಸರಿನ ಊರುಗಳನ್ನು ಅಭ್ಯಾಸ ಮಾಡುವಹಾಗಿದೆ (ಪು. ೨೨). ಗಂಡಸರ ಹೆಸರಿನ ಊರುಗಳಿಗಿಂತಲೂ ಹೆಣ್ಣುಮಕ್ಕಳ ಸಂಬಂಧದುವೆ ಹೆಚ್ಚಿವೆ. ಅಕ್ಕಲಕೋಟೆ, ಅಕ್ಕವಳ್ಳಿ, ಅಕ್ಕೂರು, ಅಕ್ಕತಂಗಿಯರಹಾಳ, ಮಗಳೂರು ಇವೆ ಹೆಚ್ಚು. ವ್ಯಕ್ತಿಯ ಹೆಸರುಗಳಿಂದ ಬಂದ ಊರುಗಳು ಗಂಡಸರುವೆ ಇರುವುದು ಎಲ್ಲ ಪ್ರಾಂತಗಳಲ್ಲಿ ವಾಡಿಕೆ. ಆದರೆ ನಮ್ಮಲ್ಲಿ ಹೆಣ್ಣುಮಕ್ಕಳ ಹೆಸರುಗಳಿರುವ ಊರುಗಳು ಅದೆಷ್ಟೋ ಇವೆ! ಐತಿಹಾಸಿಕ ಮಹತ್ವದ ಸುವಿಖ್ಯಾತ ಹೆಣ್ಣುಮಕ್ಕಳ ಹೆಸರಿನ ಊರುಗಳಿದ್ದರೆ ಸೋಜಿಗಕ್ಕೆ ಕಾರಣವಿದ್ದಿಲ್ಲ. ಸೀಲವ್ವ, ಸಿದ್ದವ್ವ, ದ್ಯಾಮವ್ವ. ಮಾಲವ್ವ, ಮಲ್ಲಕ್ಕನಂತಹ ಸಾಮಾನ್ಯ ಗರತಿಯರ ಹೆಸರಿನ ಹಳ್ಳಿಗಳು ಇಷ್ಟು ಇದ್ದುದು ಬೇರೆ ಪ್ರಾಂತದಲ್ಲಿ ನನ್ನ ಕಣ್ಣಿಗೆ ಬಿದ್ದಿಲ್ಲ. ಆಡಳಿತಕ್ಕಾಗಿ, ತಿಳಿವಿಗಾಗಿ, ದಾನಕ್ಕಾಗಿ, ಪರಾಕ್ರಮಕ್ಕಾಗಿ ಹೆಸರಾಂತ ಹೆಣ್ಣುಮಕ್ಕಳ ಹೆಸರುಗಳು ನಮ್ಮ ಪ್ರಾಂತದ ಇತಿಹಾಸದಲ್ಲಿ ಬಹಿರಂಗವಾಗಿ ಮುಂದೆ ಬಂದಿರುವಷ್ಟು ಬೇರಿನ್ನಾವ ಪ್ರಾಂತದಲ್ಲಿದಲ್ಲೂ ಕಾಣುವುದಿಲ್ಲವೆಂದು ನನ್ನ ತಿಳುವಳಿಕೆಯಾಗಿದೆ.

ಕೊಲ್ಹಾಪೂರ ಸಂಸ್ಥಾನದಲ್ಲಿ ಅತ್ಯಾಳ, ಆಕಸೂರ, ಆಕುರ್ಡೆ, ತಮನಾಕ (ತಮ್ಮನಾಯಕ) ವಾಡಿ, ಕಲನಾಕ (ಕಲ್ಲನಾಯಿಕ) ವಾಡಿ, ಕೂಸೂರು ಎಂಬೂರುಗಳಿವೆ. ಇದು ಮರ್ಹಾಟಿ ಸಂಸ್ಥಾನವೆಂದೆನಿಸಿದರೂ ಬುಡಕಟ್ಟು ಎಲ್ಲವೂ ಕಂನಾಡಿನದೆಂಬುದನ್ನು ಈ ಊರುಗಳೇ ಹೇಳುವುವು. ಇಲ್ಲಿಯೂ ಒಂದು ಕಾನಡೇವಾಡಿಯುಂಟು.

ಖಾನದೇಶದಲ್ಲಿ ನವರಾ, ನವರಿ, ಲೇಕುರವಾಳಿಗಳೆಂಬ (ಗಂಡನೂರು, ಮದುಮಕ್ಕಳ ಊರು, ತಾಯೂರು, ಮಗಳೂರುಗಳು) ಊರು ಇವೆ.

ಬಗಡಿ, ಬಂಕಿಹಾಳ ಎಂಬ ಎರಡು ಊರುಗಳು ಆ ಅಲಂಕಾರದ

ಹೆಸರಿನಿಂದ ಬಂದುವೊ ಎಂಬುದು ನಿಶ್ಚಿತವಾಗಿ ತಿಳಿಯದು. ಬಳೆನಾಡ, ಬಳಗಾನೂರು ಕಂಕಣವಾಡಿಗಳು ಬಳೆಯ ನೆನಪನ್ನು ಕೊಡುತ್ತವೆ. ನಮ್ಮ ನಾಡಿಗರ ಉಡುವು ಮತ್ತು ತೊಡವುಗಳ ಕ್ರಮವಾದ ಇತಿಹಾಸವು ತಿಳಿದರೆ, ಆಹಾರ ವಸ್ತುಗಳಂತೆ ಇದರಲ್ಲಿಯೂ ನಮ್ಮಲ್ಲಾದ ಆಶ್ಚರ್ಯಕರವಾದ ಎಷ್ಟೋ ಮಾರ್ಪಾಟುಗಳು ಗೊತ್ತಾಗುವವು. ಈ ದೃಷ್ಟಿಯಿಂದ ಮಾನಸೋಲ್ಲಾಸನೆಂಬ ಗ್ರಂಥವು ಬಹಳ ಅಭ್ಯಸನೀಯವಾಗಿದೆ. ನತ್ತು ಮತ್ತು ಮೂಗುತಿಗಳು, ಇಂದು ಮಹತ್ವದ ಸೌಭಾಗ್ಯಾಲಂಕಾರಗಳೆಂದು ನಂಬುಗೆಯಾಗಿದೆ. ಆದರೆ ಈ ಅಲಂಕಾರಗಳು ಸುಮಾರು ೧೦ನೆಯ ಶತಮಾನಕ್ಕೆ ಹಿಂದೆ ಇರಲಿಲ್ಲವೆಂದು ಶ್ರೀ ಗೋಡೆಯವರು ಸಪ್ರಮಾಣವಾಗಿ ಸ್ಥಾಪಿಸಿದ್ದಾರೆ ಹಂಪೆಯ ವಿರುಪಾಕ್ಷ ದೇವಾಲಯದಲ್ಲಿ ಬರೆದ ಗಿರಿಜಾಕಲ್ಯಾಣದ ಚಿತ್ರಗಳಲ್ಲಿ ಹೆಣ್ಣುಮಕ್ಕಳ ಮೂಗಿನಲ್ಲಿ ನತ್ತು ಇದೆ. ಆದರೆ ಅಜಂತಾ, ಎಲ್ಲೂರು, ಅಥವಾ ಬಾದಾಮಿಯ ಸ್ತ್ರೀಮೂರ್ತಿ ಚಿತ್ರಗಳಲ್ಲಿ ಇದು ದೊರೆಯದು. ಇದು ಹೊರಗಿನಿಂದ ಬಂದ ಅಲಂಕಾರವು. ಕಿವಿಯ ಓಲೆಗಳು ಮುತ್ತೈದೆತನದ ಮುಖ್ಯ ಚಿಹ್ನವೆಂದು ಹಿಂದೆ ನಂಬುಗೆಯಿದ್ದುದಕ್ಕೆ ಸಾಹಿತ್ಯದಲ್ಲಿ ಆಧಾರಗಳಿವೆ. ಓಲೆಭಾಗ್ಯ, ತನ್ನ ಓಲೆಯನ್ನು ಕಾಯಬೇಕು; ಎಂಬೀ ಬಗೆಯ ಪಡೆನುಡಿಗಳು ಪಂಪ, ಕುಮಾರವ್ಯಾಸದಲ್ಲಿ ಬಂದಿವೆ.

ಸೋನಾರಹಳ್ಳಿ ಮಯಸಾಂದ್ರಗಳು ವಿಶ್ವಕರ್ಮ ವಿದ್ಯಾವಿಶಾರದರ ನೆನಹು ಕೊಡುವವು. ಕಂನಾಡಿನ ಮೇಧಾವಿ ಜನಗಳಲ್ಲಿ ಸೊನ್ನಗಾರರಿಗೆ, ಕಮ್ಮಾರರಿಗೆ, ಉಪ್ಪಾರರಿಗೆ, ಬಡಿಗರಿಗೆ ಅತ್ಯಂತ ಮಹತ್ವದ ಒಂದು ಸ್ಥಾನವಿದೆ. ಆದರೆ ಈ ಜನಕ್ಕೆ ಇತ್ತೀಚಿನ ಕಾಲದಲ್ಲಿ ತಮ್ಮ ಪರಂಪರಾಗತ ವಿದ್ಯೆಯನ್ನು ಉಳಿಸಿಕೊಂಡು, ಬೆಳಸಿಕೊಂಡು ಮುಂದೆ ಬರಲು ಏನೂ ಇಂಬು ದೊರೆಯದೆ ಹೋದುದರಿಂದ ನಮ್ಮ ನಾಡಿಗೆ ಅಪಾರ ಹಾನಿಯಾಗಿದೆ. ಸೂಕ್ಷ್ಮ ಕೆತ್ತನೆಯ ಕೆಲಸದಲ್ಲಿ, ಯಂತ್ರಾದಿಗಳನ್ನು ನಿರ್ಮಿಸುವಲ್ಲಿ ಇವರಿಗಿರುವ ಹುಟ್ಟು ಪ್ರತಿಭೆಯನ್ನು ಕಂಡು ಯಾರಾಗಲಿ ಬೆರಗಾಗುವಂತಿದೆ. ಆದರೆ ಅದಕ್ಕೆ ವಿಶೇಷ ಉತ್ತೇಜನವಿಲ್ಲದೆ ಮೂಲೆಗುಂಪಾಗುತ್ತಿದೆ. ನಮ್ಮ ನಾಡಿನ ಗುಡಿಗೋಪುರಗಳ ಮಯಸೃಷ್ಟಿಯ ನಿರ್ಮಾತೃಗಳು ಇವರೇ ಆಗಿದ್ದಾರೆ.

ಖಾನದೇಶದಲ್ಲಿ ಧೋತ್ರೆ ಎಂಬ ಊರಿದ್ದು ಅದಕ್ಕೂ ಆ ಬಟ್ಟೆಯ

ಹೆಸರಿಗೂ ಏನು ಸಂಬಂಧವೋ ತಿಳಿಯದು. ಧೋತ್ರ ಶಬ್ದವು ಸನ್ನ ತಿಳು ವಳಿಕೆಯಂತೆ ಕುಮಾರವ್ಯಾಸನಲ್ಲಿಯೆ ಮೊದಲು ದೊರೆಯುತ್ತದೆ. ಹರಿಹರನ ರಗಳೆಯ ಗಂಡಸಿನ ವರ್ಣನೆಯಲ್ಲಿ ಅವನು ಶೀರೆಯನ್ನುಟಂತೆ ಹೇಳಿದೆ. 'ಶೀರೆ' ಎಂದರೆ ಚೀರ; ನಾರಿನ ಬಟ್ಟೆ; ಅಥವಾ ತುಂಡು ವಸ್ತ್ರ. ಅಮ್ಮ ಶಬ್ದದಂತೆ ಶೀರೆಯೂ ಸಂಕುಚಿತಾರ್ಥವನ್ನು ತಾಳಿತು. ರನ್ನ ಕವಿಯು ಅಮ್ಮ ಶಬ್ದವನ್ನು ಪುಲ್ಲಿಂಗದಲ್ಲಿ ಬಳಸಿದ್ದಾನೆ. ಅಯ್ಯಮ, ಅಲ್ಲಮಾದಿ ಹೆಸರುಗಳಲ್ಲಿ ಕೊನೆಗೆ ಅಮ್ಮವೇ ಇದೆ. ಇದು ಈಗ ಕೇವಲ ಸ್ತ್ರೀವಾಚಕವಾಗಿದ. ಬಿಗಿದು ಸುತ್ತುವಲ್ಲ ಸೀರೆ ಚೀರವೆ ದಟ್ಟಿಯೆನಿಸುವುದು. 'ಸಡಿಲಾದ ಚಲ್ಲಣ ವನ್ನುಡುವುದು ವಾಡಿಕೆಯಿದ್ದಂತೆ ಪಂಪಭಾರತದಿಂದ ತಿಳಿದು ಬರುತ್ತದೆ. ಕರ್ಣನು ಕಾಳಗಕ್ಕೆ ಹೊರಟಾಗ 'ಪಾಲ್ಗಡಲ ತೆರೆಯ ನೊರೆಯ ದೊರೆಯ ದುಕುಲಾಂಬರದೊಳ್ ಇಂಬಾಗಿ ಚಲ್ಲಣಮಂ ಉಟ್ಟು' ಕೊಂಡಿದ್ದನೆಂದು ಅಲ್ಲಿ ವರ್ಣಿಸಿದೆ.

ಸೀರೆಯ ಹೆಸರಿನ ಊರುಗಳಿಲ್ಲವಾದರೂ ಕೆಲವು ಊರುಗಳನ್ನು ಉಚ್ಚರಿಸಿದೊಡನೆ ಸೀರೆಯನ್ನು ನೆನೆವಂತೆಯೆ ಇದೆ. ಪೈಠಣ, ಇಳಕಲ್ಲು, ಧರ್ಮಾವರಂ ಮುಂ. ಕರ್ನಾಟಕನ ಜಾಡರು, ದೇವಾಂಗದವರೂ ತಮ್ಮ ಕೌಶಲದಿಂದ ಒಂದು ಕಾಲಕ್ಕೆ ಬಹಳ ಖ್ಯಾತಿಯನ್ನು ಪಡೆದಿದ್ದರು. ಈ ನಾಡಿನ ಸಂಪದಭಿವೃದ್ಧಿಯನ್ನು ಮಾಡಿದ್ದರು. ಪೈಠಣದಿಂದ ಇವರು ಗುಳೆಯೆದ್ದು ಬಾದಾಮಿ ಸೀಮೆಗೆ ಒಮ್ಮೆ ಬಂದು ನೆಲಸಿದರೆಂದು ನನ್ನ ತರ್ಕವಿದೆ. ಗುಳೆದಗುಡ್ಡ, ಇಳಕಲ್ಲುಗಳು ಈ ಭಾಗದ ದೇವಾಂಗ, ಜಾಡರ ನೆಲೆವೀಡು. ಇವರ ಕುಲದೈವತ ಬನದದೇವಿಯ ಕ್ಷೇತ್ರವೂ ಹತ್ತಿರದಲ್ಲಿಯೇ ಇದೆ

## ಹಿಂದುತ್ವದ ಉದಯ

ನಾಡಿನಲ್ಲಿ ಹಲವು ಧಾರ್ಮಿಕ ರಾಜಕೀಯ ವಿಚಾರ ಪ್ರವಾಹಗಳು ಬಂದುವು; ಹೋದುವು. ಅವುಗಳಿಂದ ನಮ್ಮ ಸಾಂಸ್ಕೃತಿಕ ಜೀವನದ ಮೇಲಾದ ಪರಿಣಾಮಗಳು ಬಹಳ ಮಹತ್ವದುವುಗಳಾಗಿವೆ. ವೈದಿಕ, ಬೌದ್ಧ, ಜೈನ, ವೀರಶೈವಾದಿ ಅಭಿಮಾನದ ಹೋರಾಟದ ಹಿಂದಿನ ಮಾತು ಮುಸಲ್ಮಾನರ ದಾಳಿಯಿಂದ ತಗ್ಗಿತು; ಮೈಮೇಲೆ ನುಗ್ಗಿ ಬರುತ್ತಿರುವ ಪರ ಪರಧರ್ಮೀಯ ಪುಂಡರನ್ನು ತಡೆದು ಹಿಡಿಯುವದಕ್ಕಾಗಿ ತಾವೆಲ್ಲ ಒಂದು ಗೂಡುವ ಅವಶ್ಯಕತೆಯೆನಿಸಿತು. ವಿಜಯನಗರದ ರಾಜರು 'ಹಿಂದೂರಾಯ

ಸುರತ್ರಾಣ' ಎಂಬೀ ಬಿರುದನ್ನು ಧರಿಸಿದರು. 'ಹಿಂದೂ' ಎಂಬ ಸಮ್ಯಗರ್ಥದ ಪದವು ರಾಜಮಾನ್ಯತೆಯನ್ನು ಪಡೆದು ಮುಂದೆ ಬಂದುದು ಕಂನಾನಲ್ಲಿಯೇ ಮೊದಲು. ಹಿಂದಪೂರ ಎಂಬ ಹೆಸರಿನ ಊರು ಇಂತಹ ಒಂದು ಭಾವನೆಯ ದ್ಯೋತಕವೇ ಆಗಿದೆ.

## ವಿದ್ದೆಗಳು

ಅಗ್ರಹಾರಗಳಿಗೆ ಹೆಸರಾದ ನಾಡು; ಇದು ವಿದ್ಯೆಗೆ ಆಗರವಾಗಿದ್ದಿತೆನ್ನಲು ಅಡ್ಡಿಯಿಲ್ಲ. ಬಿಜ್ಜಲವಾಡಿ, ಬಿಜ್ಜಲವೀಡು, ಸರಸ್ವತಿಪುರ, ಬೊಮ್ಮಸರಸಿಪುರ ಮುಂತಾದುವು ವಿದ್ಯೆಯ ಬಗೆಗೆ ಇರುವ ನಮ್ಮ ನಾಡಿಗರ ಆಸ್ಥೆಯನ್ನೆ ತೋರಿಸುತ್ತವೆ. ಕೊಲ್ಲೂರ (ದ.'ಕ.) ಕೋಲ್ಹಾಪುರವೆಂದು ಅಲ್ಲಿಯ ಸ್ಥಳಪುರಾಣದಲ್ಲಿ ವರ್ಣಿಸಲ್ಪಟ್ಟಿದೆ. ಆದರೆ ಅಲ್ಲಿಯ ದೇವಿಯ ಹೆಸರು ಮಾತ್ರ **ಮೂಕಾಂಬಿ**. ದೇವಿ ಮೂಕಾಂಬಿಯಾದರೂ ಈ ಅಮ್ಮನವರ ಉಪಾಸನೆಯಿಂದ ಸರಸ್ವತಿಯ ವರಪ್ರಸಾದವು ಸಿಕ್ಕುವುದೆಂದು ಅಲ್ಲಿ ನಂಬುಗೆಯಿದೆ.

ಕಂನಾಡಿನ ಜನಸಾಮಾನ್ಯರಲ್ಲಿ ದಾನಬುದ್ಧಿಯು ಎಂದಿನಿಂದಲೂ ಅತಿಶಯವಾಗಿದೆ. ಜ್ಞಾನಪ್ರಸಾರಕ್ಕಾಗಿ ಉದಾರಬುದ್ಧಿಯಿಂದಿತ್ತ ಕೊಡುಗೆಗಳನ್ನು ವರ್ಣಿಸುವ ಶಾಸನಗಳು ಸಾವಿರಾರು ಉಂಟು. 'ಕವಿ, ಕಥಕ, ಗಾಯಕ, ವಾದಕ, ನಗ್ನ, ಭಗ್ನ, ನಟ, ಭಟ, ಮಾಗಧಾನಾಥ, ಶಿಷ್ಟೋಪಿಷ್ಟ ಸಭಿಲಕ್ಷಿತಾರ್ಥದಾನ ವಿನೋದೆಯರಾದ 'ದಾನಚಿಂತಾಮಣಿ'ಗಳೆಂದು ಖ್ಯಾತಿವೆತ್ತ ಹೆಣ್ಣುಮಕ್ಕಳು ಇಂದಿಗೂ ವಂದ್ಯರೂ, ಅನುಕರಣೀಯರೂ ಆಗಿದ್ದಾರೆ. 'ಯತೀನಾಂ ವಿದ್ಯಾರ್ಥಿನಾಂ ಚ ಸತ್ರಂ'ಗಳನ್ನು ನಡಸಿದ್ದುಂಟು. 'ವಂಶಿಗೆ, ಪಾಡುವರ್ಗೆ, ಪಾತ್ರವೆರಡಕಂ, ಭೋಗದ ಸೂಳೆಯರ್, ಮಾಲೆಗಾರಂ, ದಂಡೆಗಾರಂ' ಮೊದಲಾದ ಕಲಾವಂತರಿಗೆ ಕೊಟ್ಟ ಭೂಮಿಸೀಮೆಗಳ ವರ್ಣನೆಗಳು ಶಾಸನಗಳಲ್ಲಿ ಬರುತ್ತವೆ. ಧಾರವಾಡದ ಹತ್ತಿರದ ಮುಗು(ಂ)ದದ ಶಾಸನದಲ್ಲಿ (ಕ್ರಿ. ಶ ೧೦೪೫) ಒಂದು ನಾಟ್ಯಶಾಲೆ ಕಟ್ಟಿಸಿದ್ದಾಗಿ ಹೇಳಿದೆ. ಮಹಾಸಾಮಂತ ಮಾರ್ತಂಡಯ್ಯನು ಸಮ್ಯಕ್ತ್ವ ರತ್ನಾಕರ ಚೈತ್ಯಾಲಯವನ್ನೂ ಅದಕ್ಕೊಂದು ನಾಟಕಶಾಲೆಯನ್ನೂ ಕಟ್ಟಿಸಿದನು.

ಹಿಂದೆ ನಮ್ಮಲ್ಲಿ ಯಾವಯಾವ ವಿಷಯಗಳ ಶಿಕ್ಷಣವು ಸಾಗುತ್ತಿದ್ದಿತೆಂಬುಕ್ಕೆ ಪಂಪಭಾರತಾದಿ ಗ್ರಂಥಗಳಿಂದಲೂ ಶಾಸನಗಳ ಉಲ್ಲೇಖಗಳಿಂದಲೂ ಬಹುಮಟ್ಟಿಗೆ ಗೊತ್ತಾಗುವುದು. ಕಾವ್ಯಾದಿ ಸಾಹಿತ್ಯ, ನಾಟಕ, ಧರ್ಮಶಾಸ್ತ್ರ, ವೇದವೇದಾಂಗ, ದರ್ಶನಗಳು, ಭರತಪ್ರಣೀತ ನೃತ್ಯ, ನಾರದಾದಿಪ್ರಣೀತ ಗಾಂಧರ್ವವಿದ್ಯೆ, ಗಜಾಗಮ, ಚಿತ್ರಕರ್ಮ, ಗೃಹಗಣಿತ, ರತ್ನಪರೀಕ್ಷೆ, ದಾರುಕರ್ಮ (ಮರದ ಕೆತ್ತನೆಯ ಕೆಲಸ), ವಾಸ್ತುವಿದ್ಯೆ, ಚಾಪ, ಚಕ್ರ, ಪರಶು, ಕೃಪಾಣ, ತೋಮರ, ಮುಸಲ, ಮುಸುಂಡಿ, ಭಿಂಡಿವಾಳ, ಮುದ್ಗರ ಗದಾದಿ ವಿವಿಧಾಯುಧಂಗಳ ಜ್ಞಾನ, ಆಗಮ, ಪುರಾಣಾದಿ ಮತಗ್ರಂಥಗಳ ಪರಿಚಯ ಮುಂತಾದ ವಿಷಯಗಳನ್ನು ಬೇರೆ ಬೇರೆ ಪಾಠಶಾಲೆಗಳಲ್ಲಿ ಕಲಿಸುತ್ತಿದ್ದರು.

ಸಂಸ್ಕೃತ ಭಾಷೆ ಮತ್ತು ಸಾಹಿತ್ಯಕ್ಕೆ ತುಂಬಾ ಉತ್ತೇಜನವಿದ್ದಿತು. ರಾಜರು ವಿದ್ವಾಂಸರನ್ನು ಬರಮಾಡಿಕೊಂಡು ಆಶ್ರಯಕೊಡುತ್ತಿದ್ದರಲ್ಲದೆ ಹಲವರು ಸಂಸ್ಕೃತದಲ್ಲಿ ಗ್ರಂಥರಚನೆಯನ್ನೂ ಮಾಡಿರುವರು. 'ಕರ್ಣಾಟರಾಜಪ್ರಿಯೆ'ಯಾದ ವಿಜಯಾಂಕಾ, ಮತ್ತು ಅಕ್ಕದೇವಿಯರನ್ನು ಅಭಿನವ ಸರಸ್ವತಿ ಎಂದು ಹೊಗಳಿದುದು ಕಂಡುಬರುತ್ತದೆ. ಸಂಸ್ಕೃತ ಭಾಷೆ ಮತ್ತು ಸಾಹಿತ್ಯಕ್ಕೆ ಕಂನಾಡು ಮಾಡಿದ ಸಹಾಯವನ್ನು ಕುರಿತು ಒಂದು ಸ್ವತಂತ್ರ ಗ್ರಂಥವೆ ಆಗುವಹಾಗಿದೆ. ವೇದಕ್ಕೆ ಭಾಷ್ಯ ಬರೆದ ಶ್ರೇಯಸ್ಸು ಇರುವ ಪ್ರಾಂತಗಳೆ ಕಡಿಮೆ ಭಾರತದಲ್ಲಿ. (ಚೋಳ ದೇಶವನ್ನು ಬಿಟ್ಟರೆ) ಇಬ್ಬರು ಭಾಷ್ಯಕಾರರಿಗೆ ಜನ್ಮಕೊಟ್ಟ ಭಾಗ್ಯವು ಕಂನಾಡಿನದಾಗಿದೆ ಕರ್ಣಾಟ ಸಿಂಹಾಸನಾಧೀಶ್ವರನಾದ ಬುಕ್ಕರಾಯನ ಆಸ್ಥಾನದಲ್ಲಿ ಮಂತ್ರಿಯಾಗಿದ್ದ ಸಾಯಣಾಚಾರ್ಯರು, ಮತ್ತು ಬನವಾಸಿ ಪಟ್ಟಣದ ಉದ್ಗೀಥಾಚಾರ್ಯರು ಇವರಲ್ಲಿ ಮೊದಲನೆಯವರ ಹೆಸರನ್ನು ಮಾತ್ರ ಬಹುಜನರು ಬಲ್ಲರು. ಸಾಯಣರ ಹೆಸರಿನ ಊರುಗಳೂ ಉಂಟು. ಸಾಯಣ-ಮಾಧವರು ತಮ್ಮ ಕಾಲಕ್ಕೆ ತಿಳಿದ ಜ್ಞಾನಶಾಖೆಯ ಎಲ್ಲ ವಿಷಯಗಳ ಮೇಲೂ ಒಳ್ಳೊಳ್ಳೆಯ ಗ್ರಂಥಗಳನ್ನು ಬರೆಯಿಸಿ ಭಾರತೀಯ ಸಂಸ್ಕೃತಿಯ ಪುನರುಜ್ಜೀವನ ಮಾಡಿದರು. ಕಂನಾಡು ಸಂಸ್ಕೃತಕ್ಕೆ ಮಾಡಿದ ಈ ಅಮೋಘ ಸೇವೆಯನ್ನು, ಭಾರತವು ಎಂದೂ ಮರೆಯಲಾರದು. ಅವರು ಬರೆದುದು

ಅದೊಂದು ಭಾರತೀಯ ಜ್ಞಾನಕೋಶವೇ ಸರಿ ಇಂತಹ ಜ್ಞಾನಕೋಶದ ಸಂಪಾದಕರಿಗೆ ಒಬ್ಬರಿಗೆ ವಿದ್ಯಾರಣ್ಯರೆಂದು ಹೆಸರು ಬಂದಿದ್ದು ಉಚಿತವಾಗಿದೆ. 'ಸರ್ವಜ್ಞಃ ಸ ಹಿ ಮಾಧವಃ' ಎಂಬ ಅವರ ವಿಷಯದ ಧನ್ಯೋದ್ಗಾರವು ಸಾರ್ಥವೇ ಸರಿ.

ಆಧುನಿಕ ವಿಶ್ವಕೋಶ ಅಥವಾ ಜ್ಞಾನಕೋಶವೆಂಬುದಕ್ಕೆ 'ಅಭಿಲಷಿತಾರ್ಥ ಚಿಂತಾಮಣಿ' ಎಂದು ಕಂನಾಡವರಿಟ್ಟ ಹೆಸರಾಗಿದೆ. ವಿದ್ಯಾರಣ್ಯರಿಗಿಂತಲೂ ಮೊದಲು ಕಲ್ಯಾಣ ಚಲುಕ್ಯ ಚಕ್ರವರ್ತಿ ೩ನೆಯ ಸೋಮೇಶ್ವರನು ಇಂತಹ ವಿಶ್ವಕೋಶವನ್ನೊಂದನ್ನು ಸಿದ್ಧಪಡಿಸಿದ್ದಾನೆ. ಇದೂ ಸಂಸ್ಕೃತದಲ್ಲಿಯೆ. 'ಮಾನಸೋಲ್ಲಾಸ' ವೆಂಬ ಇನ್ನೊಂದು ಹೆಸರೂ ಅದಕ್ಕುಂಟು. ಹಿಂದೆ ಸೂಚಿಸಿದಂತೆ ಆ ಕಾಲದ ಸಾಂಸ್ಕೃತಿಕ ಇತಿಹಾಸದ ಮಾಹಿತಿಯ ಕಣಿಯೆ ಅದು. ಅದು ಇನ್ನೂ ಸಂಪೂರ್ಣವಾಗಿ ಅಚ್ಚಾಗದಿರುವುದು ದುರ್ದೈವ. ಈ ಒಗೆಯಾದ ಜ್ಞಾನಕೋಶವನ್ನು ರಚಿಸಿದ್ದು, ಅಷ್ಟು ಹಿಂದಿನ ಕಾಲದಲ್ಲಿ ಕೌತುಕಾಶ್ಚರ್ಯವನ್ನುಂಟುಮಾಡುತ್ತದೆ ಭರತಖಂಡದಲ್ಲಿಯೆ ಇದು ಅಪೂರ್ವವಾದ ಗ್ರಂಥ.

ಇದೇ ಬಗೆಯಾಗಿ ಇನ್ನೂ ಕೆಲವು ಜ್ಞಾನಕೋಶಗಳು ಮುಂದಿನ ಕಾಲದಲ್ಲಿಯೂ ರಚಿತವಾಗಿವೆ. ಕೆಳದಿಯ ಅರಸನಾದ ಬಸವರಾಜೇಂದ್ರನಿಂದ ಬರೆಯಲ್ಪಟ್ಟ 'ಶಿವತತ್ವ ರತ್ನಾಕರ'ವು ಇಂತಹ ಒಂದು ಜ್ಞಾನಸಂಗ್ರಹದ ಗ್ರಂಥವಾಗಿದೆ. (ಇವನು ಕ್ರಿ. ಶ. ೧೬೯೮ ರಿಂದ ೧೭೧೪ ವರೆಗೆ ಆಳಿದನು.) 'ವೇದಾಗಮಾಂತರ್ಗತ ವಿವಿಧ ವಿದ್ಯಾತಂತ್ರಸಾರಭೂತ ಶಿವತತ್ವರತ್ನಾಕರ'ವೆಂದು ಇದನ್ನು ಬಣ್ಣಿಸಿದ್ದಾಗಿದೆ

[ಶಿವತತ್ವ ರತ್ನಾಕರದಕಿಂತಲೂ ಮೊದಲು ಇದೇ ಒಗೆಯ ಇನ್ನೂ ಒಂದು ಜ್ಞಾನಸಿಂಧುವಿನಂತಹ ಗ್ರಂಥವು ಕಂನಾಡಿನಲ್ಲಿ ಆಗಿದೆ. ಆದರೆ ಅದು ಕಂನುಡಿಯಲ್ಲಿದೆ. ಇದನ್ನು ಬರೆದವರು ನಿಜಗುಣ ಶಿವಯೋಗಿಗಳು (ಸು. ಕ್ರಿ ಶ. ೧೫೦೦). ಪೂರ್ವಾಶ್ರಮದಲ್ಲಿ ಇವರೂ ಒಂದು ಸಣ್ಣ ನಾಡಿಗೆ ಅರಸರಾಗಿದ್ದರು. ಇವರು ತಮ್ಮ ಈ ಬಗೆಯ ಗ್ರಂಥಕ್ಕೆ 'ವಿವೇಕ ಚಿಂತಾಮಣಿ' ಎಂದು ಹೆಸರನ್ನಿಟ್ಟಿದ್ದಾರೆ. 'ಚಿಂತಾಮಣಿ' ಎಂದರೆ ಬಯಸಿದ್ದನ್ನು—ಚಿಂತಿಸಿದುದನ್ನು ಕೊಡುವ ರತ್ನವು. ಯಾವ ವಿಷಯವು

ಬೇಕೊ ಆ ವಿಷಯದ ಜ್ಞಾನವನ್ನೂ 'ಅಭಿಲಷಿತ ಅರ್ಥ ಚಿಂತಾಮಣಿ' ಯಲ್ಲಿಯೂ 'ವಿವೇಕ ಚಿಂತಾಮಣಿ' ಯಲ್ಲಿಯೂ ಪಡೆದುಕೊಳ್ಳಬಹುದು. ಅವರು ಅಂದು ತಮಗೆ ನಿಲುಕಿದಷ್ಟನ್ನೆಲ್ಲ ಕಲೆಹಾಕಿ ಮುಂದಿನ ಪೀಳಿಗೆಗೆ ಜ್ಞಾನನಿಧಿಯನ್ನು ಕೊಟ್ಟಿದ್ದಾರೆ. ಅದನ್ನು ಕಾಲಕಾಲಕ್ಕೆ ಮತ್ತೆ ಹೆಚ್ಚು ಗಳಿಸಿ ಬೆಳೆಸಿಕೊಳ್ಳುವುದು ಕಂನಾಡವರ ಕರ್ತವ್ಯವಾಗಿತ್ತು. ಶ್ರೀ ನಿಜಗುಣ ಶಿವಯೋಗಿಗಳು ವಿವೇಕ ಚಿಂತಾಮಣಿಯಲ್ಲಿ ೭೬೫ ವಿಷಯಗಳನ್ನು ಕುರಿತು ವಿವೇಚಿಸಿದ್ದಾರೆ.]

ವ್ಯಾಕರಣ, ಛಂದಸ್ಸು, ತಂತ್ರ, ಆಗಮ, ವೇದಾಂತ, ಗಣಿತ ಸಂಗೀತ ಮೊದಲಾದ ಶಾಸ್ತ್ರಗಳ ಮೇಲಣ ಸಣ್ಣದೊಡ್ಡ ಗ್ರಂಥ, ಟೀಕೆ ಮೊದಲಾದುವು ಸಂಸ್ಕೃತದಲ್ಲಿ ಬರೆಯಲ್ಪಟ್ಟಿವೆ. ಆದರೆ ಜ್ಞಾನಕೋಶಗಳ ವೈಶಿಷ್ಟ್ಯವು ಭಾರತೀಯ ಸಾಹಿತ್ಯದ ಇತಿಹಾಸದಲ್ಲಿ ಕಂನಾಡವರ ಪಡೆ-ಮಾತೆಂದು ಹೇಳಬಹುದಾಗಿದೆ.

ಪ್ರಾಕೃತದ ವಿಶೇಷ ಅಭ್ಯಾಸದ ಶ್ರೇಯಸ್ಸು ಜೈನರದಾಗಿದೆ. ರಾಷ್ಟ್ರಕೂಟ ರಾಜರ ಆಶ್ರಯದಲ್ಲಿ ಅನೇಕ ಜೈನ ಮಹಾಗ್ರಂಥಗಳು ನಿರ್ಮಿತವಾದುವು. ಪುಷ್ಪದಂತ ಕೃತ ಮಹಾಪುರಾಣವು ಪ್ರಾಕೃತ (ಅಪಭ್ರಂಶ) ಕಾವ್ಯಗಳಲ್ಲಿ ಮಹತ್ವದ್ದಾಗಿದೆ. ಇದು ರಾಷ್ಟ್ರಕೂಟ ೩ನೆಯ ಕೃಷ್ಣನ ಕಾಲದಲ್ಲಿ ರಚಿತವಾಯಿತು. ಇದರಲ್ಲಿ ನೇಸರ, ಹಟ್ಟಿ, ತುಪ್ಪ ಮೊದಲಾದ ಕಂನುಡಿಯ ಮಾತುಗಳು ಸೇರಿವೆ.

ಹೆಚ್ಚಾಗಿ ಇದೆಲ್ಲವೂ ಆಚಾರ್ಯ, ಭಟ್ಟ, ಭಟಾರಕ, ಜಂಗಮಾದಿ ಅಧ್ಯಯನವೆ ಮುಖ್ಯವಾದ ವ್ಯವಸಾಯದವರ ಕಾರ್ಯವಾಯಿತು.

**ರಸಿಕತೆ**

ಕವಿರಾಜಮಾರ್ಗದಲ್ಲಿ 'ನಾಡವರ' ರಸಿಕತೆಯು ಮತ್ತು ಅವರ ಸ್ವಭಾವದ ವಾಸ್ತವವರ್ಣನೆಯು ಬಹಳ ಚೆನ್ನಾಗಿಯೆ ಇದೆ.

ಸುಭಟರ್ಕಳ್ ಕವಿಗಳ್, ಸು-
ಪ್ರಭುಗಳ್ ಚೆಲ್ವರ್ಕಳ್ ಅಭಿಜನರ್ಕಳ್ ಗುಣಿಗಳ್
ಅಭಿಮಾನಿಗಳ್ ಅತ್ಯುಗ್ರರ್, ।
ಗಭೀರ ಚಿತ್ತರ್ ವಿವೇಕಿಗಳ್ ನಾಡವರ್ಗಳ್ ॥ ೨೮ ॥

ಈ ಪದ್ಯದೊಳಗಿನ ವಿಶೇಷಣಗಳಲ್ಲಿ 'ಅಭಿನಜನರ್ಕಳ್' ಎಂದು ನಾಡವರನ್ನು ವರ್ಣಿಸುವ ಪದವು ವಿಶೇಷ ಮಹತ್ವದ್ದಾಗಿದೆ. ಅಭಿಜನ ಶಬ್ದದಿಂದ ಇವರು ಕುಲೀನರೆಂಬ ಮಾತನ್ನು ಸೂಚಿಸಿದ್ದಲ್ಲದೆ ಇವರು ಈ ನಾಡಿನವರೇ (ಹೊರಗಿನವರಲ್ಲ) ಎಂಬುದನ್ನೂ ಧ್ವನಿತಮಾಡಿದ್ದಾಗಿದೆ. ಆದುದರಿಂದ ಹಟ್ಟಿನಾಡಿನ ಮೊದಲಿಗರು ಇವರೆಂಬುದು ಮತ್ತೆ ಇಲ್ಲಿ ಸ್ಪಷ್ಟವಾಗುತ್ತದೆ.

ಚೆಲುವರಾದ ಈ ಜನ, ಗುಣಿಗಳೂ ರಸಿಕರೂ ಆಗಿದ್ದುದು ಸ್ವಾಭಾವಿಕವೆ ಆಗಿದೆ. ಆದುದರಿಂದಲೆ ಕವಿಗಳಿಂದೂ ವರ್ಣಿಸಿದ್ದಾಗಿದೆ.

ಬ್ರಾಹ್ಮಣರಂತೆ ಅಧ್ಯಯನವೇ ಇವರ ಜೀವನದ ಮುಖ್ಯವ್ಯಾಸಂಗವಲ್ಲ. ಇವರ ಹೋರೆ, ಹೊರಗಿನ ಹೋರಾಟ. ಆದುದರಿಂದಲೇ 'ನಿಜದಿಂ ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್;' ಆದಕಾರಣ ಇವರು 'ಚದುರುರ್' ಎಂದು ಹೇಳಿದ್ದುಂಟು. ಓದಿ, ಆಜನ್ಮ ಸಾಹಿತ್ಯದ ಅಭ್ಯಾಸಮಾಡಿ ಕಾವ್ಯಗಳನ್ನು ರಚಿಸುವ ವರ್ಗದವರು ಇವರಲ್ಲ; ಎಂಬುದನ್ನೆ ಇವರು 'ಕುಱಿತವರಲ್ಲ' ಎಂಬ ಪದದಿಂದ ಅಲ್ಲಿ ಸ್ಪಷ್ಟೀಕರಿಸಲಾಗಿದೆ. ಕುಱಿತವರಲ್ಲದೆ ಇದ್ದರೂ 'ತಮ್ಮ ತಮ್ಮ ನುಡಿಯೊಳ್ ಎಲ್ಲರ್ ಜಾಣರ್;' 'ಪದನರಿದು ನುಡಿಯಲುಂ, ನುಡಿದುದಂ ಅರಿದು ಆರಯಲುಂ ಆರ್ಪರ್ ಆ ನಾಡವರ್ಗಳ್' ಎಂದು ಬಣ್ಣಿಸಿದೆ. ಇಂತಿದು ನಮ್ಮ ಪಟ್ಟಿಲರಾದ—ನಾಡವರ ಹುಟ್ಟುರಸಿಕತೆಯ ವರ್ಣನೆಯಾಗಿದೆ. ಇವರನ್ನು ಗಭೀರಚಿತ್ತರೆಂದೂ ಉಗ್ರರಾದರೂ ವಿವೇಕಿಗಳೆಂದೂ ಒಳ್ಳೆ ಬಂಟರೆಂದೂ ಅಭಿಮಾನಧನರೆಂದು ಹೇಳಿದೆ. ಇದು ೯ನೆಯ ಶತಮಾನದ ಚಿತ್ರವು.

ನಮ್ಮ ನಾಡ ರಾಜರಿಗಿದ್ದ ವಿವಿಧ ಕಲಾವಿನೋದದ ಪ್ರೀತಿಗೆ– ಅವರ ಉದಾರಾಶ್ರಯದಲ್ಲಿ ರಚಿತವಾದ ಕಾವ್ಯಗಳು, ಗುಡಿ-ಗೋಪುರಗಳು, ಅಂಜಂತಾ ವೇರೂಳುಗಳೇ ಉತ್ತಮವಾದ ನಿದರ್ಶನಗಳಾಗಿವೆ. ಓಜರು, ಭಟ್ಟರು, ಪಂಡಿತರು, ಆಚಾರ್ಯರು, (ಕವಿ, ಗಮಕಿ, ವಾದಿ, ವಾಗ್ಮಿಗಳು) ಮೊದಲಾದವರಿಗೆ ರಾಜಾಶ್ರಯವನಿತ್ತರು. ಈ ವರ್ಗದ ಜನಗಳ ಹೆಸರಿನ ಹಳ್ಳಿಗಳು–ಓಜನಹಳ್ಳಿ ಮೊದಲಾದುವುಗಳ ಹೆಸರು ಈಗಲೂ ಉಳಿದಿದೆ.

ಸಂಗೀತ ನೃತ್ಯಕ್ಕೂ ತುಂಬ ಆಶ್ರಯವಿದ್ದಿತು. ಪಾತ್ರದವರ,

ಕಲಾವಂತೆಯರ ಹೆಸರಿನ ಊರುಗಳು ಈ ನಾಡಿನಲ್ಲಿ ವಿಶೇಷವೆಂದು ತೋರು ತ್ತದೆ(ಪು. ೩೨ ನೋಡಿ). ಪೃಥ್ವಿರಾಜ ಚಹ್ವಾಣನನ್ನು ಕಣಕಿ ಮಾತನಾಡಿಸ ಕಂನಾಡ ಕಲಾವಂತೆಯ ಒಂದು ದಂತ ಕಥೆಯಿದೆ.

ನಮ್ಮ ನಾಡವರಿಟ್ಟ ಊರ ಹೆಸರುಗಳೂ ಇವರ ರಸಿಕತೆಗೆ ಸಾಕ್ಷಿ. ಹೂಗಳ ಮೇಲೆ ಈ ಜನಕ್ಕೆ ಹುಚ್ಚು ಪ್ರೀತಿ. ಒಗೆ ಬಗೆಯ ಹೂ-ಬಳ್ಳಿ ಗಳನ್ನು ಬೆಳೆಸಲು ತೋಟಿಗನಿಗೆ ಉಂಬಳಿಕೊಟ್ಟುದುಂಟು. ಪುರದ ಉಪವನ, ನಂದನವನಗಳ ರಮ್ಯವಾದ ವರ್ಣನೆಗಳು ಕಾವ್ಯಗಳಲ್ಲಿ ಬರುತ್ತವೆ. ಹೂವಿನಕೇರಿಯ ಸೊಗಸಾದ ವಾಸ್ತವ ಚಿತ್ರಗಳನ್ನೂ ಕೊಟ್ಟಿದ್ದಾರೆ. ಅಲ್ಲಿಯ ವ್ಯಂಗ್ಯ ವಿನೋದವೂ ಇವರ ರಸಿಕತೆಯನ್ನು ಸೂಚಿಸುತ್ತದೆ. ತಾವರೆಗೇರಿ, ಮಲ್ಲಿಗವಾಡ, ಜಾಜೂರು, ಕಮಲಾಪುರ, ಹೂವಿನೂರು, ಹೂವಿನಕೇರಿ, ಪೂವಳ್ಳಿ, ಅರಳಗುಪ್ಪೆ, ಪುಷ್ಪಗಿರಿ ಎಷ್ಟು ಅಂದ ಅಂದದ ಹೂಗಳ ಎಡೆಗಳಿವು! ಇಷ್ಟು ಬಗೆಬಗೆಯ ಹೂಗಳ ಹೆಸರಿನ ಊರುಗಳೂ ಕಂನಾಡ ಹೊರಗೆ ಇದ್ದುದು ಕಂಡುಬರುವುದಿಲ್ಲ. ಸಂಪಖಂಡ, ಸಂಪ ಗೋಡು, ಸಂಪಗಾವಗಳು ಸಂಪಗೆಯ ಹೂವಿನಿಂದ ಒಂದು ಹೆಸರು ಗಳಾಗಿರಬೇಕು. ಸಂಪಗೆಗೆ ಆರಿಯ ಮಾತಿನಲ್ಲಿ ಚಾಫಾ ಎನ್ನುವರು. ಹಳದಿಗೆಂಪು ಸೂಚಿಸುವ 'ಚೆನ್' ಎಂಬ ಮೂಲ ಶಬ್ದದಿಂದ ಸಿದ್ಧವಾದ ಶಬ್ದವಿದು. ಚೆಂಪಕ ಎಂದು ಸಂಸ್ಕೃತದಲ್ಲಿ ಇಂಬುಗೊಂಡಿದೆ. ಸೋನ-ಚಾಫಾ ಎಂದು ಆರಿಯ ಮಾತಿನಲ್ಲಿ, ಕೆನ್ನ ಸಂಪಗೆಯೆಂದು ಕಂನುಡಿಯಲ್ಲಿ ಹೇಳುವ ರೀತಿಯಲ್ಲಿ ಚೆನ್‌ಪಕದ ಬಣ್ಣದ ಸ್ಪಷ್ಟೀಕರಣವೆ ಇದೆ.

ಕಂನಾಡ ವಿದ್ಯೆ, ಕಲೆಗಳ ರಕ್ಷಣೆಗೆ, ಬೆಳವಣಿಗೆಗೆ—ತನ್ಮೂಲಕವಾಗಿ ರಸಿಕತೆ ಶೆಟ್ಟರೂ ಸಿರಿವಂತರೂ ಮಾಡಿಸ್ಪ ಸಹಾಯವೂ ಸಂಸ್ಮರಣೀಯ ವಾಗಿದೆ. 'ಶೆಟ್ಟಿಯ ಬಳ್ಳು (ಒಂದು ಅಳತೆ) ಆವಗಂ ಕಿರಿದು' ಎಂದು ಪಂಪನು ಅವರ ನಗೆಯಾಡಿದ್ದರೂ, ಅವರು ತಮ್ಮ ಸಂಪಾದನೆಯನ್ನು ಸಮಾಜದ ಸಲುವಾಗಿ ವೆಚ್ಚಮಾಡುತ್ತಿದ್ದುದರಿಂದ ನಾಡಿನಲ್ಲಿ 'ಶ್ರೇಷ್ಠಿ' ರೆಂದು ಹೆಸರಾದರು. ಬನವಾಸಿಯ ಒಬ್ಬ ಸೆಟ್ಟಿಯ ಔದಾರ್ಯದಿಂದಲೆ ಕಾರ್ಲೆಯ ರಮ್ಯವಾದ ಚೈತ್ಯಾಲಯವು ನಿರ್ಮಿತವಾಯಿತು. ಅನೇಕ 'ನಗರೇಶ್ವರ' ದೇವಾಲಯಗಳು ಶೆಟ್ಟರ ದಾನದಿಂದಲೆ ಆಗಿವೆ. ನಗರ್ತರು,

ನಗರದ ನಾಗರಿಕತೆಗೆ ಪೋಷಿಸಿದ್ದಾರೆ. ಪಟ್ಟಣ ಶೆಟ್ಟರ ಕೈಯಲ್ಲಿ ಆ ಪಟ್ಟಣ ಸೂತ್ರಗಳು ಇರುತ್ತಿದ್ದುವು. ಇಂತಹ ಶೆಟ್ಟರ ನೆನಹಿನ ಊರುಗಳೂ ಅಲ್ಲಿ ಇಲ್ಲಿ ಉಂಟು (ಪು. ೩೨ ನೋಡಿ).

## ಕಂನುಡಿ

ಈ ನಾಡಿನ ಮೂಲ ಜನ ಕಣ್ಣರು. ಈ ಕಾರಣದಿಂದ ಅವರು ನೆಲಸಿದ ನೆಲ ಕಂನಾಡು; ಅವರಾಡುವ ಮಾತು ಕಂನುಡಿ, ಎಂದು ಕರೆಯಲ್ಪಡುವುದು ಸ್ವಾಭಾವಿಕವಾಗಿದೆ.

ಇವರು ತುರುಕಾರರು, ಹಾಲಿನವರು ಎಂಬುದೇ ಕಳವರು ಅಥವಾ ಕಣ್ಣರೆಂಬ ಪದದಿಂದ ಸೂಚಿತವಾಗುತ್ತದೆ. ಇವರಿಗೇ ಸಂಸ್ಕೃತದಲ್ಲಿ ಯಾದವರು, ಯದುಗಳು–ತುರ್ವಸುಗಳೆಂದು ಇದೇ ಅರ್ಥದಲ್ಲಿ ಹೆಸರು ಬಂದಿದೆ. ತುರುಕಾರರಿಗೆ ಹಟ್ಟಿಕಾರರೆಂದೂ ಕರೆವ ವಾಡಿಕೆಯಿದೆ. ಈ ಜನ ವೇದಕಾಲದಕಿಂತಲೂ ಮೊದಲಿನವರೆಂಬುದು ನಿಜವಿದ್ದರೆ, ಯದು-ತುರ್ವರೆಂದೂ ಪತ್ತಿಗಳೆಂದೂ, ಪಣಿಗಳೆಂದೂ ಕುರುವರೆಂದೂ ವೇದದಲ್ಲಿ ಹೆಸರುಗೊಂಡ ಈ ಜನದ ಪ್ರಾಚೀನ ಸಾಹಿತ್ಯವು ಏನೂ ದೊರೆಯದೆ ಇರುವುದು ಬಹಳ ವಿಚಿತ್ರವೆನಿಸುವಂತಿದೆ.

ಆದರೆ, ಈ ಜನದ ಜೀವನದ ರೀತಿಯನ್ನು, ಅವರ ಮೂಲ ಮನೋಭೂಮಿಕೆಯನ್ನು, ಇವರ ಪರಂಪರೆ, ಸಂಪ್ರದಾಯಗಳ ಬಗೆಯನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದರೆ ಈ ವಿಷಯದಲ್ಲಿ ಸೋಜಿಗಪಡುವುದಕ್ಕೆ ಕಾರಣವೆ ಉಳಿಯುವುದಿಲ್ಲ. ಭಾರತದಲ್ಲಿ ಧರ್ಮ–ತತ್ವಜ್ಞಾನಗಳ ಗ್ರಂಥಗಳು ಬೆಳೆದಂತೆ ಭೌತಶಾಸ್ತ್ರದ ಬೆಳವಣಿಗೆ ಆಗಲೆ ಇಲ್ಲ; ಇದು ವಿಚಿತ್ರ! ಎಂದು ಯಾರಾದರೂ ಆಕ್ಷೇಪಿಸಿದರೆ ಅದಕ್ಕೆ ನಮ್ಮ ಉತ್ತರವೇನು? ಭಾರತೀಯರಲ್ಲಿ ಚಿಕಿತ್ಸಾಬುದ್ಧಿ, ವಿಮರ್ಶಾ ಶಕ್ತಿಯಿದ್ದಿಲ್ಲವೆಂದು ಒಪ್ಪಲಿಕ್ಕಾದೀತೆ? ಭಾರತೀಯರ ಮನಸಿನ ಒಲವು ಹೆಚ್ಚಾಗಿ ಅಂತರ್ಮುಖವಾಗಿದ್ದುದರಿಂದ ಇಲ್ಲಿ ಭೌತಶಾಸ್ತ್ರದ ಪ್ರಗತಿಗೆ ಅಂದು ಎಡೆ ದೊರೆಯಲಿಲ್ಲ; ಭಾರತೀಯರ ಹಾಗೂ ಯುರೋಪೀಯರ ಒಂದು ಕಾಲದಲ್ಲಿದ್ದ ಮನಸಿನ ಒಲವುಗಳಲ್ಲಿಯ ಅಂತರವೆ ಇದಕ್ಕೆ ಮುಖ್ಯವಾದ ಕಾರಣವು.

ಅದರಂತೆ ಆರ್ಯರ ಮತ್ತು ಹಟ್ಟಿಕಾರರ ಇರುವಿನ ಬಗೆಯು ಬೇರೆಯಾಗಿದ್ದಿತು. ಮಾತಿಗಿಂತ ಮಾಡುವುದರಲ್ಲಿ ಇವರಿಗೆ ಮೆಚ್ಚಿಕೆ. ವಿಚಾರಕ್ಕಿಂತ ಆಚಾರದಲ್ಲಿ ಆಸಕ್ತಿ ಬಹಳ. ಆದುದರಿಂದ ಇವರ 'ಕೃತಿ' ಕಾವ್ಯ, ಸಾಹಿತ್ಯ, ಇತಿಹಾಸಗಳ ರೂಪದಲ್ಲಿ ಕಂಡುಬರುವುದಿಲ್ಲ. ಲೋಕ ವ್ಯವಹಾರ, ರಾಜ್ಯವ್ಯವಹಾರಗಳ ಹೋರಟೆಯು ಇವರ 'ಕೃತಿ'. ಕೂತು ಮಾತಿನ ಮಲ್ಲಗಾಳಗ ಮಾಡುವುದಕ್ಕಿಂತಲೂ ಕುಣಿದು—ರಿಂಗಣಗುಣಿದು ಕೇಕೆ ಹಾಕುವಲ್ಲಿ ಇವರಿಗೆ ಹಿಗ್ಗು ಹೆಚ್ಚು. ಇರುವೇ ಇವರ ಪಾಡು; ಹಾಡು. ಇರುವುದನ್ನು ಬಿಟ್ಟು, ಹೇಳುವ ದಂದುಗವನ್ನು ಕೈಕೊಳ್ಳುವುದರಲ್ಲಿ ಇವರಿಗೆ ಕಡಿಮೆತನವೆನಿಸುತ್ತಿದ್ದಿತು.

ಆರ್ಯೇತರ ಸಿದ್ಧ-ಯತಿ ಪರಂಪರೆಯಲ್ಲೂ ನಾಲಗೆಯುವರಾಗುವುದಕ್ಕೆ ಬೆಲೆಯಿದ್ದಿಲ್ಲವೆಂದು ಈಗಲೂ ಉಳಿದಿರುವ ಪರಂಪರೆಗಳ ಬಲದಿಂದ ಹೇಳಬಹುದಾಗಿದೆ. ವಿವೇಚನ, ಪ್ರವಚನಾದಿ ಬಾಯಿಲೆಕ್ಕಾಚಾರದಿಂದೇನು ಫಲ? 'ಸತ್ಯವನು ಅರಿತವನು ಸತ್ತಹಾಗಿರಬೇಕು' ಎಂದು ಸರ್ವಜ್ಞನ ವಚನವು ಈ ಪರಂಪರೆಯುವರ ಸೂತ್ರವಾಕ್ಯವೇ ಆಹುದು. ಆತ್ಮದ ಧ್ಯಾಸ, ಮನನ; ನಾಮಸ್ಮರಣ. ಇದಕ್ಕೆ ಮಿಕ್ಕಿ ಗುಡ್ಡದಂತಹ ಹೊತ್ತಿಗೆಗಳನ್ನು ರಚಿಸುವ ಜನವು ಇದಲ್ಲ. ಮೌನದ ಮಹತ್ವ ತಿಳಿದವನು ಮೌನವನ್ನಾಚರಿಸಬೇಕು; ಮೌನವನ್ನು ಕುರಿತು ಮಹಾಗ್ರಂಥ ಬರೆವಂತೆ ಬಾಯ್ಮಾತೆಲ್ಲವೂ ಬಯಲು ನುಡಿಯೆಂಬುದು ಈ ಜನದ ವಿಚಾರದ ತಿರುಳು.

ಹೀಗಾಗಿ ಪುರಾಣ-ಕಾವ್ಯಾದಿಗಳನ್ನು ಬರೆಯುವವರ— (ಆ ಪುರಾತನ ಕಾಲದಲ್ಲಿ ಬರೆಯುವುದು ಎಲ್ಲಿ ಗೊತ್ತಿದ್ದಿತು?)—ಅಲ್ಲ, ಹೇಳುವವರ ವಿಷಯಕ್ಕೆ ಈ ಜನದ ಭಾವನೆ ಏನಿದ್ದಿತೆಂಬುದನ್ನು, ಈ ಹೇಳುವವರಿಗೆ ಅವರಿತ್ತ, ಅಥವಾ ಗತಾನುಗತಿಕವಾಗಿ ಬಂದ ಹೆಸರಿನಿಂದಲೇ ಅರಿತುಕೊಳ್ಳಬಹುದಾಗಿದೆ. ಭಾಟ ಅಥವಾ ಭಟ್ಟವೆಂಬುವಕ್ಕೆ ಒಂದು ನಿಟ್ಟಿನಲ್ಲಿ ವೀರ, ಪಂಡಿತವೆಂಬ ಅರ್ಥವಿದ್ದರೂ ಇನ್ನೊಂದು ನಿಟ್ಟಿನಲ್ಲಿ 'ಹೊಗಳುವವ'ನೆಂದು ಕೀಳ್ಬಗೆವ ಭಾವನೆಯು ಅಲ್ಲಿ ಅಡಕವಾಗಿದೆ. 'ಹೊಗಳುವವ'ರೆಂದರೆ ಇನ್ನೂ ಲೇಸು. (ಹೊಟ್ಟೆಯ ರೊಟ್ಟಿಗಾಗಿ ಬೊಗಳುವ) 'ಶುನಕ'ರೆಂದು ಇವರಿಗೆ ನಾಮಾಭಿಧಾನವಿದೆ. ಈ ಸಾಹಿತಿಗಳೆಲ್ಲ ಸೂತರೂ

ಶೌನಕಾದಿಗಳೂ! ಈ ವರ್ಗದವರು ಸಾಹಿತಿಗಳಿಗೆ ಇಟ್ಟ ಹೆಸರಿದು. ಕಂನುಡಿಯೊಳಗಿನ ಪರಂಪರಾಗತವಾದ ಹೆಸರೂ ಮೇಲಣ ವಿಚಾರವನ್ನೇ ಪುಷ್ಟೀಕರಿಸುತ್ತದೆ. ನಮ್ಮ ನಾಡವರ ಮನೆತನದ ಗತ ಇತಿಹಾಸವನ್ನೆಲ್ಲ ನೆನಪಿಟ್ಟು ಕತೆ ಮಾಡಿ ಹೇಳುವ ಒಂದು ವರ್ಗವೆ ಇದೆ. ಇವರೆ ನಮ್ಮ ನಾಡಿನ ಪರಂಪರಾಗತವಾದ ಇತಿಹಾಸಕಾರರು, ಕತೆಗಾರರು; ಐತಿಹಾಸಿಕ ಕಾದಂಬರಿಕಾರರೂ ಅಹುದು. ಒಂದೊಂದು ಮನೆತನಕ್ಕೂ ಕಾಲಕಾಲಕ್ಕೆ ಬಂದು ಅವರ ಹಿರಿಯರ ಬಿರುದಾವಳಿ, ಪೂರ್ವಚರಿತೆಗಳೆಲ್ಲವನ್ನೂ ಚೆನ್ನಾಗಿ ಬಣ್ಣ ಬಳಿದು ಮನಸೆಳೆವಂತೆ ಹೇಳುವಲ್ಲಿ ಇವರು ಗಟ್ಟಿಗರು. ಇದಕ್ಕಾಗಿ ಇವರು ಉಂಬಳಿ, ಮಾನ್ಯಗಳನ್ನು ಪಡೆದುದೂ ಉಂಟು. ಈ ವರ್ಗದ ಹೆಸರು ಏನು? ಈ ಹೇಳುವವರೆಲ್ಲ 'ಹೆಳವರು'! ಹೆಳವನಕಟ್ಟೆ, ಹೆಳವನಹಳ್ಳಿ ನಮ್ಮ ನಾಡಿನಲ್ಲಿವೆ. ಕೊನೆಯದು ಮೈಸೂರ ಸೀಮೆಯ ಶಾಸನದಲ್ಲಿದೆ. (E. K. V. Hn. 171)

ಹೆಳವನೆಂದರೆ ಕಾಲಿಲ್ಲದವನು. ಆದರೆ ಹೆಳವರೆಂಬ ಈ ಜನವೆಲ್ಲ ಕಾಲಿಲ್ಲದ್ದೆಂದು ಮಾತ್ರ ತಿಳಿಯಕೂಡದು. (ಕಾಲಿದ್ದವರಾದರೂ) ಬರಿ 'ಹೇಳುವ' ಉದ್ಯೋಗದಿಂದ, ಬಾಯಿಯಿಂದ ಹೊಟ್ಟೆ ಹೊರೆಯುವುದರಿಂದ ಇವರಿಗೆ ಹೆಳವರೆಂದು ಲಾಕ್ಷಣಿಕವಾಗಿ ಹೇಳಿದೆ. ಒಂದು ಜಾತಿಗೆ ಜಾತಿಯೆ ಕಾಲಿಲ್ಲದ್ದು ಇರುವ ಸಂಭವವುಂಟೆ? ಹೆಳವನ ಭಾರವನ್ನು ಕಾಲಿದ್ದವರು ಹೊರಬೇಕಾಗುವುದು; ಹೆಳವರು ಪರಾವಲಂಬಿಗಳು. ಇದು ಸ್ವಾಭಿಮಾನದ ಜೀವನವಲ್ಲ. 'ಅಭಿಮಾನಿಗಳ್', 'ವೀರರ್ಕಳ್' ಎಂದು ಹೆಸರಾದ ಕಂನಾಡ ಮೊದಲಿಗರು ಹೆಳವರು—ಹೇಳವರು ಆಗುವುದಕ್ಕೆ ಮನಸು ಮಾಡಿರದಿದ್ದರೆ ಸೋಜಿಗವಲ್ಲ.

ವೇದಗಳಲ್ಲಿ ಸಂಸ್ಕೃತವಲ್ಲದ ಕಂದಮಿಳ ವರ್ಗಕ್ಕೆ ಸಲ್ಲುವ ಹಲವು ಮಾತುಗಳು ದೊರೆಯುವುದನ್ನು ಸಂಶೋಧಕರೆಲ್ಲರೂ ಒಪ್ಪುತ್ತಾರೆ. ಆರ್ಯರಿಂದ ಭಿನ್ನವಾದ ಹಟ್ಟಿಕಾರ ಜನದ ಅಸ್ತಿತ್ವವು ವೇದಕಾಲಕ್ಕೆ ಮೊದಲಿನಿಂದಲೂ ಇದ್ದುದಕ್ಕೆ ಆಧಾರಗಳು ದೊರೆಯುತ್ತವೆ ಜನವಿದ್ದ ಬಳಿಕ ಅವರ ನುಡಿಯೊಂದು ಇರಲೇಬೇಕಷ್ಟೆ. ಇದರ ಅಂದಿನ ಸ್ವರೂಪವೇನಿದ್ದಿತೆಂಬುದನ್ನು ನಿರ್ಧರಿಸುವ ಪ್ರಯತ್ನಗಳು ಅಲ್ಪಸ್ವಲ್ಪ ನಡೆದಿವೆ.

ಆರ್ಯರು ಮತ್ತು ಹಟ್ಟಿಕಾರರು ಹತ್ತಿರದವರಾಗಿ, ಹೊಂದಿದವರಾಗಿ ಬಾಳಲಾರಂಭಿಸಿದ ಬಳಿಕ ಇವರಿಬ್ಬರ ಭಾಷೆಗಳ ಪರಿಣಾಮವು ಒಬ್ಬರೊಬ್ಬರ ಮೇಲಾಯಿತು. ಸಂಸ್ಕೃತ ಭಾಷೆಯಲ್ಲಿ ಸೇರಿದ ಹಟ್ಟಿಕಾರರ ಮಾತುಗಳನ್ನು ಕೆಲವು ಈ ಮೊದಲು ಸೂಚಿಸಿದೆ. ಈ ವಿಷಯವನ್ನು ಕುರಿತು ಹೆಚ್ಚಿನ ಸಂಶೋಧನಗಳೂ ನಡೆದಿವೆ.

ಸಂಸ್ಕೃತಕ್ಕಿಂತಲೂ ಪ್ರಾಕೃತದ ಮೇಲೆ ಹಟ್ಟಿಕಾರರ ಮಾತಿನ ಪರಿಣಾಮವು ಹೆಚ್ಚಾಗಿದೆ. ಆಧುನಿಕ ಪ್ರಾಕೃತ ಭಾಷೆಯ ಹುಟ್ಟಿಗೆ ಆರ್ಯೀಕರಣಕ್ಕೆ ಒಳಗಾದ ಹಟ್ಟಿಕಾರ ಜನವೇ ಕಾರಣವೆಂದು ಕಂಡುಬರುತ್ತದೆ. ಕಾಲಿಂದೀ ತೀರದಲ್ಲಿ—ಮಥುರಾ—ವೃಂದಾವನದ ಬಳಿಯ ಹಟ್ಟಿಗಳಲ್ಲಿ ವ್ರಜಭಾಷೆಯು ತಲೆದೋರಿತೆಂದು ಸಂಶೋಧಕರು ನಿರ್ಧರಿಸಿದ್ದಾರೆ. ಇದುವೆ ಆಧುನಿಕ ಮೊದಲನೆಯ ಪ್ರಾಕೃತ. ವ್ರಜವೆಂದರೆ ಸಮೂಹ; ವ್ರಜರೆಂದರೆ ಗೋವಳರು; ಅಲೆದಾಡುವವರು ಎಂದೂ ಅರ್ಥವಿದೆ. ಕಾಲಿಂದೀ ತೀರದಲ್ಲಿ ಹಟ್ಟಿಗಳನ್ನು ಕಟ್ಟಿಕೊಂಡಿದ್ದ ಗೋವಳು ಯದು-ತುರ್ವರೆಂಬ ಬಗೆಗೆ ಭಿನ್ನಾಭಿಪ್ರಾಯಗಳಿಲ್ಲ.

ಡಾ. ಭಂಡಾರಕರ್(ಹಿರಿಯ)ರು ಪ್ರಾಕೃತಗಳ ಹುಟ್ಟು, ಬೆಳವಿಗಳನ್ನು ಕುರಿತು ಒಂದು ಉಪನ್ಯಾಸ–ಗ್ರಂಥವನ್ನು ಒರೆದಿದ್ದಾರೆ. ಆದರಲ್ಲಿ ಅವರಿಗೆ ಒಂದು ಸಂದೇಹವು ತಲೆದೋರಿದ್ದುದನ್ನು ಕಾಣಿಸಿದ್ದಾರೆ. ಪ್ರಾಕೃತದ ಪೆಮ್ಮ, ತೆಲ್ಲ, ಪೊಕ್ಖರ, ದೆಕ್ಖು, ಎಕ್ಕ, ಚೊತ್ಥ ಎಂಬಿವೆ ಮೊದಲಾದ ಪದಗಳಲ್ಲಿ ಕಾಣಿಸಿಕೊಳ್ಳುವ ಹ್ರಸ್ವ ಎ, ಒ ಕಾರಗಳು ಸಂಸ್ಕೃತದಲ್ಲಿ ಇಲ್ಲ. ಇವು ಎಲ್ಲಿಂದ ಬಂದುವು ಎಂಬುದೇ ಡಾ. ಭಂಡಾರಕರರ ಆ ಸಂದೇಹ. 'ದ್ರಾವಿಡ ಜನಾಂಗದ ಪರಿಣಾಮದಿಂದ ಈ ಉಚ್ಚಾರಗಳು ಪ್ರಾಕೃತದಲ್ಲಿ ಬಂದಿರಬೇಕೆಂ'ದು ಈ ಸಂದೇಹಕ್ಕೆ ಡಾಕ್ಟರರು ತಾವೇ ಉತ್ತರನ್ನೂ ಕಂಡುಕೊಂಡಿರುವರು.

ಆದರೆ ಆ 'ದ್ರಾವಿಡ'ವೆಂಬ ಜನ ಯಾವುದು? ಎಂಬ ಬಗೆಗೆ ಮಾತ್ರ ಇನ್ನೂ ಯಾರೂ ನಿಶ್ಚಿತವಾದ ಉತ್ತರವನ್ನು ಕಂಡುಹಿಡಿವ ಪ್ರಯತ್ನ ಪಟ್ಟಿಲ್ಲ. ಇನ್ನು ಕೆಲವು ಆರ್ಯಾಭಿಮಾನಿಗಳಿಗೆ, ಈ ಉಚ್ಚಾರಗಳನ್ನು 'ದ್ರಾವಿಡರಿಂದ ಎತ್ತಿಕೊಂಡಿರಬೇಕೆಂ'ಬುದೂ ಸಹನವಾಗದೆ ಅವರು ಹ್ರಸ್ವ

ಎ, ಒ ಕಾರಗಳು ಸಂಸ್ಕೃತದಲ್ಲೂ ಉಂಟೆಂಬ ಆಗ್ರಹವನ್ನು ತೋರುತ್ತಿದ್ದಾರೆ! ಆದರೆ ಇಂತಹ ಉಚ್ಚಾರದ ಶಬ್ದಗಳನ್ನು ಸಂಸ್ಕೃತಭಾಷೆಯಲ್ಲಿ ಬೆರಳಿಟ್ಟು ತೋರಿಸುವುದಕ್ಕೆ ಮಾತ್ರ ಮುಂದೆ ಒರಲೊಲ್ಲರು. ಹ್ರಸ್ವ ಎ, ಒ ಕಾರಗಳ ಸಂಬೋಧನದ ನಿಪಾತಗಳು ಕೆಲವೆಡೆಗೆ ಸಿಕ್ಕುತ್ತವಂತೆ! ಆದರೆ ಅವು ಸಮರ್ಪಕವಾದ ಉದಾಹರಣಗಳೆಂದು ಒಪ್ಪುವುದಕ್ಕಾಗುವುದಿಲ್ಲ. ಮೇಲ್ಕಾಣಿಸಿದಂತಹ ಶಬ್ದಗಳಲ್ಲಿ (ನಿಪಾತಾದಿ ಏಕಾಕ್ಷರಿಗಳಲ್ಲಿ ಅಲ್ಲ) ಆರಂಭದಲ್ಲಾಗಲಿ, ಮಧ್ಯದಲ್ಲಾಗಲಿ ಹ್ರಸ್ವ ಎ, ಒ ಗಳುಳ್ಳ ಸಂಸ್ಕೃತ ಶಬ್ದಗಳನ್ನು ನಾಲ್ಕಾರಾದರೂ ಉದಹರಿಸಿದಲ್ಲಿ ಅವರ ಮಾತಿಗೆ ಏನಾದರೂ ಬೆಲೆ ಬರಬಹುದು.

ಅದು ಏನೆ ಇದ್ದರೂ ಪ್ರಾಕೃತದಲ್ಲಿ ಹ್ರಸ್ವ ಎ, ಒ ಮೊದಲಾದ 'ದ್ರಾವಿಡರ'ದೆಂದು ಹೇಳುವ ಪರಿಣಾಮಕ್ಕೆ ಕಾರಣರಾದ ಜನರಾರೆಂದು ಹೊರಗೆ ಎಲ್ಲಿಯಾದರೂ ಹುಡುಕುವುದಕ್ಕೆ ಅಲೆದಾಡುವ ಕಾರಣವೇ ಇಲ್ಲ. ಕಂಕುಳಲ್ಲಿಯೆ ಕೂಸನ್ನಿಟ್ಟುಕೊಂಡು ಊರೆಲ್ಲ ಸುತ್ತಿದರೆ ಅದು ಎಲ್ಲಿ ದೊರೆಯಬೇಕು? ಉತ್ತರಾಪಥ, ಗುಜರಾತ, ಮಹಾರಾಷ್ಟ್ರಾದಿಗಳಲ್ಲಿ ಕಾಣುವುದೆಂದು ಹೇಳುವ ದ್ರಾವಿಡಪ್ರಭಾವದ ವಿಚಾರವೂ ಹೀಗೆಯೇ ಇದೆ.

ಯಾವ ಯದು-ತುರ್ವರ ವ್ರಜಗಳಲ್ಲಿ ಈ ಭಾಷೆಯು ಜನ್ಮತಾಳಿತೊ ಆ ಯದು-ತುರ್ವರೇ 'ದ್ರಾವಿಡ' ವರ್ಗೀಯ ಹುಟ್ಟಿಕಾರರೆಂದು ಗ್ರಹಿಸಿದರೆ ಇದೆಲ್ಲ ತೊಡಕೂ ಸುಸೂತ್ರವಾಗಿ ಬಿಟ್ಟುಹೋಗುವುದು. ಅಚ್ಚ ಕಂನಾಡವರೇ ಎಂದು ಡಾ. ಅಳತೇಕರ, ಸ್ಮಿತ್ ಮೊದಲಾದವರು ನಿರ್ಧರಿಸಿದ ರಾಷ್ಟ್ರಕೂಟರೂ, ಅಲ್ಲದೆ ಚಲುಕ್ಯ, ಗಂಗ, ವಿಜಯನಗರದ ತುಳುವಂಶದ ರಾಜರುಗಳು ಮೊದಲಾದವರು ತಮ್ಮ ಕುಲಪರಂಪರೆಯನ್ನು ಹೇಳುವಾಗ ತಾವು ಯದು-ತುರ್ವರ ಸಂತತಿಯೆಂದು ಹಲವೆಡೆಗೆ ಹೇಳಿಕೊಂಡಿದ್ದಾರೆ. ಹೀಗೆ ಸಾವಿರಾರು ವರುಷಗಳಿಂದ, ತಲೆತಲಾಂತರಗಳಿಂದ ಅಚ್ಚಳಿಯದೆ ಒಂದ ಪರಂಪರೆಯೆ ಸುಳ್ಳೆಂದು ತಿರಸ್ಕರಿಸುವ ಅನ್ಯಾಯವನ್ನೂ ಮಾಡಬೇಕಾಗುವುದಿಲ್ಲ. ಈ ರಾಜರು ಪ್ರತಿಷ್ಠೆಗಾಗಿಯೆ ಪುರಾತನ ವಂಶಗಳ ಹೆಸರನ್ನು ಹೇಳುತ್ತಿರುವುದಾಗಿದ್ದರೆ, ನಡುವೆ ಕೆಲರಾಜರಿಗೆ ರಾಮನ ಇಕ್ಷ್ವಾಕುವಂಶದವರೆಂದು ಹೇಳುವ ಮೋಹವೂ ಆಗಬಹುದಾಗಿದ್ದಿತಲ್ಲ! ಒಂದು

ಮುನೆತನದ ಚಲುಕ್ಯರಾಗಲಿ, ರಾಷ್ಟ್ರಕೂಟರಾಗಲಿ ತಾವು ಯಾದವರ ಪೀಳಿಗೆಯವರೆಂದು ಹೇಳಿ, ಬಳಿಕ ಮುಂದಿನವರು ಇಕ್ಷ್ವಾಕು ಅಥವಾ ಬೇರೆ ಇನ್ನೊಂದು ಯಾವ ಸಂತತಿಯವರೆಂದು ಹೇಳಿಕೊಂಡಿದ್ದರೆ ಇಂತಹ ಸಂದರ್ಭದಲ್ಲಿ ಈ ಪರಂಪರೆಗೆ ಅವಿಚ್ಛಿನ್ನವಾದುದೆಂದು ಹೇಳುವುದು ಅಸಮಂಜಸವಾಗುತ್ತಿದ್ದಿತು. ಸಂಸ್ಕೃತ ಒಂದು ವಾಕ್ಯವೂ ಗೊತ್ತಿಲ್ಲದ ಇಂದಿನ ಒಬ್ಬ ಬ್ರಾಹ್ಮಣನು ವಾಸಿಷ್ಠ ಗೋತ್ರದವರು ತಾವು ಎಂದು ಹೇಳಿದರೆ, ಆತನು ಸುಳ್ಳಾಡುವನೆಂದು ಆಕ್ಷೇಪಿಸಲಿಕ್ಕಾದೀತೆ? ನಮ್ಮ ದೇಶದಲ್ಲಿ ಇವು ಹಟ್ಟಿಕಾರರಲ್ಲ, ಜೈನರಲ್ಲಿ, ವೈದಿಕರಲ್ಲಿ ಅವಿಚ್ಛಿನ್ನವಾಗಿ ನಡೆದುಬಂದ ಪರಂಪರೆಗಳುಂಟು. ಅವನ್ನು ಲೆಕ್ಕಕ್ಕೆ ಹಿಡಿಯದೆ ಹೋದರೆ ನಮ್ಮ ಸಾಂಸ್ಕೃತಿಕ ಇತಿಹಾಸವೆ ತಿಳಿಯುವ ಸಂಭವವಿಲ್ಲ.

ಈ ಕಾರಣದಿಂದಲೂ ಯದು-ತುರ್ವಸರು ಕಂನಾಡವರ ಮೊದಲಿಗರು; ಆರ್ಯೇತರರು, ಎಂದು ನನ್ನ ತಿಳುವಳಿಕೆಯಾಗಿದೆ. ಇವರು ಆರ್ಯಭಾಷೆಯನ್ನು ತಮ್ಮದಾಗಿ ಮಾಡಿಕೊಳ್ಳುವಾಗ ಈ ವ್ರಜಭಾಷೆಯು ರೂಪಗೊಂಡಿತು. ಪ್ರಾಕೃತದಲ್ಲಿ ಕಂನಾಡವರ ಪ್ರಭಾವವು ಕಾಣುವಂತೆ, ಕಂನಾಡವರ ಮೇಲೆ ಪ್ರಾಕೃತದ ಪರಿಣಾಮವೂ, ತುಂಬ ಆಗಿದೆ. ಕಂನುಡಿಯೊಳಗಿನ ತದ್ಭವ ಪ್ರಕರಣವು ಸುಮಾರಾಗಿ ಒಂದು ಪ್ರಾಕೃತ ವ್ಯಾಕರಣವೆ ಆಗಿದೆ.

ಜನಗಳ ಹುಟ್ಟುಭಾಷೆ ಒಂದು; ಲೌಕಿಕ ಮಹತ್ವಕ್ಕಾಗಿ ಕಲಿತು ಆಡಬೇಕಾದ ಭಾಷೆ ಇನ್ನೊಂದು; ಹೀಗೆ ಎರಡು ಭಾಷೆಗಳನ್ನು ಬಳಸುವ ಪ್ರಸಂಗಗಳು ಹಲವು ಬಾರಿ ಉಂಟಾಗುತ್ತವೆ. ಈ ದ್ವಿಭಾಷೆಗಳ ಅಭ್ಯಾಸವು ಜನಗಳ ವಿಚಾರ ವಿಕಾಸಾದಿಗಳ ದೃಷ್ಟಿಯಿಂದ ಅವಶ್ಯಕವಾದರೂ ಆ ಜನಗಳು ಅದರಿಂದ ಒಂದು ಗಂಡಾಂತರಕ್ಕೂ ಈಡಾಗುವರು. ಹೊಸದಾಗಿ ಕಲಿಯಬೇಕಾದ ಭಾಷೆಯಲ್ಲಿ ನೈಪುಣ್ಯವನ್ನು ಸಂಪಾದಿಸುವ ಅವಶ್ಯಕತೆ, ಆಮಿಷ, ಮೋಹಗಳು ಹೆಚ್ಚುಯಿದ್ದಷ್ಟು ತನ್ನ ಮೊದಲಿನ ಭಾಷೆಯ ಮೇಲಿನ ಮಮತೆಯು ಕಡಿಮೆಯಾಗುವುದು. ಆ ಪರಭಾಷೆಗೆ ಸಾಮಾಜಿಕ, ರಾಜಕೀಯ ಅಥವಾ ಧಾರ್ಮಿಕ ಮಹತ್ವ, ಪ್ರತಿಷ್ಠೆಗಳಿದ್ದರಂತೂ ತೀರಿಯೆ ಹೋಯಿತು. ಅಂತಹ ಎಡೆಗಳಲ್ಲಿ ಆ ಪರಕೀಯ ಭಾಷೆಯೇ ಬೇಗನೆ ಆ ಜನಗಳ ಸ್ವಕೀಯ ಭಾಷೆಯಂತೆ ಆಗುವಲ್ಲಿ ಸಂದೇಹವಿಲ್ಲ.

ಯಾದವರಲ್ಲಿ ವ್ರಜಭಾಷೆಯು ಪ್ರಾಶಸ್ತ್ಯವನ್ನು ಪಡೆಯಲು ಇದುವೆ ಮುಖ್ಯಕಾರಣ. ಸಂಸ್ಕೃತ ಭಾಷೆಗೆ ಪ್ರಥಮಸ್ಥಾನ; ಸಂಸ್ಕೃತವು ಅಸಾಧ್ಯವಾದಾಗ ಪ್ರಾಕೃತವು ಅಷ್ಟೇ ಪವಿತ್ರವೂ, ಮಹತ್ವದ್ದೂ ಎನಿಸುವುದು. ಈ ಮನೋಭೂಮಿಕೆಯಲ್ಲಿ ಈಗಲೂ ವಿಶೇಷ ವ್ಯತ್ಯಾಸವಾಗಿಲ್ಲ. ಜೈನರು, ಬ್ರಾಹ್ಮಣಾದಿಗಳ ಪರಂಪರೆ, ರೂಢಿಗಳಲ್ಲಿ ಈ ಮಾತನ್ನು ಮನಗಾಣಬಹುದಾಗಿದೆ. ಮಾಧ್ವ ಉತ್ತರಾದಿಮಠದ ಪಂಚಾಂಗವು ಕಂನುಡಿಯಲ್ಲಿದ್ದರೂ ಕೊನೆಗೆ ದೇವನಾಗರಿ ಲಿಪಿಯಲ್ಲಾದರೂ ಅಚ್ಚಾಗಲೇಬೇಕು!

ದಕ್ಷಿಣಾಪಥದಲ್ಲಿ ಸಂಸ್ಕೃತದಂತೆ ಪ್ರಾಕೃತದ ಅಭ್ಯಾಸವೂ ಹಲವೆಡೆಗೆ ನಡೆಯುತ್ತಿತ್ತು. ಪ್ರಾಕೃತದ ಹೊಟ್ಟೆಯಿಂದಲೆ ಮುಂದೆ ಮರ್ಹಾಟಿಯು ಹುಟ್ಟಿತು. ಹಟ್ಟಿಕಾರರು ಸಂಸ್ಕೃತವನ್ನು ಸ್ವೀಕರಿಸುವಲ್ಲಿ ವ್ರಜ ಪ್ರಾಕೃತವು ಹುಟ್ಟಿಕೊಂಡಂತೆ, ಸಂಸ್ಕೃತ, ಪ್ರಾಕೃತ ಭಾಷಾಭಿಜ್ಞರು ಕಲಿತು ಆಡಲಾರಂಭಿಸಿದ ಈ ನಾಡನುಡಿ ಕಂನುಡಿಯ ರೂಪಗೊಂಡಿತು. ಕಂದಮಿಳ ವರ್ಗದ ಮೂಲ ಭಾಷೆಯಿಂದ ಬದಲಾವಣೆ ಹೊಂದಿ ಸ್ವತಂತ್ರವಾಗಿ ಬೆಳೆದುಕೊಂಡಿತು. ಭಾಷೆಯಲ್ಲಿ, ಸಂಸ್ಕೃತ ಶಬ್ದಗಳ ಪರಿಣಾಮದಿಂದ ಮಹಾಪ್ರಾಣಾದಿ ಹೊಸ ಸ್ವರ, ವ್ಯಂಜನಗಳು ಬಂದು ಸೇರಿದುವು. ಹೊಸ ಭಾಷೆಯು ಜನ್ಮತಾಳಲಾರಂಭಿಸಿತು.

ಆರಂಭದಲ್ಲಿ ತದ್ಭವಗಳು ಹೆಚ್ಚು. ಏಕೆಂದರೆ ಅಂದಿನವರೆಗೆ ಸಂಸ್ಕೃತ ಶಬ್ದಗಳನ್ನು ಇದ್ದಕಿದ್ದಂತೆ ಉಚ್ಚರಿಸುವುದೆ ಸಾಧ್ಯವಿದ್ದಿಲ್ಲ ಕಂನಾಡ ಬಾಯಿಂದ—ತಮ್ಮ ಸೊಲ್ಲಿನಿಂದ ಸಂಸ್ಕೃತವನ್ನು ಆಡುತ್ತಿದ್ದರು. ತ್ರೈಲಿವೆನ್ನುವುದಕ್ಕೆ ಆಗದೆ ಅದು ತೆಲ್ಲವೆಂದು ಮಾರ್ಪಡುತ್ತಿದ್ದಿತು. 'ತೆಲಗಿ' ಎಂಬ ಊರು ವಿಜಾಪೂರ ಜಿಲ್ಹೆಯಲ್ಲಿದೆ. 'ಸುವರ್ಣ'ವೆಂಬುದು 'ಸೊನ್ನ'ವಾಗುತ್ತಿತ್ತು. ಸೊನ್ನ, ಸೊನ್ನಲಾಪುರವೆಂಬ ಊರುಗಳು ಈ ಬಗೆಯ ಉಚ್ಚಾರವು ನಮ್ಮ ನಾಡವರಲ್ಲಿ ಒಂದು ಕಾಲಕ್ಕೆ ಇದ್ದುದಕ್ಕೆ ಸಾಕ್ಷಿ. ಈ ಕಾರಣದಿಂದ ಪ್ರಾಕೃತದ ವ್ಯಾಖ್ಯೆಯನ್ನು ಹೀಗೆ ಮಾಡಬಹುದಾಗಿದೆ. ಅಂದು ಕಂನಾಡ ಮೊದಲಿಗರ—ಹಟ್ಟಿಕಾರ ಯದು-ತುರ್ವರ ಸೊಲ್ಲಿನಿಂದ ಮಾರ್ಪಟ್ಟ ಸಂಸ್ಕೃತವೇ ಪ್ರಾಕೃತವೆಂದು ಹೆಸರುಗೊಂಡಿತು. ಗೋವಳರಾದ ಯದುತುರ್ವರೆಂದರೆ ಸುಶಿಕ್ಷಿತರಲ್ಲ. ಸಾಮಾನ್ಯ ಜನ. ಪ್ರಾಕೃತ ಜನ. ಆದುದರಿಂದಲೆ ಆ ಭಾಷೆಗೂ ಪ್ರಾಕೃತವೆಂಬ ಹೆಸರು ಬಂದಿತು.

ಕಂನುಡಿಯಲ್ಲಿ ತೆಲ್ಲ, ಪಿತ್ಥ, (ಪಿತ್ಥೆ), ಸೊಸ್ನ, ಗಬ್ಬ ಮೊದಲಾದ ಅಚ್ಚ ಪ್ರಾಕೃತಶಬ್ದಗಳು ಒಳಕೆಯಲ್ಲಿವೆ. ಆದರೆ ಪ್ರಾಕೃತದ ಮಗಳೆಂದು ನಿಶ್ಚಿತವಾಗಿರುವ ಮರ್ಹಾಟಿಯಲ್ಲಿ ತೇಲ, ಪೀತ, ಸೋನೆ, ಗಾಭ ಮೊದಲಾದ ಒಂದು ಮುಂದಿನ ಅವಸ್ಥೆಯ ಪದಗಳು ರೂಢವಾಗಿವೆ. ಮರ್ಹಾಟಿಯ ತಾಯ್ನುಡಿಯು (ಪ್ರಾಕೃತವು) ಇಲ್ಲಿ ಕಂನುಡಿಯಲ್ಲಿ ಹುದುಗಿಕೊಂಡಿರುವುದನ್ನು ನಮ್ಮವರು ಗಮನಿಸಲೆ ಇಲ್ಲ! ಗಮನಿಸಿಯೂ ಇಲ್ಲ. ಇದನ್ನು ಸರಿಯಾಗಿ ತಿಳಿದುಕೊಳ್ಳದುದರಿಂದಲೆ ಕಂನುಡಿ ಮತ್ತು ಮರ್ಹಾಟಿಗಳ ತೊಡಕು ಹಲವರಿಗೆ ದಿಗ್ಭ್ರಾಂತಿಯನ್ನುಂಟುಮಾಡುತ್ತಲಿದೆ.

ಯದು-ತುರ್ವರ ಹಟ್ಟಿಗಳಿದ್ದ ಯಮುನಾ ನದಿಯ ಹತ್ತಿರದ ಊರ ಹೆಸರು ಮಥುರಾ! ಇದರೊಳಗಿನ ಕೊನೆಯ ಪದವು ಊರಾ, ಊರು ಎಂಬುದಾಗಿದೆ. ಇದಕ್ಕೆ ಸಾಧಾರಣವಾಗಿ ಸಮಾನ ಉಚ್ಚಾರದ ಮಾತ್ತೂರು ಮತ್ತೂರುಗಳನ್ನು ಹೋಲಿಸಿ ನೋಡಬೇಕು. (ಹತ್ತಿ)ಮತ್ತೂರು. ಮಾತ್ತೂರುಗಳು ನಮ್ಮ ಕಡೆಗೆ ಇವೆ. ಮೂತ್ತೂರು ಅಥವಾ ಮತ್ತೂರು ಮಥುರಾ ಆಗಿರುವುದು ಅಸಂಭವವಲ್ಲ. ಮಾ ಎಂದರೆ ಪ್ರಾಣಿಗಳು, ದನಗಳು ಎಂಬರ್ಥದ ಪದವೊಂದು ತಮಿಳಿನಲ್ಲಿದೆ. ಮಥುರಾ— ಮಾತ್ತೂರು ಎಂದರೆ (ದನಗಳ) ಹಟ್ಟಿ ಎಂಬರ್ಥವೆ ಇರಬಹುದೆಂದು ತೋರುತ್ತದೆ. ವೃಂದಾವನ; ವೃಂದವೆಂದರೆ ಸಮೂಹ, ಗುಂಪು, ಗುಂಪುಗೂಡಿ ಇರುವ ಗೌಳಿಗರ ನೆಲೆಗೆ ವೃಂದಾವನವೆಂಬ ಹೆಸರು ಬಂದಿರಬೇಕು. ವೃಂದಾ ಎಂದು ತುಳಸಿಗೂ ಹೆಸರಿದೆ. ವೃಂದಾವನವೆಂದರೆ ತುಳಸಿಯ ಬನವೆಂದು ಅರ್ಥವಾಗುವುದು. ಆದರೆ ಅಲ್ಲಿ ಹುಟ್ಟಿದ 'ವ್ರಜ' ಭಾಷೆಯ ಹೆಸರಿನಿಂದ ವೃಂದಾವನಕ್ಕೆ ಗುಂಪು ಎಂಬರ್ಥವೆ ಹೆಚ್ಚು ಸಮಂಜಸವೆಂದು ಹೇಳಬೇಕಾಗುತ್ತದೆ. ಒನಹಟ್ಟಿ ಎಂಬೀ ಬಗೆಯ ಕಂನಾಡಿನ ಊರುಗಳನ್ನು ಇಲ್ಲಿ ಹೋಲಿಸಿ ನೋಡಬಹುದು.

ಮತ್ತೂರು ಅಥವಾ ಮಥುರೆಯ ಪಕ್ಕದಲ್ಲಿ ಹರಿವ ನದಿಗೆ ಯಮುನೆಗೆ ಕಾಳಿಂದೀಯೆಂಬ ಇನ್ನೊಂದು ಹೆಸರಿದೆ. ಆ ನದಿಯ ನೀರು ಕರಿದು. ಯಮುನೆಗೆ ಕಾಳೀಯೆಂಬ ಹೆಸರು ಕರಿದು ಎಂಬ ಕಂನುಡಿಯಿಂದ ಬಂದುದೆನ್ನಲು ಆಸ್ಪದವಿದೆ.

ಇಲ್ಲಿ ಸಮೀಪದಲ್ಲಿಯೆ ಇರುವ ಗ್ವಾಲೇರಿಯುಂಟು. ಗ್ವಾಲೇರಿಯ ಹೆಸರು ಗೋಪಾಲಿಕ ಎಂಬುದಾಗಿದ್ದಿತೆಂದು ಡಾ. ಹಲ್ಯಸ ಅಭಿಪ್ರಾಯವಿದೆ; ಗೋಪಾದ್ರಿಯೆಂದು ಕಿಲ್ಹಾರ್ನನು ಹೇಳುವನು (I A. XV. p. 202, 35, 41, 43) ಗೋಪಾದ್ರಿಯು ಗ್ವಾಲೇರಿಯಾಯಿತೆಂದು ಬಗೆಯುವುದಕ್ಕಿಂತ ಗೌಳಿ+ಏರಿ ಎಂದು ಗ್ರಹಿಸುವುದು ಹೆಚ್ಚು ಯೋಗ್ಯವೆಂದು ನನ್ನ ತಿಳುವಳಿಕೆ. ಏಕೆಂದರೆ ಹಟ್ಟಿ, ಊರು ಪಾಡಿಗಳು ಇರುವಲ್ಲಿ 'ಏರಿ' ಇರುವುದು ಅಸಂಭವವಲ್ಲ. ಇಂದೂರು ಹೋಳಕರರ ರಾಜಧಾನಿ. ಗ್ವಾಲೇರಿ-ಗೌಳಿಯೇರಿ ಸಿಂದರ ರಾಜಧಾನಿ. ಈ ಸಿಂದರು ಪಾಟೀಲರು. ಮಹಾದಾಜಿ ಸಿಂದನು ಪಾಟೀಲಬುವಾ ಎಂದು ಹೆಸರಾಗಿದ್ದನು.

ಹೀಗಿದು ಉತ್ತರದಲ್ಲಿ ಕಂಡುಬಂದರೆ ದಕ್ಷಿಣದಲ್ಲಿ ಇದಕ್ಕೆ ಸರಿಯಾಗಿ ತಿರುವುಮುರುವು! ಬೈಲಹೊಂಗಲ, ಚಿಂಚಲಿ, ಅಂಬೋಲಿ, ಬೋರಗಾವ, ಭೋಪಾಳಪುರ (ಧಾ.); ದೂಧಸಿ (ವಿ.) ದೂಧಿಹಾಳ; ಗೂಳವಾಡಿ; ತಿಳಗೂಳ; ಚಾರವಾಡಿ; ಸಾತೂರು; ಎಕ್ಕುಂಡಿ; ವ್ಹೈಸಪಳ್ಳಿ, ವ್ಹೈಸಊರು, ಸೋನಾರಹಳ್ಳಿ (ಸಾಲೆಂ)! ಅಚ್ಚ ಸಂಸ್ಕೃತ ಪದಗಳ ಊರುಗಳಂತೂ ಸರಿ. ಆದರೆ ಅಂಬಾ, ಚಿಂಚ, ಬೋರ, ಭೊಪಳಾ, ಧೂಧ, ತೀಳ, ಗೂಳ ಮುಂತಾದ ದಿನಸಿನ ಹೆಸರುಗಳು, ಎಕ್ಕ, ಚಾರ, ಸಾತ ಮುಂತಾದ ಅಂಕಿಗಳೂ ವ್ಹೈಸ, ಬೈಲ ಮೊದಲಾದ ಪ್ರಾಣಿಗಳ ಹೆಸರುಗಳೂ ಸೋನಾರ ಮೊದಲಾದ ವೃತ್ತಿವಾಚಕ ನಾಮಪದಗಳೂ ಸಾಲೆಂದ ವರೆಗೂ ಹಬ್ಬಿವೆ! ಇವು ಸಂಸ್ಕೃತವಲ್ಲ. ಪ್ರಾಕೃತಪದಗಳೆಂದು ಕೆಲರು ಸಮಾಧಾನಪಟ್ಟುಕೊಳ್ಳಬಹುದು ಆದರೆ ಇವನ್ನು ಮರಾಠಿಯ ಮಾತುಗಳೆಂದು ಒಪ್ಪಿಕೊಳ್ಳುವುದೇ ಹೆಚ್ಚು ನ್ಯಾಯವಾಗಿದೆ. ಇವು ಮರಾಠಿ ಎಂದು ಒಪ್ಪಿಕೊಂಡರೆ 'ಆರಿಯಹಳ್ಳಿ'ಗಳು ಈ ಭಾಗಗಳಲ್ಲಿ ಕಾಣಿಸಿಕೊಳ್ಳುತ್ತಿರುವುದರ ಅರ್ಥವಾಗುವುದು.

ಮೇಲೆ ಸೂಚಿಸಿದಂತಹ ಪದ-ಪ್ರಯೋಗಗಳು ಪ್ರಾಕೃತವೆಂದರೆ ಕೆಲರಿಗೆ ಒಪ್ಪಿಗೆ; ಮರಾಠಿಯೆಂದರೆ ಅಸಮಾಧಾನ! ಪ್ರಾಕೃತದ ಉಚ್ಚಾರಗಳಲ್ಲಿರುವರು ಕಂನುಡಿಯ ಪ್ರಭಾವವು ಕಡಿಮೆಯಾದರೆ ಅದು ಮುಂದೆ ಮರಾಠಿ ಎನಿಸುವುದು. ಕಂನುಡಿಯ ಶಬ್ದಗಳ ಮೊದಲನೆಯ ಭಾಗದ

ಮೇಲೆ ಆಘಾತವಿರುತ್ತದೆ. ಪ್ರಾಕೃತದಲ್ಲೂ ಇದೇ ತೆರನಾಗಿದೆ. ಉದಾ: 'ಅಪ್ಪ; 'ಕಕ್ಕ; 'ವಿಷಯ; 'ಪುಸ್ತಕ ಮುಂ. ಈ ತೆರನಾಗಿ ಮೊದಲನೆಯ ಅಕ್ಷರವನ್ನು ಜೋರಿನಿಂದ ಒಡೆದು ಹೇಳುವ ವಾಡಿಕೆಯ ಮೂಲಕ ದಿವ್ಸ, ಕೆಲ್ಸ, ನಿಷ್ಯ ಎಂಬಂತೆ ಬರೆವವರೂ ಹಳ್ಳಿಗಳಲ್ಲಿ ಉಂಟು. ಸೊನ್ನ, ಚೊಕ್ಕ, ಅಪ್ಪ, ಕಕ್ಕ ಇವುಗಳ ಮೊದಲನೆಯ ಭಾಗದ ಆಘಾತವು ಸಡಲಿ ಕೊನೆಯ ಭಾಗಕ್ಕೆ ಹೋಗಲು ಅದುವೆ ಅರಿಯ ( ಮರ್ಹಾಟಿ ) ಮಾತೆನಿಸುವುದು. ಸೋನ, ಚೋಖ, ಆಬಾ, ಕಾಕಾ ಮುಂ. ಈ ಕಾರಣದಿಂದ ಮೊದಲು ಪ್ರಾಕೃತವೆಂದು ಎನಿಸುತ್ತಿದ್ದುದೆ ಮುಂದೆ ಮರ್ಹಾಟಿಯಾಗಿ ಮಾರ್ಪಡಲು ಬಹಳ ಶ್ರಮಪಡಬೇಕಾಗಲಿಲ್ಲ. ಕೆಲವೊಂದು ಕಾಲಾವಧಿಯ ತರುವಾಯ ಅದು ಆ ರೂಪವನ್ನೂ ತಾಳಿತು.

೧೫ನೆಯ ಶತಮಾನದ ಸುಮಾರಿನ ಕುಮಾರವ್ಯಾಸನು ಇಂತಹ ಪದಗಳನ್ನು ಧಾರಾಳವಾಗಿ ಬಳಸಿದ್ದಾನೆ. ಅವುಗಳ ಪ್ರತಿರೂಪಗಳು ಮರ್ಹಾಟಿಯಲ್ಲಿ ಇವೆ. ಈ ಸುಮಾರಿಗೆ ಮರ್ಹಾಟಿಯು ಗ್ರಂಥಸ್ಥ ಭಾಷೆಯಾಗಿ ಬಳಕೆಯಲ್ಲಿತ್ತು. ಆದಕಾರಣ ಕುಮಾರವ್ಯಾಸನ ಆ ಪದಗಳು ಪ್ರಾಕೃತದುವು ಎಂಬುದು ಸರಿಯಾಗಲಾರದು.

ಅಚ್ಚಕಂನುಡಿಯಲ್ಲಿಯೆ ಬರೆವ ಪ್ರತಿಜ್ಞೆಯನ್ನು ಮಾಡಿ ಕಾವ್ಯವನ್ನು ರಚಿಸಿದ ಆಂಡಯ್ಯನಲ್ಲಿ ಹೇರಳವಾಗಿ ಪ್ರಾಕೃತ ಪದಗಳು ತುಂಬಿಕೊಂಡಿವೆ. ಕಂನುಡಿಯು ಪ್ರಾಕೃತದಿಂದ ಭಿನ್ನವಲ್ಲವೆಂದು ಅಂದಿನ ವಿದ್ವಾಂಸರ ನಂಬುಗೆಯಿದ್ದಿತು. ಈ ಕಾರಣದಿಂದಲೆ ಕಂನುಡಿಯ ಹೊಟ್ಟೆಯಲ್ಲಿ ಮರ್ಹಾಟಿಯು ಪ್ರಾಕೃತದ ಹೆಸರಿನಿಂದ ಸುಖವಾಗಿ ಬೆಳೆದು ದೊಡ್ಡದಾಗಿ ಮುಂದೆ ಜನ್ಮತಾಳಿತು.

ಆಂಡಯ್ಯನು ರಾಹುತರ ವರ್ಣನೆಯಲ್ಲಿ ಅವರಾಡಿದ ಕೆಲವು ಮಾತುಗಳನ್ನು ಉಲ್ಲೇಖಿಸಿದ್ದಾನೆ. 'ಝೂರೇ! ಜಝೂರೆ! ಹಳೂರೇ! ಹೋಹೊ! ಮಝೂ! ಎಂಬುಲಿ ನೆಗೆವನೆಗಂ ಬಿಟ್ಟು ಮಾರಾಂತ ಮೇಲಾಳ್ಗಳನಾಗಳ್ ತಳ್ತುವೊಯ್ದು.. ||೨೭|| ಆಂಡಯ್ಯನ ಕಾಲ ಸು. ೧೨೩೫ ಕ್ರಿ. ಶ.

ಕ್ರಿ. ಶ. ೧೨೦೯ರ ಸುಮಾರಿನ ಜನ್ನನಲ್ಲಿಯೂ ಈ ಬಗೆಯ ವಾಕ್ಯಗಳು

ಬಂದಿವೆ. 'ಊರಿ, ಊತ, ಮಾಗಾ ಬೈಸ ಜಾತೂ ಹಳೂ' (ಅನಂತನಾಥ ಪುರಾಣ.) ಕ್ರಿ. ಶ. ೯೩೨ರ ಸುಮಾರಿನ ಪಂಪ ಮಹಾಕವಿಯು ಅರ್ಜುನನ ಪ್ರಶಂಸೆಯಲ್ಲಿ ದ್ರೋಣನಿಂದ ನುಡಿಸಿದ ನುಡಿಗಳಿವು: 'ಅರೆ, ಹೋಯ ಜ (ಜಾ), ಬಾಪ್ಪು' ಎಂದು ಹರಿಗನಂ ಗುರು ಪೊಗಳ್ದಂ.

ಮರ್ಹಾಟಿಯ ಮೊದಲನೆಯ ಶಾಸನವು ದೊರೆತುದು ಎಲ್ಲಿ? ಶ್ರವಣ ಬೆಳುಗೊಳಲದಲ್ಲಿ! ಕ್ರಿ. ಶ. ೯೭೮ರ ಸುಮಾರಿಗೆ ಆದ ಚಾವುಂಡರಾಯನು ಬರೆಯಿಸಿದ ಶಾಸನ ವಾಕ್ಯಗಳಲ್ಲಿ ಇದೂ ಒಂದು: 'ಚಾವುಂಡರಾಯೇ ಸುತ್ತಾಲೇ ಕರವಿಯಲೇ'.

ಇಂತಿದು ಕಂನಾಡ ತೆಂಕಣದಲ್ಲಿ ಅರಿಯುವಮಾತು; ಮರ್ಹಾಟದ ಉತ್ತ ರದ ತುತ್ತತುದಿಯಲ್ಲಿ ಕಂನುಡಿಯ ಊರು, ಜನ! ಕಂನುಡಿಯ ಹೊಟ್ಟೆ ಯೊಳಗಳಿಂದ ಮರ್ಹಾಟಿಯು ಜನ್ಮತಾಳಿದರೆ, ಮರ್ಹಾಟಿಯಲ್ಲಿ ಕಂನುಡಿಯ ಧಾತುಗಳು! ಈ ಸಂದರ್ಭದಲ್ಲಿ ನ್ಯಾಯಮೂರ್ತಿ ರಾನಡೆಯವರು Rise of Maratha Power ಎಂಬ ತಮ್ಮ ಗ್ರಂಥದಲ್ಲಿ ಬರೆದ ಮಾತುಗಳ ಸತ್ಯತೆಯು ಮನದಟ್ಟಾಗುವುದು;

"The mixture of the two elements (Marathi and Dravidian) is best illustrated by the peculiarities of the (Marathi) language, whose base is Dravidian, but whose structure have been entirely fashioned by Aryan influence."

ಈ ಮೊದಲು ವಿವರಿಸಿದಂತೆ ಹಟ್ಟಿಕಾರರು ಕೃತಿವೀರರು. ಇವರ ವೀರಕೃತಿಗಳನ್ನು ಬರೆವ ಕೆಲಸವನ್ನು ವಹಿಸಿಕೊಂಡವರು ಬೇರೆ. ಅವರು ಆ ಕೃತಿಗಳನ್ನು ಸಂಸ್ಕೃತದಲ್ಲಿ ಬರೆದರು; ಪ್ರಾಕೃತದಲ್ಲಿ ಬರೆದರು. ಕಂನುಡಿ ಯನ್ನು ಕಡೆಗಣಿಸಿದರು. ಕಂನುಡಿಯ ಜನಗಳು ವೇದಕಾಲದಷ್ಟು ಹಳಬ ರಾದರೂ ಅಂದಿನ ಅವರ ಭಾಷೆಯಲ್ಲಿಯೆ ಅವರ ಸಾಹಿತ್ಯವು ಬರಲಿಲ್ಲ. ಅದು ಹೊರಬರಬೇಕಾದರೆ ಕ್ರಿಸ್ತಶಕದ ಮೊದಲ ದಶಕವು ಮೂಡಬೇಕಾಯಿತು! ಈಗ ಕಾಲೇಜುಗಳು, ಮೇಲಣ ನ್ಯಾಯಾಲಯಗಳು ಕಾಯಿದೆ ಮಂಡಲಗಳು ಮೊದಲಾದುವುಗಳ ವ್ಯವಹಾರವೆಲ್ಲವೂ ಇಂಗ್ರೇಜಿಯಲ್ಲಿ ನಡೆದಂತೆ ಅಂದು ಸಂಸ್ಕೃತ, ಪ್ರಾಕೃತಗಳಲ್ಲಿ ಕೆಲಸ ಸಾಗುತ್ತಿದ್ದಿತು. ಕೋರ್ಟಿನಲ್ಲಿ ದೇಶ

ಭಾಷೆಯಲ್ಲಿ ಸಾಕ್ಷಿ ನುಡಿದರೂ ಅದನ್ನು ಇಂಗ್ರೇಜಿಯಲ್ಲಿ ಬರೆದುಕೊಳ್ಳುವರು. ಸಂಸ್ಕೃತ ಭಾಷೆಯಲ್ಲಿಯೆ ಕುರುವಂಶದ ಕತೆಯುಂಟೆಂದು ಅವರ ಮಾತು ಸಂಸ್ಕೃತವೇ ಆಗಿದ್ದಿತೆಂದು ತರ್ಕಿಸುವುದು ಅಸಮರ್ಪಕವಾಗಿದೆ. ಭಾರತದಲ್ಲೆಯೆ ಒಂದೆಡೆಗೆ ಓಲಗದ ವರ್ಣನೆಯಲ್ಲಿ 'ಅಲ್ಲಿ ನೆರೆದ ರಾಜರು ನಾನಾದೇಶೀಯ ತಮ್ಮ ತಮ್ಮ ಭಾಷೆಗಳಲ್ಲಿ ಮಾತನಾಡುತ್ತಿದ್ದರು' ಎಂದು ಹೇಳಿದೆ.

ಆರ್ಯರ ಪ್ರಭಾವಕ್ಕೆ ಒಳಗಾಗಿ ಹಟ್ಟಿಕಾರರು—ಯದುತುರ್ವರು ಸಂಸ್ಕೃತ, ಪ್ರಾಕೃತಗಳಿಗೆ ಮನಸೋತರು. ಅದರ ಪರಿಣಾಮವೆ ಪ್ರಾಕೃತ. ಕಂನುಡಿಯಲ್ಲಿ ಮಹಾಪ್ರಾಣಾದಿಗಳ ಸೇರ್ಪಡೆ. ಮರ್ಹಾಟಿಯೆಂಬುದು ಈ ಬಗೆಯ ಪರಿವರ್ತನದಲ್ಲಿ ಹುಟ್ಟಿಕೊಂಡ ಆನುಷಂಗಿಕ ಫಲ. ಆರಂಭದಲ್ಲಿ ಮರ್ಹಾಟಿಯನ್ನು ಆಡುವ ಜನ ಪರ್ಹಾಟದ ಕಡೆಗೆ ವಿಶೇಷವಾಗಿದ್ದರೂ ಕಂನಾಡಿನ ಉಳಿದ ಭಾಗಗಳಲ್ಲೂ ಅದು ರೂಪಗೊಳ್ಳುತ್ತಲೆ ಇದ್ದಿತು. ಯಾದವರಲ್ಲಿ ಒಳಬಣಗಳಾಗಿ ಸೇವುಣರೂ ಹೊಯ್ಸಳರೂ ಎದುರಾಳಿಗಳಾಗಿ ನಿಲ್ಲದಿದ್ದರೆ ಇಡಿಯ ಕಂನಾಡೆ ಮರ್ಹಾಟವಾಗುವ ಹೆದರಿಕೆಯಿತ್ತು. ಶ್ರವಣಬೆಳುಗುಳದ ಶಾಸನ, ಪಂಪ, ಜನ್ನ, ಆಂಡಯ್ಯಾದಿಗಳು ಒಕ್ಕಣಿಸಿದ ಆರಿಯ ಮಾತುಗಳು ಇದರ ಸೂಚನೆಯೆ ಆಗಿದೆ.

ಆದರೆ ೧೨ನೆಯ ಶತಮಾನದ ಸೇವುಣರ ಮತ್ತು ಹೊಯ್ಸಳರ ರಾಜಕೀಯ ಹೋರಟೆಯಲ್ಲಿ ಒಬ್ಬರು ಹೆಚ್ಚಾಗಿ ಆರಿಯರ ಬೆಂಬಲದಿಂದಲೂ ಇನ್ನೊಬ್ಬರು ಮುಖ್ಯವಾಗಿ ಕಂನಾಡವರ ನೆರವಿನಿಂದಲೂ ತಮ್ಮ ಸಿಂಹಾಸನಗಳನ್ನು ಉಳಿಸಿಕೊಳ್ಳಬೇಕಾಯಿತು. ಈ ಕಾರಣದಿಂದ ಮರ್ಹಾಟಿಗೆ ತನ್ನ ಒಂದು ಸ್ವಂತದ ರಾಜ್ಯವೆ ದೊರೆತಂತಾಯಿತು. ಇದಕ್ಕೂ ಮೊದಲು ಮರ್ಹಾಟಿಗೆ ಪ್ರತ್ಯಕ್ಷವಾಗಿ ಎಲ್ಲಿಯೂ ರಾಜಾಶ್ರಯವೆಂಬುದು ಇದ್ದಿಲ್ಲ. ಸೇವುಣ ಯಾದವರಲ್ಲಿ ಮಹಾದೇವರಾಯನ ವರೆಗೂ ಓಲಗದಲ್ಲಿ ಕಂನುಡಿಯೆ ನಡೆಯುತ್ತಿದ್ದಿತು. ಧಾಡಿಯಪ್ಪ ಮೊದಲಾದ ಆ ಮನೆತನದ ಹೆಸರುಗಳು, ಮಲ್ಲಿಸೆಟ್ಟಿ ಮೊದಲಾದ ಓಲಗದವರ ಹೆಸರುಗಳೂ ಅಲ್ಲಿಯ ಕಂನುಡಿಯ ಪ್ರಭಾವವನ್ನು ಹೇಳುತ್ತವೆ.

ಆ ಕಾಲದ ಮರ್ಹಾಟಿಭಾಷೆಯ ಅಧ್ವರ್ಯುಗಳಾಗಿ ಶುಕ್ಲ ಯಜು

ವೇದಿಗಳು, ಮುಖ್ಯವಾಗಿ ಮಾಧ್ಯಂದಿನ ಬ್ರಾಹ್ಮಣರು ಬಹಳ ಮಹತ್ವದ ಕಾರ್ಯ ಜರುಗಿಸಿದ್ದಾಗಿ ಡಾ. ಇರಾವತಿಬಾಯಿ ಕರ್ವೇಯವರು ಕಂಡು ಹಿಡಿದಿರುವರು. ಜ್ಞಾನೇಶ್ವರಾದಿ ಅಂದಿನ ಮೇಧಾವಿ ನೇತಾರರೆಲ್ಲ ಈ ಶಾಖೆಯವರಾಗಿದ್ದರು.

ಇತ್ತ, ಹೊಯ್ಸಳ ಕರ್ಣಾಟರೆಂದು ಹೆಸರಾಂತ ಬ್ರಾಹ್ಮಣರು ಕೃಷ್ಣ ಯಜುರ್ವೇದಿಗಳಾಗಿರುವುದು ಬಹಳ ವಿಚಾರಾರ್ಹವಾಗಿದೆ. 'ಕನ್ನಡ' ಬ್ರಾಹ್ಮಣರೆಂದು ಶಾಸನದಿಂದ ನಿಶ್ಚಿತವಾಗಿರುವ ಸಾಯಣ ಮಾಧವರೂ ಕೃಷ್ಣಯಜುರ್ವೇದಿಗಳೇ.

೧೩ನೇ ಶತಮಾನದಲ್ಲಿ ಯಜುರ್ವೇದಿಗಳು ಸಮಾಜದ ಮುಂದಾಳುಗಳಾಗಿದ್ದರೆಂದೂ ಅವರ ಎರಡು ಪಂಗಡಗಳಲ್ಲಿ ಒಬ್ಬರು ಮಹಾರಾಷ್ಟ್ರವನ್ನು ಕಟ್ಟುವುದಕ್ಕೂ ಇನ್ನೊಬ್ಬರು ಕರ್ಣಾಟದ ಪುನರುಜ್ಜೀವನಕ್ಕೂ ಕಾರಣರಾದರೆಂದೂ ಕಂಡು ಬರುತ್ತದೆ. ಋಗ್ವೇದಿಗಳು ಇವರನ್ನು ಹಿಂದಿಕ್ಕಿ ೧೬–೧೭ನೆಯ ಶತಮಾನದಿಂದ ಮುಂದೆ ಬಂದರೆಂದು ತೋರುತ್ತದೆ. ನಮ್ಮ ನಾಡಿನ ಹಳೆಯ ವತನದಾರ ಮನೆತನದ ಕುಲಕರ್ಣಿ, ನಾಡಗೌಡ ಮೊದಲಾದ ಮನೆತನಗಳು ಯಜುರ್ವೇದಿಗಳವೆ ಆಗಿವೆ. ಹಳಬರನ್ನು ಹಿಂದಿಕ್ಕಿ ಹೊಸಬರ ಚೆಲ್ಲಾಟ. ಯಜುರ್ವೇದಿಗಳು ಹಿಂದುಳಿದರು; ಋಗ್ವೇದಿಗಳು ಸಮಾಜದಲ್ಲಿ ಗಣ್ಯರೆನಿಸಿದರು.

ಕಂನಾಡ ಮೊದಲಿಗರು ಬಹಳ ಪುರಾತನದಿಂದಲೂ ಆರ್ಯೀಕರಣಕ್ಕೆ ಮೈಗೊಟ್ಟುದರಿಂದ ಈ ನಾಡಿಗರಲ್ಲಿ ತಮ್ಮ ಭಾಷೆಯ ಅಭಿಮಾನವು ವಿಶೇಷವಾಗಿರಲಿಲ್ಲ. ರಾಷ್ಟ್ರಕೂಟರೂ ಚಾಲುಕ್ಯಾದಿಗಳಿಗೆ ಔತ್ತರೇಯರ ವಿವಾಹಾದಿ ಸಂಬಂಧಗಳು ಉಂಟಾಗುತ್ತಿದ್ದುವು. ಇದರಿಂದ ಅರಮನೆಯಲ್ಲಿ ಪ್ರಾಕೃತ ಎಂದರೆ ಮರ್‍ಹಾಟಿಯ ಪ್ರಾಥಮಿಕರೂಪಕ್ಕೆ ಇಂಬು ದೊರೆಯುತ್ತಿತ್ತು. ಯಾದವರು ಜಾಧವರು, ಮರ್‍ಹಾಟದ ಆಧಾರಸ್ತಂಭವೆನಿಸಿದರು. ಪುರಾತನ ಕಂನಾಡ ಯದುಗಳ ಅವಶೇಷವೆಂದು ಮೈಸೂರ ಒಡೆಯರ ಒಂದು ಮನೆತನವು ಮಾತ್ರ ಉಳಿದು ಕೊಂಡಿದೆ. ಹೊಯ್ಸಳವೆಂಬ ಅಡ್ಡ ಹೆಸರಿನವರು ಭೋಸಲೆಗಳೆಂದು ಡಾ. ಸಾಲೆತ್ತೂರರ ಅಭಿಪ್ರಾಯವಿದೆ. ಬಳ್ಳಾರಿ ಜಿಲ್ಹೆಯು ಜನ್ಮಭೂಮಿಯಾದ ಸಾತವಾಹನರು ಪ್ರಾಕೃತವನ್ನೇ

ಮುಖ್ಯ ಭಾಷೆಯಾಗಿ ಸ್ವೀಕರಿಸಿದರು. ಸಿಂದವಾಡಿ ಸಾಸಿರವೆಂದು ಕೆಚ್ಚ ಕಂನಾಡಿನಲ್ಲಾಳಿದ ಸಿಂದರ ಮನೆತನಗಳ ಅಡ್ಡಹೆಸರು ನಮ್ಮಲ್ಲಿ ದುರ್ಲಭ. ಸಿಂಧೆಗಳೆಲ್ಲ ಮರ್ಹಾಟರೇ! ಸಾಮಂತರು, ಮಾನೆಗಳೂ ಪವಿಗಳೂ ಮರ್ಹಾಟರೇ! ಚಾಲುಕ್ಯರ ಹೆಸರಿಗೆ ಹೋಲುವ ಸೋಳುಂಕಿಗಳು ಆರಿಯರಲ್ಲಿ! ಕದಂಬರ ಹೆಸರಿಗೆ ಸಮೀಪದ ಕದಮಗಳು ಹಾಸಗಲ್ಲ, ಹಲಸಿಗೆ, ಗೋವೆ ಬನವಾಸಿ ದೇಶದಲ್ಲಿ ಕನ್ನಾಡವರಾಗಿ ಇರಬೇಕಲ್ಲವೇ? ಆದರೆ ಇಲ್ಲಿ ಕೆಲವರಿದ್ದರೂ ಅವರೆಲ್ಲ ಆರಿಯರೆಂದೇ ತಿಳುವಳಿಕೆ!

ರಾಷ್ಟ್ರಿಕರು ಕಂನಾಡವರಷ್ಟೇ; ರಟ್ಟವೆಂಬುದು ರಾಷ್ಟ್ರಿಕದ ತದ್ಭವವು; ಆದಕಾರಣ ರಟ್ಟರು ರಾಷ್ಟ್ರಿಕರೂ ಒಂದೇ. ರಡ್ಡಿ ಎಂಬ ಪದವು ರಟ್ಟದಿಂದಲೇ ಬಂದುದಾಗಿದೆ. ತೆಲುಗಿನ 'ರೆಡ್ಡಿ' ಎಂಬ ಪದವು ರಡ್ಡಿಯಿಂದ ನಿಷ್ಪನ್ನವಾಗಿದೆ. ರೆಡ್ಡಿಯೆಂಬುದು ಸ್ವತಂತ್ರಪದವಲ್ಲ. ಅಥವಾ ಕೆಲವರು ಎಣಿಸಿದಂತೆ ರಾಜನ್ ಶಬ್ದದಿಂದ ನಿಷ್ಪನ್ನವಾದುದೂ ಅಲ್ಲ. ರಾಷ್ಟ್ರಿಕ—ರಟ್ಟ—ರಡ್ಡಿ—ರೆಡ್ಡಿ. ತೆಲುಗು ಪ್ರೊಫೆಸರ ಡಾ. ಸಿ. ನಾರಾಯಣರಾಯರೂ ಇದೇ ಅಭಿಪ್ರಾಯದವರಾಗಿದ್ದಾರೆ. ಆಂಧ್ರ ಇತಿಹಾಸ ಸಂಶೋಧನ ಪತ್ರಿಕೆಯ ೧೯೩೩ನೆಯ ಇಸವಿಯ ಸಂಪುಟದಲ್ಲಿ ಈ ವಿಷಯವಾಗಿ ಒಂದು ಲೇಖನವು ಬಂದಿರುವದಾಗಿಯೂ ತಿಳಿಯುತ್ತದೆ.

ರಾಷ್ಟ್ರಿಕರು, ಮುಂದೆ ಯಾರು ರಾಷ್ಟ್ರಕೂಟರೆಂದು ಖ್ಯಾತಿ ಪಡೆದರೊ ಆ ಜನ ಕಂನಾಡಿನವರು; ಕಂನುಡಿಗೆ ಪ್ರೋತ್ಸಾಹಿಸಿದವರೆಂದು ಡಾ. ಆಳತೇಕರರು ಬರೆಯುತ್ತಾರೆ. ಆದರೆ ಆ ರಾಷ್ಟ್ರಿಕರ ಸಂತಾನವೆನಿಸಿದ ರೆಡ್ಡಿಗಳು ಇಂದು ತೆಲುಗಿನ ಅಭಿಮಾನಿಗಳು! ಇಷ್ಟೇ ಅಲ್ಲ; ಕಂನಾಡಿನಲ್ಲಿರುವ ರಡ್ಡಿ ಜನಗಳು ಕೂಡ ತಾವು ತೆಲುಗರೇನೋ ಎಂಬ ಭ್ರಾಂತಿಯಲ್ಲಿರುವದು ಈ ನಾಡಿನ ದುರ್ದೈವದ ಪರಮಾವಧಿಯಲ್ಲವೆ? ರಟ್ಟರು ಎಂದೂ ತೆಲುಗರಾಗಿರಲಾರರು. ತೆಲುಗಿನ ಭಾಷೆಸಾಹಿತ್ಯದಲ್ಲಿ ರಟ್ಟಜನದ ಹೆಸರಿನ ಸುಳಿವೇ ಇಲ್ಲ. ಯಾವ ಜನದ ಹೆಸರೆ ಆ ನಾಡಿನ ಪ್ರಾಚೀನ ಸಾಹಿತ್ಯದಲ್ಲಿ ದೊರೆಯುವದಿಲ್ಲವೊ ಅವರು ಆ ದೇಶದವರೆಂದು ಹೇಳುವುದಕ್ಕಾದೀತೆ? ರಟ್ಟವೆಂಬುದು ಕಂನಾಡ ಶಾಸನಗಳಲ್ಲಿದೆ. 'ರಟ್ಟಾಖ್ಯಾ ಕರ್ಣಾಟೀ' ಎಂದು ರಾಜತರಂಗಿಣಿಯಲ್ಲಿ ಕೂಡ ಉಲ್ಲೇಖವುಂಟು. ರಟ್ಟ ಮತವೆಂಬ ಪದ್ಧತಿಯು ಕೂಡ

ಆಧುನಿಕ ಕಾಲದವರೆಗೆ ದೊರೆಯುವುದು ರಟ್ವಾಡಿ, ರಟ್ಟೇಹಳ್ಳಿಗಳು ನಮ್ಮಲ್ಲಿವೆ. ರಟ್ಟಶಬ್ದದ ಮುಂದಿನ ರೂಪ ರಡ್ಡಿ; ರೆಡ್ಡಿಯೆಂಬುದು ಇನ್ನೂ ಒಂದು ಮುಂದಿನ ಕಾಲದ ಮಾರ್ಪಾಟ. ತೆಲುಗಿನಲ್ಲಿ ತಮಿಳಿನಲ್ಲ ರಡ್ಡಿಯಿಲ್ಲ. ರೆಡ್ಡಿಯಿದೆ. ಇದರಿಂದ ಈ ಜನಗಳು ಕಂನುಡಿಯನ್ನು ಬಿಟ್ಟು ತೆಲುಗರಾದುದು ಈ ಕೊನೆಯ ಮಾರ್ಪಾಟಿನ ಕಾಲದಲ್ಲಿ; ಆರಂಭದಿಂದಲೂ ಅಲ್ಲವೆಂದು ನಿರ್ಣಯಿಸಲು ಅವಕಾಶವಿದೆ.

ರಾಷ್ಟ್ರಕರ ಒಂದು ದೊಡ್ಡ ಶಾಖೆಯು ರೆಡ್ಡಿಗಳೆಂದು ತೆಲುಗು ಅಭಿಮಾನ ಹಿಡಿಯಿತು. ಉತ್ತರದಲ್ಲಿ ಇದ್ದವರು ರಾಠೋಡನೆಂಬ ಹೆಸರಿನಲ್ಲಿ ರಾಜಪೂತರೆನಿಸಿಕೊಂಡು ಕಂನುಡಿಗೆ ಬೆನ್ನು ತೋರಿದರು. ಮರಾಠರಲ್ಲಿ ಕೆಲವು ಲಾಡರಿದ್ದರೂ ವಿಶೇಷ ಜನವಿಲ್ಲ. ರಟ್ಟರಬಗೆಗೆ ಮರ್ಹಾಟಿಯಲ್ಲಿ ಆದರದ ಪಡೆನುಡಿಯಿಲ್ಲ. ರಾಠವೆಂಬ ಒಂದು ಪದವು ಅಸಂಸ್ಕೃತ, ತುಂಟವೆಂಬರ್ಥದಲ್ಲಿ ಬಳಕೆಯಲ್ಲಿದೆ.

ಕಂನಾಡಿನ ಅನೇಕ ಜಮೀನದಾರರೂ ಜಹಗೀರದಾರರೂ ದೇಸಾಯರೂ ರಡ್ಡಿಗಳಾಗಿದ್ದಾರೆ. ಈ ನಾಡಿನ ಪ್ರಾಚೀನ ಪರಂಪರೆಯ ಮಹತ್ವದ ಕುರುಹು. ತಮ್ಮ ಜ್ಞಾನ ಧೈರ್ಯ, ಸಾಹಸ, ಔದಾರ್ಯ, ವ್ಯವಹಾರ ಕೌಶಲ್ಯಾದಿಗಳ ಬಲದಿಂದ ಭಾರತದ ಇತಿಹಾಸದಲ್ಲಿ ಕಂನಾಡಿಗೆ ಯಾರು ಮರ್ಯಾದೆ ಮಹತ್ವಗಳನ್ನು ತಂದು ಕೊಟ್ಟಿದ್ದರೋ ಆ ರಾಷ್ಟ್ರಕೂಟರ ಉತ್ತರಾಧಿಕಾರವು ಇಂದಿನ ನಮ್ಮ ನಾಡಿನ ರಡ್ಡಿಗಳಗೆ ಬರುತ್ತದೆ. ಇವರೆ ನಮ್ಮ ನಾಡಗೌಡರು; ಪಟ್ಟೆಲರು. ವೀರಶೈವವೆಂಬುದು ಧರ್ಮದ ಹೆಸರು. ನಾಡವರು ಅಥವಾ ರಡ್ಡಿಗಳೆಂಬುದು ಜನವಾಚಕ ಹೆಸರು.

ಕಂನಾಡತಾಯ ಮಕ್ಕಳು ಈ ವರೆಗೆ ತಮ್ಮ ತಾಯನ್ನು ಮರೆತರು. ಕಂನಾಡಿನಲ್ಲಿ ಹುಟ್ಟಿ, ಕಂನಾಡ ಅನ್ನದಿಂದ ಬೆಳೆದರೂ ಈ ಭಾಷೆಗೆ ಕೃತಜ್ಞರಾಗಲಿಲ್ಲ. ಪರಭಾಷೆಗೆ ಒಲಿದು ಅದನ್ನೇ ತಮ್ಮದನ್ನಾಗಿ ಮಾಡಿಕೊಂಡು ಅದಕ್ಕೇ ಪ್ರೋತ್ಸಾಹವನ್ನೀವ ಕೆಲಸವು ಈ ದೇಶದಲ್ಲಿ ಬಹುಕಾಲದಿಂದ ನಡೆಯುತ್ತ ಬಂದಿತು. ಕರ್ನಾಟ ರಮಾರಮಣ, ಕರ್ನಾಟ ಸಿಂಹಾಸನಾಧೀಶನಾದ ವಿಜಯನಗರದ ಕೃಷ್ಣರಾಜನು ತೆಲುಗಿನ ಭಕ್ತ! ಕಂನಾಡಿನ ಕೊನೆಯ ಸಾಮ್ರಾಜ್ಯದ ಕೊನೆಯ ಮಹಾರಾಜನವರೆಗೂ ಇದೇ ಹಾಡು!

ಈ ಅವಸ್ಥೆಯಲ್ಲಿಯೂ ಕಂನುಡಿಯು ಬದುಕಿಕೊಂಡು ಬಾಳಿತು; ಇದೇ ಸೋಜಿಗ! ನಾಡಿನ ಕೀಳ್ಮೆ ಹಿರಿಮೆಗಳ ಪರಿಣಾಮವು ಆ ನುಡಿಯ ಮೇಲೂ ಆಗುತ್ತಿರುತ್ತದೆ ಮೂಲತಃ ಹಿರಿದಾದ ಅರ್ಥಶಕ್ತಿಯಿರುವ ಕಂನುಡಿಯು ಅಪದೆಸೆಯ ಕಾಲದಲ್ಲಿ ಅದರ ಅರ್ಥಶಕ್ತಿಯೂ ಬಡವಾಯಿತು. ತೀರ ಕೆಳಗಿನ ಮಟ್ಟಕ್ಕೆ ಇಳಿದಿತು. ಹಿರಿದಾದ ಅರ್ಥದಲ್ಲಿ ಪರಭಾಷೆಯ ಪದಗಳು ಮುಂದೆ ಬಂದುವು. ಸಂಕುಚಿತಾರ್ಥ, ಅಪಾರ್ಥದಲ್ಲಿ ಕಂನುಡಿಯ ಮಾತುಗಳು ವ್ಯವಹರಿಸಲಾರಂಭಿಸಿದುವು. ಪಟ್ಟಿ, ಪಾಡಿಗಳೆಂಬ ನಮ್ಮ ಊರ ಮತ್ತು ಜನಗಳ ಹೆಸರನ್ನು ಕೂಡ ಹೊಸಗನ್ನಡದಲ್ಲಿ ಹೇಳಬೇಕಾದರೆ ನಾಚಿಕೆ, ಕೀಳಭಾವವು ಬಂದಿತು! ಈ ಸಂದರ್ಭದಲ್ಲಿ ನನಗೆ ಮತ್ತೆ ಮಿಲ್ಟನ್ ಮಹಾಕವಿಯ ಮಹಾವಾಕ್ಯದ ನೆನಪಾಗುತ್ತದೆ

I am much more inclined to believe that the downfall of a dominion and humiliation of its high estate will ensue when the essential rightness of language falls into disrepute. Is it not as plain as can be that when the verbal curruncy is cheapened and debased its image and superscription obliterated and forgotten, the minds of an abjectly passive and spiritless people are already ripe for slavery of some sort? On the other hand, never have we herd that any state or empire did not prosper at least moderately, as long as its zeal for exactness and grace of speach endured.

ನಾಡಿನ ಜನಗಳಿಗೆ ತಮ್ಮ ನಾಡನುಡಿಯಲ್ಲಿ ಹೆಮ್ಮೆ ಹಿಗ್ಗುಗಳು ಕಡಿಮೆಯಾಗುವುದು ಆ ನಾಡಿನ ಅಧೋಗತಿಯ ಪೂರ್ವಸಿದ್ಧತೆ ಇದು ಕಂನಾಡ ಮೊದಲಿಗರಲ್ಲಿ ಎಂದಿನಿಂದಲೇ ನಡೆದುಹೋಗಿತ್ತು. ದೇವ ಭಾಷೆ, ಧರ್ಮಭಾಷೆ, ರಾಜಭಾಷೆ ಎಂದು ಮುಂತಾಗಿ ಕಂನುಡಿಯಲ್ಲದ ಮಾತಿಗೇ, ಕಾಲಕಾಲಕ್ಕೆ ಮಹತ್ವವು ಬಂದಿತು; ಬಂದಿದೆ. ಕಂನುಡಿಗೆ ಗೌಣ ಸ್ಥಾನದಲ್ಲಿಯೆ ಇರಬೇಕಾಯಿತು. ಅದರ ಫಲವೇ ನಮ್ಮ ಇಂದಿನ ಗೌಣ ಸ್ಥಿತಿ.

ಜನಗಳಿಗೆ ತಮ್ಮ ನಾಡಿನ, ನುಡಿಯ ನಿಜಸ್ವರೂಪದ ತಿಳುವಳಿಕೆಯೂ ಈ ವರೆಗೆ ಅವಶ್ಯವೆನಿಸಿರಲಿಲ್ಲ. 'ಕನ್ನಡ' ವೆಂಬುದು ಮೂಲದಲ್ಲಿ ದೇಶದ ಹೆಸರೊ ಭಾಷೆಯ ಹೆಸರೊ ಎಂಬುದೂ ಮರೆತುಹೋಗಿತ್ತು! ರಾಮ್ಯಾ, ಬಶ್ಯಾ ಎಂದು ಬಹಳ ದಿನಗಳಿಂದ ಕರೆಯಿಸಿಕೊಳ್ಳುತ್ತಿದ್ದವನಿಗೆ ರಾಮ, ಬಸವಂತನೆಂದು ಯಾರಾದರೂ ತಿದ್ದಿ ಹೇಳಿದರೂ ಆತನಿಗೆ ತನ್ನ ಹೆಸರು ರಾಮ, ಬಸವಂತನೆಂದು ಸರಿಯಾಗಿ ಹೇಳಲೂ ಸಂಕೋಚವೆನಿಸುವಂತಾಗಿದೆ ನಮ್ಮ ನಾಡಿಗರ ಪಾಡು. ನಮ್ಮ ನಾಡು, ನುಡಿಗಳ ಶುದ್ಧ ಅರ್ಥವತ್ತಾದ ರೂಪಗಳನ್ನು ಬಳಸುವುದಕ್ಕೂ ಮನಸಿನ ಸಿದ್ಧತೆಯಾಗಬೇಕಾಗಿದೆ ಇನ್ನೂ! ಇಂತಿದು ಆರ್ಯರು ಗೆದ್ದು ಸೋತ, ಕಂನಾಡ ಮೊದಲಿಗರ ಸೋತು ಗೆದ್ದ ಸಂಕ್ಷಿಪ್ತ ಕತೆ.

---

## ಗೊನೆ

ತಮ್ಮತನವನ್ನು ಅರಿತು ಆಚರಿಸಿದರೆ ಕಂನಾಡವರ ಭವಿಷ್ಯವು ಉಜ್ವಲವಾಗದೆ. ಹಿಂದಿನದೆಲ್ಲ ಆಯ್ತು; ಹೋಯ್ತು. ಅದರಿಂದ ಬುದ್ಧಿ ಗಳಿಯಬೇಕಲ್ಲದೆ ಮಿಡುಕುವುದರಲ್ಲಿ ಕಾಲ ಕಳೆಯಲಾಗದು. ಇಂದಿನ ತೊಡಕಿನ ಕಾರಣಪರಂಪರೆಗಳು ತಿಳಿಯದೆ ನಾಳಿನ ನಡೆಯ ಬಗೆಯನ್ನು ನಿರ್ಧರಿಸಿಕೊಳ್ಳಲು ಸಾಧ್ಯವಿಲ್ಲ. ಇಂದಿನ ತೊಡಕಿನ ಕಾರಣ ವಿಮರ್ಶೆಗೆ ನಿನ್ನೆಯ ಸ್ಥಿತಿ ತಿಳಿಯಬೇಕಾಗುತ್ತದೆ. ಅದಕ್ಕಾಗಿ ಈ ಕತೆ. ಯಾವ ಸಂಗತಿಯೂ ಸಂಪೂರ್ಣ ಹಿತಕಾರಿ, ಅಥವಾ ಅಹಿತಕಾರಿ ಎಂದು ಹೇಳಲಿಕ್ಕಾಗುವುದಿಲ್ಲ. ಪ್ರತಿಯೊಂದು ವಸ್ತುವೂ ಸಂಮಿಶ್ರವಾದುದು. ಆದರೆ ಮಿತಿಯನ್ನು ಅರಿತು ಯಾವುದರಿಂದಲೂ ಜಾಣರಾದವರು ತಮ್ಮ ಕಲ್ಯಾಣವನ್ನು ಮಾಡಿಕೊಳ್ಳಬಲ್ಲರು. ತ್ರಿಕಾಲಾಬಾಧಿತವೆಂಬ ಸಂಗತಿಗಳು ಈ ವಾಸ್ತವ ಲೋಕದಲ್ಲಿ ಯಾವುವೂ ಇಲ್ಲ. ಕಾಲಕಾಲಕ್ಕೆ ಮಾರ್ಪಡದೆ ಇದ್ದುದು ಬಾಳಲು ನಿರುಪಯುಕ್ತವಾಗುತ್ತದೆ.

ಏನಿದ್ದ ಒಳ್ಳೆಯತನ, ಹಿರಿಮೆ, ಹೆಚ್ಚುಗಳೆಲ್ಲವೂ ಹಿಂದೆ ಇದ್ದಿತು, ಎಂದು ಒರಗುಮೋರೆಮಾಡಿಕೊಂಡು ಉಸಿರುಗರೆವವರಿಗೆ ಉಜ್ವಲಭವಿಷ್ಯ

ವೆಂಬುದಿಲ್ಲ. ಅವರಿಗೆ ಬದುಕುವ ಹಕ್ಕೂ ಇಲ್ಲ ಹಳೆಯದೆಲ್ಲವನ್ನೂ ಹೊಲ್ಲವೆಂದು ತೆಗಳಿ ತಾವೇ ತಿಳಿದವರೆಂಬಂತೆ ಉರಿದಾಡಿ ಮಾತನಾಡು ವವರು, ನಿನ್ನೆಯೊಳಗಿನ ಒಳ್ಳೆಯುದಕ್ಕೆ ಎರವಾಗುವ ಹುಂಬತನವನ್ನು ಮಾಡುತ್ತಾರೆ. 'ಹಿಂದಿನದು ಯಾವುದೂ ಬೇಡ; ನಾವೇ ಎಲ್ಲವನ್ನೂ ಕಟ್ಟೋಣ' ಎಂದೆಂಬುದು ಅವಿವೇಕಿಗಳ ಕೂಗು. ಹೀಗಾದಲ್ಲಿ ಯಾವ ಪ್ರಗತಿಯೂ ಸಾಧ್ಯವಿಲ್ಲ. ಹಿಂದಿನ ತಲೆಮಾರಿನವರು ಕಾಯ್ದು ತಂದ ಸಂಸ್ಕೃತಿ, ವಿದ್ಯೆಗಳೊಳಗಿನ ಉಪಯುಕ್ತ ಭಾಗಗಳನ್ನು ಸ್ವೀಕರಿಸಿ ಅಳ ವಡಿಸಿಕೊಂಡು ಮುನ್ನಡೆಯಬೇಕಲ್ಲದೆ ಅದೆಲ್ಲವನ್ನೂ ಅಲ್ಲಗಳೆದರೆ ಅದು ಪ್ರಗತಿಯೆನಿಸದು ನಿನ್ನೆಯನ್ನು ಲೆಕ್ಕಕ್ಕೆ ಹಿಡಿಯದವನು ಪ್ರಗತಿಶೀಲ ನಾಗಲಾರನು. ಏಕೆಂದರೆ ನಿನ್ನೆಯ ತಪ್ಪು-ಒಪ್ಪುಗಳ ಲಾಭವನ್ನು ಪಡೆದೇ ಇಂದಿನ ಜ್ಞಾನಸಿದ್ಧಿಯಾಗಿರುತ್ತದೆ.

ಕಂನಾಡವರ ನಡೆವಳಿ, ನುಡಿವಳಿಗಳ ಹಿಂದೆನಿಂತು ಅವರಿಂದ ಕೆಲಸ ಮಾಡಿಸುವ ಅವರ ಸಾರಭೂತವಾದ ಗುಣವು ಆವುದು? ಇವರ ಸಂಸ್ಕೃತಿಯ ತಿರುಳಾವುದು? ಇವರಲ್ಲಿ ನರನರಗಳಲ್ಲಿ ಮಿಡಿವ ಶಕ್ತಿಯು ಯಾವುದು? ಯಾವ ಗುಣದ ಮೂಲಕ ಇವರು ಒಂದು ಕಾಲಕ್ಕೆ ಸಾಮ್ರಾಜ್ಯಗಳನ್ನು—ಒಂದಲ್ಲ ಕನಿಷ್ಠ ಐದು ಮಹಾರಾಜ್ಯಗಳನ್ನು ಇತಿಹಾಸ ಕಾಲದಲ್ಲಿ—ಕ್ರಿಸ್ತಾಬ್ದದ ಆರಂಭದಿಂದ ೧೬ನೆಯ ಶತಮಾನದವರೆಗೆ ಎಡೆಬಿಡದೆ ಆಳಿದರೋ ಆ ಗುಣದ ಹೆಸರೇನು? ಆ ಗುಣವು ಈಗಲೂ ಉಂಟೆ? ಏಳ್ಗೆಯ ಆಸೆಯು ಇರುವುದೆ?

ಸಾಮಾನ್ಯವಾದ ಗುಣವನ್ನು ಎತ್ತಿಹೇಳುವಾಗ ಒಂದು ತೊಂದರೆ ಯಿದೆ. ಅದು ಅಲ್ಲವೆಂದು ಪ್ರತಿಪಾದಿಸಲೂ ಅವಕಾಶವಿರುತ್ತದೆ. ೧॥ ಅಡಿಗೆ ಒಂದು ಮೊಳ ಎಂದು ಸಾಮಾನ್ಯವಾಗಿ ಹೇಳಿದರೆ ತೀರ ಸರಿಯಾಗಿ ೧॥ ಅದೆ (೧೮ ಇಂಚು) ಉದ್ದವಿರುವ ಮೊಳದವರು ಏಸು ಜನವೋ? ಒಬ್ಬರದು ಒಂದೆರಡು ಇಂಚು ಕಡಿಮೆ ಇದ್ದರೆ ಇನ್ನೊಬ್ಬರದು ಅಷ್ಟು ಹೆಚ್ಚು ಇರುವುದು. ಸರಾಸರಿ, ಸಾಮಾನ್ಯವೆಂಬುದು ಕೆಲವೆಡೆಗಳಲ್ಲಿ ತೀರ ವಾಸ್ತವವಲ್ಲವೆನಿಸಿದರೂ ತಾತ್ವಿಕ ಸತ್ಯವಿದು.

ಕಂನಾಡವರ ಗುಣವಿಶೇಷವನ್ನು ಕಂಡು ಹಿಡಿದ ಶ್ರೇಯಸ್ಸು

ಸಂಪೂರ್ಣವಾಗಿ ಕವಿರಾಜಮಾರ್ಗದ ಕರ್ತೃವಿಗೇ ಸಲ್ಲುತ್ತದೆ. ಹಿಂದೆ ಉದಾಹರಿಸಿದ ಪದ್ಯದಲ್ಲಿ 'ಸುಭಟರ್ಕಳ್' ಎಂದು ಇವರನ್ನು ವರ್ಣಿಸಿದ್ದಾನೆ. ಈ ವೀರದ ಮೂಲಭೂತ ಸ್ವಭಾವವು ಉತ್ಕಟತೆ ಅಥವಾ ಅತಿಶಯತೆಯಾಗಿದೆ. ಇದು ಕರ್ಣಾಟಕ ಭೂಮಿಯ ವೈಶಿಷ್ಟ್ಯ. 'ದೋಣಿ ಬೆಳೆದರೆ ಓಣಿಯೆಲ್ಲ ಕಾಳು'. ಕರಾವಳಿಯಲ್ಲಿ ಸೃಷ್ಟಿಸೌಂದರ್ಯದಲ್ಲೂ ಇದೇ ಬಗೆ. ನೆಲದ ಗುಣವೆ ನಾಡಿಗರಲ್ಲೂ ಒಡಮೂಡುತ್ತದೆ.

ಉತ್ಕಟ ಭಾವವು ಯಾವಾಗಲೂ ಆವೇಶ, ಉತ್ಸಾಹದಿಂದ ಒಡಗೂಡಿರುತ್ತದೆ. ಇವು ಒಂದರಿಂದೊಂದು ದೂರವಲ್ಲ. ಈ ಉತ್ಕಟತೆಯು ಲೋಕವ್ಯವಹಾರದಲ್ಲಿ ವೀರದ ಕಡೆಗೆ ಒಲಿದರೆ, ಆಧ್ಯಾತ್ಮದಲ್ಲಿ ಭಕ್ತಿಯ ರೂಪ ತಾಳುವುದು. ಸಾಹಿತ್ಯ ಕಲೆಯಲ್ಲಿ ಭವ್ಯತೆಯನ್ನು ತೋರುವುದು. ಕವಿರಾಜಮಾರ್ಗದ ಕರ್ತೃವು (೮೧೫ ಕ್ರಿ. ಶ.) ನೃಪತುಂಗನ ಆಸ್ಥಾನದಲ್ಲಿದ್ದುದರಿಂದ ಜೋಳದ ಪಾಳಿಗಾಗಿ ಈ ಜನಗಳನ್ನು 'ಸುಭಟರ್ಕಳ್' ಎಂದು ಹೊಗಳಿರಬೇಕು; ಅದು ಮುಖಸ್ತುತಿಯ ಮಾತು, ಎಂದು ಕೆಲರು ಆಕ್ಷೇಪಿಸಲು ಅವಕಾಶವಿದೆ. ಆದರೆ ೧೦ನೆಯ ಶತಮಾನದ ರಾಜಶೇಖರನೆಂಬ ಕವಿಯು ಕರ್ಣಾಟಕ ರಾಯರ ಆಶ್ರಯದಲ್ಲಿದ್ದವನಲ್ಲ. ಆದರೂ ಆತನು 'ಸಮರ ಕರ್ಮಣಿ ನಿಸರ್ಗೋದ್ಭಟಾಃ ಕರ್ಣಾಟಾಃ'; 'ಅಖಂಡಿತ ಪುರುಷಾಕಾರಾಃ ಕರ್ಣಾಟಾಃ' ಎಂದು ಮುಂತಾಗಿ ವರ್ಣಿಸಿದ್ದಾನೆ.

ಇಂತಹ ಮನಸಿನ ವೀರವೃತ್ತಿಯಲ್ಲಿ ಮೆಚ್ಚಿಕೆಯಿರುವ ಈ ಜನಗಳಿಗೆ ಮಹಾವೀರನ ಧರ್ಮದಲ್ಲಿ ಆಸಕ್ತಿಯುಂಟಾಗುವುದೇನು ಸೋಜಿಗ ? ಕರ್ಣಾಟಕವು ಜೈನ ಧರ್ಮದ ತವರ್ಮನೆಯೆನಿಸಲು ಕಾರಣವೇನೆಂಬುದು ಇಲ್ಲಿ ಸ್ಪಷ್ಟವಾಗುವುದು. ವೀರಶೈವ, ವೀರವೈಷ್ಣವ ಪಂಥಗಳ ನೆಲೆವೀಡೂ ಕರ್ಣಾಟಕವೇ. ಮಹಾರಾಷ್ಟ್ರದಲ್ಲಿ ಇವು ಅಷ್ಟು ಬೇರು ಹಿಡಿಯಲಿಲ್ಲ ಇದರಿಂದ ಎರಡೂ ಪ್ರಾಂತಗಳ ಮನಸ್ಥಿತಿಯಲ್ಲಿರುವ ವ್ಯತ್ಯಾಸವು ಸ್ಪಷ್ಟವಾಗುತ್ತದೆ.

ಕಲೆಯಲ್ಲಿಯ ಭವ್ಯತೆಗೆ ಶ್ರವಣಬೆಳುಗೊಳ, ಕಾರ್ಕಳಗಳ ಗೊಮ್ಮಟೇಶ್ವರರು ಸಾಕ್ಷಿ. ಬಾದಾಮಿಯ ಗುಡ್ಡವನ್ನೆ ಕಡೆದ ಗವಿಯ ಶಿಲ್ಪವು, ಕಾರ್ಲೆಯ ಚೈತ್ಯಾಲಯವು ಎಲ್ಲೂರಿನ ಕೈಲಾಸ ದೇವಾಲಯ, ಅಜಂತೆಯ

ಚಿತ್ರಕಲೆ, ಪಟ್ಟದಕಲ್ಲು, ಹಳೇಬೀಡು ಮೊದಲಾದ ಕಡೆಯ ಗುಡಿಗಳು, ಬಸದಿಗಳೂ ಕನ್ನಾಡ ಶಿಲ್ಪಕಲೆಯ ಉದಾತ್ತ ಭವ್ಯ ಸ್ವರೂಪಕ್ಕೆ ನಿದರ್ಶನ.

ಸಾಹಿತ್ಯದಲ್ಲೂ ಹಾಗೆಯೆ. ಚಂಪೂ ಮಹಾಕಾವ್ಯ, ಮಹಾಪುರಾಣಗಳನ್ನು ನಿರ್ಮಿಸುವ ಹಂಬಲವೇ ಹಂಬಲ. ದೇಶಭಾಷೆಯ ವ್ಯಾಕರಣವನ್ನು ಸಂಸ್ಕೃತದಲ್ಲಿ ಬರೆವ ಉತ್ಕಟತೆಯನ್ನು ವಿಶೇಷವಾಗಿ ಕನ್ನಾಡಿನಲ್ಲಿಯೆ ಕಾಣಬಹುದು. 'ಕವಿಚಕ್ರವರ್ತಿ', 'ಕವಿಸಾರ್ವಭೌಮ' ನೆಂಬ ಬಿರುದನ್ನು ಪಡೆವ ಹಂಬಲವು ನಮ್ಮ ಕವಿಗಳಿಗೆ. 'ಕರ್ಣಾಟರಾಜಪ್ರಿಯೆ'ಯ ಆತ್ಮವಿಶ್ವಾಸದ ಮಾತುಗಳಲ್ಲಿ ಕಾಣಿಸಿಕೊಳ್ಳುವ ವೀರವು ಯಾರನ್ನಾಗಲಿ ಬೆರಗುಗೊಳಿಸದೆ ಇರದು: "ವ್ಯಾಸ ವಾಲ್ಮೀಕಿಗಳನ್ನು ಬಿಟ್ಟು ಇನ್ನುಳಿದವರು ಯಾರಾದರೂ ಕವಿಗಳೆಂದು ನನ್ನೆದುರು ಬಂದರೆ ಅವರ ನೆತ್ತಿಯ ಮೇಲೆ ನನ್ನ ಎಡಗಾಲನಿಡುವೆನು! ಭಾಸ, ಭವಭೂತಿ ಕಾಲಿದಾಸಾದಿಗಳನ್ನೂ ಲೆಕ್ಕಿಸದ ಅಭಿಮಾನದ ಈ ದರ್ಪದ ಮೂಲವು, ಮೇಲೆ ವಿವರಿಸಿದ ಕನ್ನಾಡ ನೆಲದ ಗುಣದ ಆ ಉತ್ಕಟ ಭಾವನೆಯಲ್ಲಿಯೆ ಇದೆ. ಇದು ಒಬ್ಬ ಹೆಣ್ಣುಮಗಳು—ರಾಜಕನ್ಯೆಯಾಡುವ ರೀತಿ!

ಮನಸಿನ ಈ ಉತ್ಕಟ ಭಾವನೆ—ಅತಿಶಯತೆ—ಏಕಾಂತಿಕತೆ—ಅತಿರೇಕವು, ವಿಚಾರ-ವಿವೇಕದ ಬೆಂಬಲದಿಂದ ಮುಂದೆ ಸಾಗಿದ್ದಾಗ ಲೋಕವೆ ಬೆರಗಾಗುವಂತಹ ಅದ್ಭುತ ಸಾಹಸಾದಿಗಳನ್ನು ನೆರವೇರಿಸಬಲ್ಲುದು. ಮಾತು ಮಾತಿಗೂ ಎಣಿಕೆ, ವಿಚಾರ ಮಾಡುತ್ತ ಕೂಡುವವರಿಂದ ಯಾವ ಅತಿಶಯದ ಹಿರಿಗೆಲಸವೂ ಆಗದು. ಇಂಗ್ಲಿಷ್ ಮತ್ತು ಜರ್ಮನ್ ಸ್ವಭಾವದಲ್ಲಿ ಈ ಅಂತರವನ್ನು ಚೆನ್ನಾಗಿ ಮನಗಾಣಬಹುದು. ಇಂಗ್ಲಿಷರು ವಿವೇಕಿಗಳಾದರೆ ಜರ್ಮನರು ಸಾಹಸಿಗಳು.

ಇವೆರಡೂ ಗುಣಗಳು ಒಂದುಗೂಡಿದಲ್ಲಿ ಬಾಳಿನಲ್ಲಿ ಹೆಚ್ಚಳವು ನಿಶ್ಚಿತ. ವಿಚಾರ ಅಥವಾ ವಿವೇಕವೆಂಬುದು ಹೆಳವ; ಉತ್ಕಟತೆ, ಅಥವಾ ತೀವ್ರ ಮನೋಭಾವನೆಯು ಕುರುಡ. ವಿವೇಕದ ಕಣ್ಣೂ, ಉತ್ಕಟತೆಯ ಉತ್ಸಾಹದ ಪ್ರಚೋದಕ ಶಕ್ತಿಯೂ ಕೂಡಿ ನಡೆದಲ್ಲಿ ಪ್ರಗತಿಗೆ ತಡೆಯಿಲ್ಲ. ಕವಿರಾಜಮಾರ್ಗದ ಕವಿಯು 'ವಿವೇಕಿಗಳ್ ನಮ್ಮ ನಾಡವರ್ಗಳ್' ಎಂದು

ಕೊನೆಗೊಂದು ಮಾತನ್ನು ಈ ಪದ್ಯದಲ್ಲಿ ಹಾಕಿದ್ದಾನೆ. ಚಲುಕ್ಯ, ರಾಷ್ಟ್ರಕೂಟರ ವರೆಗಿನ ಕಂನಾಡು ಏಳ್ಗೆಯಲ್ಲಿ ಇದ್ದುದರ ರಹಸ್ಯವು ಅಲ್ಲಿ ತಿಳಿದುಬರುತ್ತದೆ.

ಹೆಳವನಾದರೂ ಅರುಣನನ್ನು, ಸೂರ್ಯನಂತಹ ತೇಜಸ್ವಿಯು ಕೂಡ ತನ್ನ ಸಾರಥಿಯೆಂದು ಸ್ವೀಕರಿಸಿದ್ದಾನೆ, ಎಂಬ ಈ ಪರಂಗರಾಗತವಾದ ಸಾಂಕೇತಿಕ ಭಾಷೆಯು ಬಹಳ ಅರ್ಥಗರ್ಭಿತವಾಗಿದೆ ಭಕ್ತಿಪಂಥದ ಆವೇಶದಲ್ಲಿ ನಮ್ಮ ಜನಗಳು ಬುದ್ಧಿಯನ್ನು ಕಡೆಗಣಿಸಿದರು. ಬುದ್ಧಿ ವಿಕಾಸವು ಮುಕ್ತಿ ಸಾಧನೆಗೆ ಅಡ್ಡವಾಗುವದೆಂಬ ಕಲ್ಪನೆಯು ಬಲವಾಯಿತು. ಇದುವೆ ಜನಗಳ ಅವನತಿಗೆ ಕಾರಣವಾಯಿತು.

ಸುಮಾರು ೨೦ನೆಯ ಶತಮಾನದ ಮಧ್ಯದ ವರೆಗೆ ನಮ್ಮ ನಾಡು ಕಗ್ಗತ್ತಲೆಯಲ್ಲಿ ಬಿದ್ದುಕೊಂಡಿದ್ದಿತೆನ್ನಲು ಅಡ್ಡಿಯಿಲ್ಲ. ಕಂನಾಡು, ಕಂನಡ ಹೋಗಲಿ, ಕರ್ಣಾಟವೆಂಬ ಹೆಸರು ಸಹ ಪರಪ್ರಾಂತೀಯರಿಗೆ ಅರಿದಾಗಿದ್ದಿತು. ಮೈಸೂರ ಹೊರಗೆ ಕರ್ಣಾಟವುಂಟೆ? ಎಂದು ಸಂದೇಹ ಪಟ್ಟುಕೊಂಡ ಕಾಲವೂ ಆಯಿತು.

ಇದಕ್ಕೆ ನಿಜವಾಗಿಯೂ ದುರ್ಗತಿಯೆನ್ನುವುದಾದರೆ ಇದರ ಆರಂಭವು ಎಲ್ಲಿಂದ ಆಯಿತು? ಏಕಾಯಿತು? ಎಂಬುದನ್ನು ಏಳ್ಗೆಯನ್ನು ಹಾರಯಿಸುವವರು ತಿಳಿಯಲೇ ಬೇಕಷ್ಟೇ? ರಾಷ್ಟ್ರಕೂಟ ೩ನೆಯ ಕೃಷ್ಣನ ಕಾಲವೇ ಕಂನಾಡ ಪರಮಾವಧಿ ಏಳ್ಗೆಯ ಕಾಲವೆಂದು ನನ್ನ ಮತ; ಹೆಚ್ಚಾದರೆ ಕಲ್ಯಾಣ ಚಲುಕ್ಯ ೬ನೆಯ ವಿಕ್ರಮನ ಕಾಲವೆನ್ನಬಹುದು. ವಿಜಯನಗರ ಸಾಮ್ರಾಜ್ಯವು ನಮ್ಮ ಕೊನೆಯ ದೊಡ್ಡ ಸ್ವತಂತ್ರ ರಾಜ್ಯ. ಇದಾದಬಳಿಕ ಸಂಪೂರ್ಣ ಕಗ್ಗತ್ತಲೆಯ ಕಾಲ, ೨೦ನೆಯ ಶತಮಾನದ ಸುಮಾರು ಕಾಲು ಶತಕದ ವರೆಗೂ. ಬಾದಾಮಿಯ ಪುಲಕೇಶಿಯ ಕಾಲದಿಂದ ಎಂದರೆ ಸುಮಾರು ೬ನೆಯ ಶತಮಾನದಿಂದ ೧೦ ಅಥವಾ ೧೧ನೆಯ ಶತಮಾನದ ವರೆಗೆ ನಿಶ್ಚಿತವಾಗಿ ಕಂನಾಡ ವೈಭವ ಕಾಲ; ೧೨ನೆಯ ಶತಮಾನದಿಂದ ೧೬ನೆಯ ಶತಮಾನದವರೆಗೆ ಇಳಿಮುಖವಾದ ಕಾಲ. ೧೬ ರಿಂದ ೨೦ನೆಯ ಶತಮಾನದ ವರೆಗೆ ಅಜ್ಞಾತವಾಸದ ಕಗ್ಗಲೆಯ ಕಾಲ. ಮೇಲೆ ಹೇಳಿದ

ಅವಧಿಗಳಲ್ಲಿ ಏಳ್ಗೆಯಲ್ಲಿ ನಡನಡುವೆ ಸ್ವಲ್ಪ ಕೇಡುಗಾಲ; ಇಳಿಗಾಲದಲ್ಲಿ ಸ್ವಲ್ಪ ಒಳ್ಳೆಯ ಕಾಲ ಬಂದೇ ಬರುತ್ತವೆ. ಇಳಿಗಾಲವು ಒಂದೇ ಸವನೆ ಭರದಿಂದ ಇರುವುದು ಸೃಷ್ಟಿಕ್ರಮವಲ್ಲ. ಮಧ್ಯದಲ್ಲಿ ಎಷ್ಟೋ ಮಹಾಪುರುಷರು ಅವತರಿಸಿದ್ದುಂಟು; ಅವರು ನಮ್ಮ ಇಳಿಗಾಲವನ್ನು ತಡೆದು ಹಿಡಿಯಲು ಹೆಣಗಾಡಿದ್ದುಂಟು; ಕೆಲವೊಂದು ಕಾಲ ಅದರ ಫಲವಾಗಿ ಸ್ವಲ್ಪ ಸುಕಾಲವು ಬಂದಂತಾದುದೂ ಉಂಟು. ರಕ್ಕಸ ತಂಗಡಿಯ ಘೋರ ಕಾಳಗದಲ್ಲಿ ನಿರ್ವಿಣ್ಣರಾಗಿ ನೆಲಕ್ಕುರುಳಿದ ಜನದ ಭಾಷೆ-ಸಂಸ್ಕೃತಿಗಳ ಪ್ರಾಣಗಳನ್ನು ಮೈಸೂರ ಒಡೆಯರು ಕಾಯ್ದುಕೊಂಡು ಬಂದುದೂ ಉಂಟು. ಇದೆಲ್ಲವೂ ನಿಜವಾದರೂ, ಪರಮಾವಧಿಯ ಇಳಿತದ ಕಡೆಗೇ ಒಲವಿದ್ದ ಈ ಕಾಲಕ್ಕೆ ಏಳ್ಗೆಯ ವೈಭವ ಕಾಲವೆಂದು ಕರೆಯಲಿಕ್ಕಾಗುವುದಿಲ್ಲ

ಇಳಿಗಾಲದ ಪಡಿನೆಳಲು ಜನದ ಭಾಷೆ, ಸಾಹಿತ್ಯ, ಕಲೆಗಳು, ನಡೆವಳಿಗಳಲ್ಲೂ ಕಾಣಿಸಿಕೊಳ್ಳುವುದು. ನುಡಿಯೊಳಗಿನ ಬಿಗುವು ಹೋಗುವುದು; ಸಾಹಿತ್ಯದಲ್ಲಿ ಕೃತ್ರಿಮತೆ, ಪರಂಪರಾಪ್ರೀತಿ, ಅತಿಶಯೋಕ್ತಿ ಅಸಂಬದ್ಧತೆಗಳು ಕ್ರಮವಾಗಿ ಹಣೆಯಿಕ್ಕುವುವು. ಪಂಪನಲ್ಲಿ ಕಾಣುವ ವರ್ಣನೆಯ ಔಚಿತ್ಯ, ಹಿತಮಿತವಚನ ಅಪರೂಪದ್ದಾಗುವುದು. ಪಂಪನಲ್ಲಿ ಬಂದ ಸೂಳೆಗೇರಿಯ ವರ್ಣನೆಯಲ್ಲಿರುವ ಸಂಯಮವನ್ನು ಮುಂದೆಮುಂದೆ ಒಬ್ಬಿಬ್ಬರಲ್ಲಿ ಕಾಣಬಹುದು. ಅಂದಿನ ಮಧು ಮಹೋತ್ಸವವು ಇಂದಿನ ಬೀಭತ್ಸ ಕಾಮನ ಹಬ್ಬವಾಗಿದೆ! ಬಾದಾಮಿ ಪಟ್ಟದ ಕಲ್ಲು, ಎಲ್ಲೂರಿನ ಕೆತ್ತನೆಯಲ್ಲಿದ್ದ ಸಹಜ ಮನೋಹರತೆ, ಹಳೇಬಿಡಿನಲ್ಲಿ ಮಾಯವಾಯಿತು. ಮಿತಿಮೀರಿದ ಅತಿಶಯತೆಯು ಅಲ್ಲಿ ತಾನೆತಾನಾಗಿ ಒಡಮೂಡಿದೆ. ಕೆತ್ತನೆಯ ಕೆಲಸವು ತುಂಬ ಸೊಗಸಾಗಿರುವುದೇನೋ ಒಂದು ನಿಜ. ಆದರೆ ಅದರಲ್ಲಿ ಸಂಯಮವು ಉಳಿದಿಲ್ಲ. ಕುಸುರಿ ಮಿತಿಮೀರಿದರೆ ಅದೂ ಹದೆಗೆಡಿಸುವುದು. ಸವಿಯೆಂದು ಕಂಪೆಂದು ಸಕ್ಕರೆ, ಕೇಶರವನ್ನು ಹಾಕುವುದಕ್ಕೂ ಏನಾದರೂ ಅಳತೆ ಕಟ್ಟು ಇರಲೆ ಬೇಕಷ್ಟೇ. ಕನ್ನಾಡವರ ಜೀವನದೊಳಗಿನ ಸಂಯಮದ ಬಾಗವು ಸಡಿಲಾಗುತ್ತ ನಡೆದುದರ ಕುರುಹು ಇದು. ಮದುವೆ ಮುಂಜಿ ಮೊದಲಾದವುಗಳಲ್ಲಿ ಆಡಂಬರಕ್ಕೆ ಬಂದ ಮಹತ್ವ, ಸಾಲ ಮಾಡಿಯೂ ಭೂರಿ, ಶ್ರಾದ್ಧ ಮೊದಲಾದವುಗಳಲ್ಲಿ ನಡೆವ ದುಂದು,

ಮೊದಲಾದುವೆಲ್ಲ ಜೀವವದಲ್ಲಿ ವಿವೇಕಕ್ಕೆ, ಸಂಯಮಕ್ಕೆ ಸ್ಥಾನವಿದ್ದುದರ ಲಕ್ಷಣಗಳೆಂದು ಹೇಳಲಿಕ್ಕಾದೀತೆ ?

ಹಿರಿದಾದ ಮಿಗಿಲಾದ ಗುರಿಯು ಕಣ್ಣೆದುರು ಇಲ್ಲದಾಗ ವೀರ, ಸಾಹಸ ಅಥವಾ ಉತ್ಕಟತೆಯು ಜನರನ್ನು ಕ್ಷುದ್ರ ಕಲಹಗಳಲ್ಲಿ ತೊಡಗಿಸುತ್ತದೆ. ಇಂತಹ ಕಾಲದಲ್ಲಿ ವೀರವು ಒರಟು ಹುಂಬತನ, ಔದ್ಧತ್ಯವೆಂದೆನಿಸು ವುದು. ಇವೆಲ್ಲ ನಾಡಿನ ಇಳಿಗಾಲದಲ್ಲಿ ತಲೆದೂರುವ ಅವಗುಣಗಳು. ಸ್ವಾರ ತಂತ್ರ್ಯವು ಬಂದಾಗ ಇದು ಹೀಗಾಯ್ತು. ನಮ್ಮನ್ನು ನಾವು ಎಷ್ಟೋ ಮೇಲುಗಟ್ಟಿಕೊಂಡು ಹೊಗಳಿಕೊಂಡರೂ ಅದಕ್ಕೆ ಬೆಲೆ ಬಾರದು. ಗುಣ ಗಳಿಗೆ ಮೆಚ್ಚಿ ಹೊರನಾಡಿಗರು ಕೊಂಡಾಡುವಂತಾಗಬೇಕು ನಮ್ಮ ನಡೆ ವಳಿ; ಆಗಲೆ ನಾವು ಏಳ್ಗೆಯ ಸರಿದಾರಿಯಲ್ಲಿರುವೆವೆಂದು ಎಣಿಸಲಿಕ್ಕಾದೀತು.

ಇದೀಗ ಭಾರತದಲ್ಲಿ ಸ್ವಾತಂತ್ರ್ಯದ ಹೊಂಬೆಳಕು ಒಡಮೂಡಿದೆ. ಕಂನಾಡವರು ತಮ್ಮ ಗುಣವಿಶೇಷಗಳಿಂದ, ಹಿಂದಿನ ತಮ್ಮ ವೈಭವಕ್ಕೆ ಸಲ್ಲುವ ರೀತಿಯಲ್ಲಿ ಮತ್ತೆ ಭಾರತದ ಏಳ್ಗೆಗೆ ನೆರವಾಗುವ ಸುವರ್ಣ ಸಂಧಿಯು ಒದಗಿದೆ. ತಮ್ಮ ಅಭಿಜಾತ ವೀರ ಸಾಹಸಾದಿ ಗುಣಗಳಿಗೆ ವಿವೇಕ, ವಿಚಾರ ಶಕ್ತಿಯ ನೆರವನ್ನು ಪಡೆದುಕೊಂಡು ಕಂನಾಡ ಸತ್ಕೀರ್ತಿ ಯನ್ನ ಭಾರತದಲ್ಲೆಲ್ಲ ಕೇಳಿಸಲು ಅಣಿಯಾಗುವರಷ್ಟೇ ?

---

# ಉಪಯುಕ್ತವಾದ ಗ್ರಂಥಗಳು

1) Village Hand Boaks of Bombay Presidency Published by the Govt. of Bombay 1943.

1) List of villages in Mysore state.

3) Village Lists of Nizams' Districts.

4) Alphabetical List of Villages in Madras Presidency 1924.

5) ಕರವೀರ ಇಲಾಖ್ಯಾತೀಲ ಗಾಂವವಾರ ಲೋಕಸಂಖ್ಯೇಚೇ ವ ಮಾಹಿತೀಚೇ ಪುಸ್ತಕ ೧೯೧೪ ಖಾನೇಸುಮಾರೀ ಪ್ರಮಾಣೇ.

6) ಸಾಂಗಲಿ, ಮಿರಜಿ, ರಾಮದುರ್ಗ ಮೊದಲಾದ ಸಂಸ್ಥಾನಗಳ ಊರುಗಳ ಕೈಬರಹದ ಪ್ರತಿ.

7) Mysore Gazetteer (New editon) vol, V.

8) South Indian Incriptions; Epigraphia Karnatika; Bombay Karnataka Incriptions vol. I; Inscriptions in Northern Karnatak,

9) Indian Historical quarterly (Calcutta); Indian Culture (Calcutta); Annals of Bhandarkar Research Institute (Poona); Annals of Oriental research (Madras); Bombay Royal Asiatic Society Journal;

10) Memoirs of the Archeological Survey of India; Annual Report of Kern Institute;

11) ಕೋಶಗಳು:— ಸಂಸ್ಕೃತ: ಆಪ್ಟೆ; ವಾಚಸ್ಪತ್ಯ; ಮೋನಿಯರ ವಿಲಿಯಂಸ್; ಅಮರ.
ತೆಲಗು: ಪಿ. ಶಂಕರನಾಯಣ;
ತಮಿಳು: Lexicon.
ಕಂನುಡಿ: ಕಿಟೆಲ್; ಕಾರಂತ.
ಮರಾಠಿ: ಮಹಾರಾಷ್ಟ್ರ ಶಬ್ದಕೋಶ.

12) Studies in history of Indian plants.
i. Antiquity of jawar (B. C. 200 to A D. 1850)
ii. ,, ,, By P. K, Gode

13) Rashtrakutas and their times. By Dr. Altekar.

14) Hindu Polity, By K. P. Jayaswal,

15) Linguistic Survey of India vol I & IV.

16) ಕನ್ನಡದ ನೆಲೆ.

17) ಕರ್ಣಾಟಕದ ವೀರಕ್ಷತ್ರಿಯರು.

18) ಶಬ್ದಮಣಿದರ್ಪಣ ಮುಂ.

## ಇದೇ ಗ್ರಂಥಕಾರರ ಬೇರೆ ಕೆಲವು ಪ್ರಕಟನೆಗಳು

| | |
|---|---|
| ಕರ್ಣಾಟಕದ ವೀರಕ್ಷತ್ರಿಯರು (೨ನೆಯ ಆವೃತ್ತಿ) ಅಥವಾ ಹಟ್ಟಿಕಾರರು | |
| ಕಂನಡದ ನೆಲೆ | ೨--- ೦—೦ |
| ಶಿವರಹಸ್ಯ (ಆವೃತ್ತಿ ೨) | ೧— ೪—೦ |
| ಕಂನಡಿಯ ಹುಟ್ಟು (ಆವೃತ್ತಿ ೨) | ೧—೧೨—೦ |
| ಕಂನಡಿಯ ಜೀವಾಳ | ೩— ೮—೦ |
| ಕರ್ಣನ ಮೂರು ಚಿತ್ರಗಳು | ೧— ೪—೦ |
| ಅಗ್ನಿವಿದ್ಯೆ | ೦— ೯—೦ |
| ದಾರಿಯ ಬುತ್ತಿ | ೦— ೪—೦ |

ಉಪನಿಷದ್ರಹಸ್ಯ

**ಬೇಗನೆ ಪ್ರಕಟವಾಗಲಿದೆ.**

ಸಮಾಜವಿಚಾರ